ॐ

. श्रीमच्छङ्कर भगवत्पादाचार्य विरचित

# विज्ञान नौका



कन्नड अनुवाद कर्ता

शिवानन्दसुब्रह्मण्य शास्त्री (मैसूरु)



ಶ್ರೀಮಚ್ಛಂಕರ ಭಗವತ್ಪಾದಾಚಾರ್ಯ ವಿರಚಿತ

# ವಿಜ್ಞಾನನೌಕಾ.

ಇದು

ಭಗವಾನ್ ಪಂಡಿತ ಸಾಧುವರ್ಯರ ಹಿಂದೀ ಗ್ರಂಥದ ಭಾಷಾಂತರ.

ಮೈಸೂರು ರಾಜಧಾನಿಯಲ್ಲಿರುವ

**ಶಿವಾನಂದ ಸುಬ್ರಹ್ಮಣ್ಯನಿಂದ**

ರಚಿಸಲ್ಪಟ್ಟು,



ಮೈಸೂರು ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು.



---

1922

(ರಿಜಿಸ್ಟರ್ಡ್)

# ಪ್ರಸ್ತಾವನಾ.

ಶ್ರೀ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಲೋಕಹಿತಾರ್ಥವಾಗಿ ಸೂತ್ರ, ಗೀತಾ, ಉಪನಿಷದಾದಿ ಗ್ರಂಥಗಳಿಗೆ ಭಾಷ್ಯವಂ ರಚಿಸಿ, ಮುಮುಕ್ಷುಗಳ ಕೃತಾರ್ಥತೆಗೋಸ್ಕರ ಸ್ವತಃ ಅನೇಕ ವೇದಾಂತ ಗ್ರಂಥಗಳಂ ರಚಿಸಿರುವದು ಲೋಕಪ್ರಸಿದ್ಧಿಯಾಗಿದೆ. ಅವುಗಳಲ್ಲಿ ಸೂತ್ರರೂಪವಾಗಿ ಒಂಭತ್ತು ಶ್ಲೋಕಗಳುಳ್ಳ "ವಿಜ್ಞಾನ ನೌಕಾ" ಎಂಬ ನಾಮದಿಂದ ಒಂದು ಸಣ್ಣ ಗ್ರಂಥವಿರುವದು. ಅದಕ್ಕೆ ಉತ್ತರದೇಶದಲ್ಲಿ ಸುಪ್ರಸಿದ್ಧ ಭಗವಾನ್ ಪಂಡಿತ ಸಾಧುವರ್ಯರೆಂಬುವರು ಹಿಂದೀ ಜನಗಳ ಅನುಗ್ರಹಾರ್ಥವಾಗಿ ಹಿಂದೀ ಭಾಷೆಯಲ್ಲಿ ಬಹು ಚಮತ್ಕೃತಿಯಾದ ಟೀಕೆಯಂ ರಚಿಸಿ ಪ್ರಸಿದ್ಧಿಪಡಿಸಿದರು. ಆ ಗ್ರಂಥವು ನನ್ನ ಹಸ್ತಗತವಾಗಿ ಶುಭಕೃತು ಸಂವತ್ಸರದಲ್ಲಿ ನನ್ನಿಂದ ಕನ್ನಡದಲ್ಲಿ ಪರಿವರ್ತಿಸಲ್ಪಟ್ಟಿದ್ದಾಗ್ಯೂ ಮುಮುಕ್ಷುಗಳ ಉಪಯೋಗಕ್ಕೆ ತರಲು ಇದುವರಿಗೂ ಅವಕಾಶ ದೊರೆಯದೇ ಹೋಗಿ, ಈಗ ನಮ್ಮ ಶಿಷ್ಯವರ್ಗದವರ ಪ್ರಾರ್ಥನೆಯಿಂದ ಆ ಗ್ರಂಥವು ಮುದ್ರಿಸಲ್ಪಟ್ಟಿತು. ಅದೇ ಈ ಗ್ರಂಥದಲ್ಲಿ ಉಪೋದ್ಘಾತ ಮೊದಲ್ಗೊಂಡು ಜೀವನ್ಮುಕ್ತಿ ವಿದೇಹಮುಕ್ತಿವರಿವಿಗೂ ಮೋಕ್ಷೋಪಯೋಗವಾದ ಸಮಸ್ತ ಪ್ರಕ್ರಿಯೆಗಳೂ ಸುಲಭಶೈಲಿಯಿಂದ ವಿವರವಾಗಿ ಬರೆಯಲ್ಪಟ್ಟಿರುವದು. ಇದು ಮುಮುಕ್ಷುಗಳಿಗೆ ಬಾಲಬೋಧೆಯಾಗಿಯೂ, ಅಭ್ಯಾಸಿಗಳಿಗೆ ಅನುಕೂಲವಾದ ಮನನ ಶಾಸ್ತ್ರವಾಗಿಯೂ, ಅನುಭವಿಗಳಿಗೆ ಸರ್ವವೇದಾಂತ ಸಿದ್ಧಾಂತ ರೂಪವಾಗಿಯೂ ಇರುವದು. ಈ ಗ್ರಂಥವನ್ನು ಆ ಮೂಲಾಂತವಾಗಿ ಚೆನ್ನಾಗಿ ನೋಡಿದರೆ, ಎಂಥವರಿಗೂ ಪರಮಾಶ್ಚರ್ಯವನ್ನುಂಟುಮಾಡದೆ ಇರದು. ಇಂಥಾ ಅದ್ಭುತವಾದ ಗ್ರಂಥಗಳ ರಚನೆಗಳಿಂದ ಶ್ರೀಮದಾಚಾರ್ಯರ ಮಹಿಮೆಯೂ, ತದ್ವ್ಯಾಖ್ಯಾತೃಗಳಾದ ಮಹನೀಯರ ಪ್ರತಿಭಾವೈಭವವೂ ಸಹ, ಲೋಕ ಸಾಧಾರಣವಲ್ಲವೆಂದು ಸಮಸ್ತರಿಗೂ ವಿಜ್ಞಾತವಾಗುವದು. ಮುಮುಕ್ಷುಗಳು ಜನ್ಮ ಮರಣ ದುಃಖಗಳೆಂಬ ಅಲೆಗಳಿಂ ತುಂಬಿರುವ ಈ ಸಂಸಾರಸಾಗರವಂ ದಾಟಿ, ಸರ್ವೋತ್ಕೃಷ್ಟವಾದ ಕೈವಲ್ಯವೆಂಬ ನಿಜಸ್ಥಾನವಂ ಪೊಂದುವದಕ್ಕೆ ಈ ಗ್ರಂಥವು ದೃಢವಾದ ನಾವೆಯಾಗಿರುವದು. ಆದ್ದರಿಂದಿದಕ್ಕೆ 'ವಿಜ್ಞಾನ ನೌಕಾ' ಎಂಬ ನಾಮವುಂಟಾಗಿರುವದು.

ಇದರ ಪ್ರಥಮೋಪದೇಶದಲ್ಲಿ (೨೪) ವಿಷಯಗಳೂ, ದ್ವಿತೀಯೋಪದೇಶದಲ್ಲಿ (೧೭) ವಿಷಯಗಳೂ, ತೃತೀಯೋಪದೇಶದಲ್ಲಿ (೧೧) ವಿಷಯಗಳೂ ಇರುವವು. ಇಷ್ಟೇ ಅಲ್ಲ. ಇವುಗಳ ಗರ್ಭದಲ್ಲಿ ಅನೇಕ ಲಘುವಿಷಯಗಳಿರುವವು. ಅವುಗಳನ್ನೆಲ್ಲಾ ವಿಷಯ ಸೂಚನೆಯಲ್ಲಿ ತೋರಿಸಿದರೆ ಗ್ರಂಥ ಬಾಹುಳ್ಯವಾಗುವದೆಂದು ತಿಳಿದು ಮುಖ್ಯ ವಿಷಯಗಳು ಮಾತ್ರ ವಿಷಯಾನುಕ್ರಮಣಿಕೆಯಲ್ಲಿ ಸೂಚಿಸಿರುವೆನು. ಸಮಸ್ತ ಮುಮುಕ್ಷುಗಳೂ ಈ ಗ್ರಂಥವಂ ಪರಿಗ್ರಹಿಸಿ ಸರ್ವಾನರ್ಥನಿವೃತ್ತಿ ಪೂರ್ವಕ ಪರಮಾನಂದವಂ ಪೊಂದಿ, ಕೃತಾರ್ಥರಾಗಲೆಂಬ ಆಶಯದಿಂದ ಪರಿಶ್ರಮವಂ ಗಣಿಸದೆ ಈ ಗ್ರಂಥವಂ ಬರೆದಿರುವೆನು. ಇದರಲ್ಲಿ ಗೋಚರಕ್ಕೆ ಬಂದ ತಪ್ಪುಗಳನ್ನು ವಿವೇಕಿಗಳು ನೋಡದೆ ಸಾರಗ್ರಾಹಿಗಳಾಗಬೇಕೆಂದು ವಿಜ್ಞಾಪಿಸಿರುವೆನು.

ಈ ಗ್ರಂಥದ ಯಾವ ಸ್ಥಳದಲ್ಲಾದರೂ ಗ್ರಂಥಕರ್ತರ ಸೈನು ಅಥವಾ ಮೊಹರು ಇಲ್ಲದ ಪುಸ್ತಕವನ್ನು ಯಾರು ಪಡೆಯುವರೋ ಅವರು ಕಳುವಿನ ಛಾರ್ಜಿಗೆ ಗುರಿಯಾಗುವರೆಂದು ತಿಳಿಯತಕ್ಕದ್ದು.

ಗ್ರಂಥಕರ್ತ—ಶಿವಾನಂದ ಸುಬ್ರಹ್ಮಣ್ಯ,
(ವೇದಾಂತ ಸುಬ್ಬಯ್ಯ),
ಲಕ್ಷ್ಮೀವಿಲಾಸ ಅಗ್ರಹಾರ, ಮೈಸೂರು.





# ವಿಷಯಾನುಕ್ರಮಣಿಕೆ.





—: ಇತಿ ಪ್ರಥಮೋಪದೇಶಃ :—

## ದ್ವಿತೀಯೋಪದೇಶ



—: ಇತಿ ದ್ವಿತೀಯೋಪದೇಶಃ :—



## ತೃತಿಯೋಪದೇಶ.





ಶ್ರೀ



# ಶಂಕರಾಚಾರ್ಯರ ಸ್ತುತಿ

ಸದಾಶಾಶಚಿದಾನಂದ ಸದೇಕರಸ ರೂಪಿಣೇ।

ನಿತ್ಯಶುದ್ಧನಿರಾಭಾಸ ಕೂಟಸ್ಥಾಯಾತ್ಮನೇನಮಃ ॥

ಆನಂದಘನಮುದ್ವಂದ್ವಂ ನಿರ್ವಿಕಾರಂ ನಿರಂಜನಂ ।

ಭಜೇಹಂ ಭಗವತ್ಪಾದಂ ಭಜತಾಮ ಭಯಪ್ರದಂ ॥

ಓಂ



|| ಶ್ರೀ ಗಣಪತಿ ಶಾರದಾ ಗುರುಭ್ಯೋನಮಃ ||

# ವಿಜ್ಞಾನ ನೌಕಾ

## ||೧|| ಗ್ರಂಥಕರ್ತರ ನಾಮಸಹಿತ ಉಪೋದ್ಘಾತವರ್ಣನೆ.

ಶ್ರೀ ಗಣೇಶಾಯನಮಃ-ಶ್ರೀ ಶಂಕರಾಚಾರ್ಯೇಭ್ಯೋನಮಃ-ಶ್ರೀ ಗುರುದೇವಾಯನಮಃ.

ಅಥ ವಿಜ್ಞಾನನೌಕಾ ಸಟೀಕಾ ಪ್ರಾರಂಭಃ.

(೧) ಈ ವಿಜ್ಞಾನ ನೌಕೆಯು ಕರ್ತರಾದ ಶ್ರೀಮತ್ ಶಂಕರಾಚಾರ್ಯರಿಗೆ ನನ್ನ ನಮಸ್ಕಾರವು. "ಶ್ರೀಮತ್," ಅಂದರೆ—ಬ್ರಹ್ಮವಿದ್ಯಾರೂಪವಾದ ಲಕ್ಷ್ಮಿಯಿಂದ ಶೋಭಾಯಮಾನರಾದವರು. "ಶಂಕರ" ಪದಕ್ಕೆ ಅರ್ಥವೇನೆಂದರೆ—(ಶಂ) ಎಂಬ ನಾಮವು ಸುಖಕ್ಕಾಗಿರುವದು, ಅದನ್ನು ಯಾರು ಉಂಟುಮಾಡುವರೋ, ಅವರು "ಶಂಕರ" ಎನಿಸಿಕೊಳ್ಳುವರು. ಅರ್ಥವೇನೆಂದರೆ ಜಗತ್ತಿಗೆ ಆನಂದವನ್ನುಂಟುಮಾಡುವವರು. ಇದರಿಂದ ಏನು ತಿಳಿಯಪಡಿಸಿದರೆಂದರೆ—ಆರುರುಕ್ಷುಗಳಿಗೆ ವಾಂಛಿತ ಸುಖವನ್ನೀಯುವವರೆಂಬ ತಾತ್ಪರ್ಯ.

(೨) ಇನ್ನು ಆಚಾರ್ಯರೆಂಬವರು ಯಾರೆಂದರೆ—ಶಾಸ್ತ್ರಾರ್ಥಗಳನ್ನು ತಿಳಿದವರಾಗಿಯೂ, ಅನ್ಯಜನಗಳನ್ನು ಶ್ರೇಷ್ಠಾಚಾರದಲ್ಲಿ ಸ್ಥಾಪಿಸುವವರಾಗಿಯೂ, ತಾವು ಕೂಡ ಲೋಕಸಂಗ್ರಹಾರ್ಥವಾಗಿ ಆಚರಿಸುವವರಾರೊ, ಅವರು ಆಚಾರ್ಯರೆನಿಸಿಕೊಳ್ಳುವರು. ಆದ್ದರಿಂದ ಈ ಎರಡರ್ಥಗಳಿಂದೊಡಗೂಡಿದ ಪದಯುಕ್ತರು ಶ್ರೀ ಶಂಕರಾಚಾರ್ಯರಾಗಿರುವರು.

(೩) ಪುನಃ ಅವರು ಹ್ಯಾಗಿರುವರೆಂದರೆ—ಪರಮ ಕೃಪಾಳುವಾಗಿ ಅನೇಕ ಜಿಜ್ಞಾಸುಗಳಿಗೆ ನಿಷ್ಕಂಪ (ನಿಸ್ಸಂಶಯ) ರೂಪವಾದ ಬೋಧೆಯ

ನ್ನಿತ್ತು ಸಂಸಾರ ಬಂಧನದಿಂ ಮುಕ್ತರಂ ಮಾಡಿರುವರು. ಮತ್ತು ಭ್ರಾಂತ ಪುರುಷರಿಂದಾ ಚರಿಸಲ್ಪಟ್ಟ ಪ್ರಚಂಡ ಪಾಖಂಡ ಮತ ರೂಪವಾದ ಘನತಿಮಿರವನ್ನೂ ಹಾಗೆಯೇ ವೇದವ್ಯಾಖ್ಯಾನದಲ್ಲಿ ಸಂಶಯ ಭ್ರಮರೂಪ ತಿಮಿರವನ್ನೂ ವಿಧ್ವಂಸ ಮಾಡಿದಂಥಾ ಸಾಕ್ಷಾತ್ ಅಪೂರ್ವ ಸೂರ್ಯನಾಗಿರುವರು. ಇನ್ನು ಪ್ರಾಣಿಗಳ ಕಲ್ಯಾಣ (ಅಜ್ಞಾನಪರಿಹಾರ) ನಿಮಿತ್ತವಾಗಿ, ಅಮಿತ ಪ್ರಯತ್ನದಿಂದ ಆದಿಯಲ್ಲಿ (೧) ಸೂತ್ರ (೨) ಉಪನಿಷತ್ (೩) ಗೀತಾ ಎಂಬ ನಾಮವುಳ್ಳ ಮೂರು ಗ್ರಂಥಗಳಿಗೆ ಭಾಷ್ಯವಂ ಮಾಡಿದರು. ಅದರ ಬಳಿಕ ಅನತಿಪ್ರಜ್ಞ (ಮಂದ ಬುದ್ಧಿಯುಳ್ಳ) ಜಿಜ್ಞಾಸುಗಳ ಹಿತಕ್ಕೋಸುಗ ಅನೇಕ ವೇದಾಂತ ಪ್ರಕರಣ ಗ್ರಂಥಗಳನ್ನು ರಚಿಸಿದವರಾದರು. ಇಷ್ಟೇ ಅಲ್ಲ. ಅನೇಕ ವೇದಾಂತ ಸಾರ ಸಂಗ್ರಹರೂಪವಾದ ಸ್ತೋತ್ರಗಳನ್ನೂ ರಚಿಸಿದರು. ಅವುಗಳಲ್ಲಿಯೂ ಈ „ ವಿಜ್ಞಾನ ನೌಕಾ " ಸಂಜ್ಞೆಯುಳ್ಳ ಸ್ತೋತ್ರವನ್ನು ಪರಮಅದ್ಭುತವಾಗಿ ರಚಿಸಿರುವರು. ಇಂಥಾ ಪರಮ ಕೃಪಾಳುಗಳಾದ ಶ್ರೀ ಶಂಕರಾಚಾರ್ಯರು ಸಾಕ್ಷಾತ್ ಶಿವನ ಅವತಾರವಾದ್ದರಿಂದ ಅವರಿಗೆ ನನ್ನ ಭಕ್ತಿ ಪೂರ್ವಕವಾದ ನಮಸ್ಕಾರವಾಗಲೀ.

(೪) ಮತ್ತು ಪರಮದೈವತ ರೂಪನಾಗಿಯೂ, ಸರ್ವದೇವ ಮಯನಾಗಿಯೂ, ಯಾವನು ಬ್ರಹ್ಮವಿದ್ಯಾದಾತನಾದ ಶ್ರೀ ಸದ್ಗುರುವಿರುವನೋ. ಅವನಿಗೂ ನನ್ನ ಪುನಃ ಪುನಃ ನಮಸ್ಕಾರವಾಗಲೀ—„ಗುರುರ್ಬ್ರಹ್ಮಾ ಗುರುರ್ವಿಷ್ಣು" ಎಂಬುವದಾದಿಯಾದ ವಾಕ್ಯಗಳಲ್ಲಿ ಪ್ರಸಿದ್ಧವಾಗಿ ಸರ್ವದೇವಮಯ ಗುರುವೆಂದು ಹೇಳಲ್ಪಟ್ಟಿರುವದು. ಆದ್ದರಿಂದ ಪರಮಕೃಪಾವಂತರಾದ ಶ್ರೀ ಶಂಕರಾಚಾರ್ಯರಿಗೂ, ಮತ್ತು ಸದ್ಗುರುವಿಗೂ, ಇನ್ನು ಸರ್ವಸಾಧು ಸತ್ಪುರುಷರಿಗೂ ನಮಸ್ಕಾರವಂ ಮಾಡಿ ಈ „ ವಿಜ್ಞಾನನೌಕೆ " ಗೆ ಯಥಾಮತೀ ಅನುಸಾರ ಟೀಕೆಯನ್ನು ರಚಿಸುವೆನು. ಹ್ಯಾಗೂ ಇದಕ್ಕೆ ಪೂರ್ವದೋಳ್ ಸಂಸ್ಕೃತಟೀಕೆ ಇದ್ದರೂ, ಅದರಲ್ಲಿ ಮಂದಮತಿಗಳಿಗೆ ಪ್ರವೃತ್ತಿಯಾಗುವದಿಲ್ಲ; ಮತ್ತು ಅದರ ಅರ್ಥವು ಸಂಕೋಚವಾಗಿ ಮಾಡಲ್ಪಟ್ಟಿರುವದಲ್ಲದೆ ವಿಸ್ತಾರವಾಗಿಲ್ಲ; ವಿಸ್ತಾರವಿನಃ ಸ್ಪಷ್ಟವಾಗಿ ಪ್ರಕ್ರಿಯಾಜ್ಞಾನ (ತತ್ವಸಾಮಗ್ರಿಯ ತಿಳುವಳಿಕೆಯು) ಜಿಜ್ಞಾಸುಗಳಿಗೆ ಆಗುವದಿಲ್ಲ. ಆದ್ದರಿಂದ ಇದರಲ್ಲಿ ಎಲ್ಲಾ ಪ್ರಕ್ರಿಯಗಳು ಸ್ಪಷ್ಟವಾಗುವಕಾರಣ, ಮಂದಬುದ್ಧಿಯುಳ್ಳವರಿಗೂ ಸುಖವಾಗಿ ಪ್ರವೃತ್ತಿಯಾದೀತು.

ಮತ್ತು ಮಹಾತ್ಮರ ವಾಕ್ಯವು ಪರಮಪ್ರಸಿದ್ಧವಾಗಿರುವದು. ಅದನ್ನು ಪುನಃಪುನಃ ಚಿಂತನೆಗೈಯ್ಯುವದಾವುದೊ, ಅದು ಪರಮಶ್ರೇಯವೆಯೆನಿಸುವದು. ಹೀಗೆ ಋಷಭಾದಿ ವೃದ್ಧರು ಪೇಳಿರುವರು. ಇದರಿಂದ ಭಕ್ತಿಯಂತ್ರಿತನಾಗಿ, ಲಜ್ಜಾಭಯಗಳಂ ತೊರೆದು, ಸ್ವಾಪರಹಿತಕ್ಕೋಸುಗ, ಯಥಾಮತಿಯಿಂದ "ವಿಜ್ಞಾನನೌಕಾ" ಎಂಬ ಈ ಗ್ರಂಥಕ್ಕೆ ಟೀಕೆಯನ್ನು ಮಾಡುವೆನು.

ಅ|| ಇದರಲ್ಲಿ ಮೊದಲು ಸಂಸ್ಕೃತ ಟೀಕಾಕಾರಮಾಡಿದ ಮಂಗಳವಂ ತೋರಿಸುವರು.

ಶಂಕಾ:—ಪ್ರಯೋಜನದ ಉದ್ದೇಶವಂ ಮಾಡಿದಲ್ಲದೆ ಮಂದ ಬುದ್ಧಿಗಳಿಗೂ ಪ್ರವೃತ್ತಿಯಾಗುವದಿಲ್ಲ; ಆದ್ದರಿಂದ ಮಂಗಳದ ಪ್ರಯೋಜನವಂ ಪೇಳಬೇಕು.

ಸಮಾಧಾನ:—ಪ್ರಾರಂಭವಂ ಮಾಡಿದ ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿಯಾಗಲೋಸುಗವೂ, ಮತ್ತು ಗ್ರಂಥಕರ್ತರಲ್ಲಿ ನಾಸ್ತಿಕತ್ವಭ್ರಾಂತಿ ನಿವೃತ್ತಿಯ ಮೂಲಕ ಜಿಜ್ಞಾಸುಗಳಿಗೆ ಗ್ರಂಥದಲ್ಲಿ ಪ್ರವೃತ್ತಿಗೋಸುಗವೂ, ಇದಲ್ಲದೆ ಶ್ರೇಷ್ಠರ ಆಚಾರಪರಿಪಾಲನ ನಿಮಿತ್ತವಾಗಿಯಾದರೂ ಅಥವಾ ಶಿಷ್ಯರ ಶಿಕ್ಷಾರ್ಥವಾಗಿಯಾದರೂ ಮಂಗಳವನ್ನವಶ್ಯವಾಗಿ ಮಾಡಬೇಕು. ಆ ಮಂಗಳವು (೧) ಆಶೀರ್ವಾದ, (೨) ನಮಸ್ಕಾರ, (೩) ವಸ್ತುನಿರ್ದೇಶ, ಈ ಭೇದದಿಂದ ಮೂರು ಪ್ರಕಾರವಾಗಿರುವದು. ಅವುಗಳಲ್ಲಿ ನಮಸ್ಕಾರ ಲಕ್ಷಣ ಮಂಗಳವನ್ನು ಒಂದು ಶ್ಲೋಕದಿಂದ ಈ ಗ್ರಂಥದಲ್ಲಿ ಮಾಡುವರು. ಅದನ್ನು ತೋರಿಸುತ್ತಾರೆ;—

### || ೨ || ಮಂಗಳಾಚರಣ.

|| ನಾರಾಯಣಮಿತಿ ||

ಶ್ಲೋ|| ನಾರಾಯಣಂ ನಮಸ್ಯಾಮಿ ಮೋಹಾಂಧತಿಮಿರಾಪಹಮ್ || ಪ್ರಕಾಶಕಂ ಪ್ರಕಾಶ್ಯಾನಾಂ ಶುದ್ಧಬುದ್ಧಸ್ವರೂಪಿಣಮ್ ||೧||

ನಾರಾಯಣನಿಗೆ ನಾನು ನಮಸ್ಕಾರವಂ ಮಾಡುವೆನು. ಆ ನಾರಾಯಣನು ಎಂತಿರುವನೆಂದರೆ—ಮೋಹಾಂಧತಿಮಿರವಂ ನಾಶಮಾಡತಕ್ಕವನು. ಪ್ರಕಾಶ್ಯಗಳಿಗೆ ಪ್ರಕಾಶಕನು, ಇನ್ನು ಶುದ್ಧ ಬುದ್ಧ ಸ್ವರೂಪನೆಂಬುದು

A. नर = नाशरहित विष्णु भगवान द्वारा उत्पन्न हुआ को नार कहते है।
B. नर = ईश्वर द्वारा उत्पन्न हुआ हिरण्यगर्भ को "नार" कहते है



नमस्कार योग्य

**ಟೀಕಾ**—ಮಂಗಳ ಶ್ಲೋಕದಲ್ಲಿ ನತಿಭಾವಗೈದ ಶ್ರೀನಾರಾಯಣನಿಗೆ, ಅರ್ಥಾತ್, ಆ ನಾರಾಯಣ ಪದಕ್ಕೆ ಅರ್ಥವೇನೆಂದರೆ, 1-10 (**ಆಪೋ ನಾರಾ ಇತಿ ಪ್ರೋಕ್ತಾ**) ಈ ಮನುವಾಕ್ಯದಿಂದ ನರಸಂಭವ ಜಲಕ್ಕೆ 'ನಾರಾ' ಎಂದು ಪೆಸರು. ಅದಾವನಿಗೆ ಸ್ಥಾನವೋ ಅವನಿಗೆ ನಾರಾಯಣನೆಂದು ಪೆಸರು. ಅಥವಾ ನರಸಂಭೂತ ಹಿರಣ್ಯಗರ್ಭನಿಗೆ 'ನಾರ' ಎಂದು ಪೆಸರು, ಅವನಿಗೆ ಯಾವದು 'ಅಯನ' ಅಂದರೆ—ಆಶ್ರಯವೋ ಅವನಿಗೆ ನಾರಾಯಣನೆಂದು ಪೆಸರು. ಹಿರಣ್ಯಗರ್ಭನೆಂದರೆ, ಇಲ್ಲಿ ಬ್ರಹ್ಮನಿಗೆ ಹೆಸರು. ಆ ಬ್ರಹ್ಮದೇವನು ಎಂತಿರುವನೆಂದರೆ—ನಾಲ್ಕು ಮುಖವುಳ್ಳವನಾಗಿಯೂ, ವಿಸರ್ಗರೂಪವಾದ ಸೃಷ್ಟಿಯಂ ರಚಿಸಿದವನಾಗಿಯೂ, ಮತ್ತು ಸರ್ವಪ್ರಾಣಿಗಳ ಹಿತದಲ್ಲಿ ತತ್ಪರನಾಗಿಯೂ ಇರುವನು. ಅಂಥಾ ಬ್ರಹ್ಮನು ಯಾವನ ನಾಭಿಯ ಕಮಲದಿಂದ ಪ್ರಕಟಗೊಂಡಿರುವನೋ, ಇನ್ನು ಯಾವನಿಂದ ವೇದಗಳ ಲಾಭವಾಗಿರುವದೋ, ಅದನ್ನು "**ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ**" ಇತ್ಯಾದಿ ಶೃತಿಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಅಥವಾ ಜೀವಸಮೂಹದ ಪೆಸರು 'ನಾರ' ಎನಿಸುವದು. ಅದಾವನಿಗೆ ಸ್ಥಾನವೋ, ಅವನ ಪೆಸರು ನಾರಾಯಣನು. ಅಥವಾ "**ನರಾಜ್ಜಾತಾನಿ ತತ್ವಾನಿ**" ಈ ಭಾರತ ವಾಕ್ಯದಿಂದ ನರಸಂಭವ ತತ್ವಗಳ ನಾಮವು 'ನಾರಾ' ಎನಿಸುವದು. ಅವು ಯಾವನಿಗೆ ಸ್ಥಾನವೋ, ಅವನ ಪೆಸರು ನಾರಾಯಣನೆನ್ನಲ್ಪಡುವದು. ಅಥವಾ ಕರ್ಮಕ್ಲೇಶಾದಿ ಸಂಸಾರ ಚಕ್ರದ ಯಾವ ಅರಾವುಂಟೋ, ಅದಕ್ಕೆ ಉಪಾದಾನವಾದ ಮಾಯೆಯ ಪೆಸರು 'ಅರಾಯಣ' ಎನಿಸುವದು. ಆ ಅರಾಯಣರೂಪವಾದ ಮಾಯೆಯು ಯಾವದರಲ್ಲಿ ಇಲ್ಲವೋ, ಆ ಶುದ್ಧ ಚಿತ್ತಿಗೆ ನಾರಾಯಣನೆಂದು ಪೆಸರು. ಇವೇ ಮೊದಲಾದ ವ್ಯುತ್ಪತ್ತಿಯಿಂದ ನಾರಾಯಣ ಪದಕ್ಕೆ ಅನೇಕಾರ್ಥವಿರುವದು.

विष्णु नार ईश्वर नारायण महाभारत अनुशासन पर्व 124 अध्याय P. 5875 शुद्ध ब्रह्म

ಅ॥ ಈಗ ಆ ನಾರಾಯಣನ ವಿಶೇಷಣಗಳ ಅರ್ಥವಂ ಮಾಡುವರು.

(೧) ಆ ನಾರಾಯಣನು ಎಂತಿರುವನೆಂದರೆ—ಮೋಹಾಂಧತಿಮಿರವಂ ಹರಿಸುವವನಾಗಿರುವನು. "ಮೋಹಾಂಧ" ವೆಂದರೆ, ಅಂಧಮೋಹರೂಪವಾದ ಅಜ್ಞಾನವು ಅಂಧಕಾರದಂತೆ ಆವರಣವಂ ಮಾಡುವಂಥಾದ್ದು. ಅದನ್ನು ವೃತ್ತಿ ಆರೂಢವಾದ ವಿಶೇಷ ಚೇತನ ರೂಪದಿಂದ ವಿಧ್ವಂಸವಂ ಮಾಡುವನು.

10—11

ಮಾತು ಭಗವಂತನೂ ಕೂಡ ಗೀತೆಯ ದಶಮಾಧ್ಯಾಯದಲ್ಲಿ ಯಾವದನ್ನು ಪಡೆಯಲೋಸುಗ ನನ್ನಂ ಭಜಿಸುವರೋ, ಆ ಪುರುಷರಮೇಲೆ ಅನುಗ್ರಹಾರ್ಥವಾಗಿ ಅವರ ಅಂತಃಕರಣದಲ್ಲಿ ಇದ್ದುಕೊಂಡು, ಅಜ್ಞಾನಜನ್ಯತಮವನ್ನು ನಾನು ಜ್ಞಾನದೀಪದ ಪ್ರಕಾಶದಿಂದ ನಾಶಮಾಡುವೆನು ಎಂದು ಹೇಳಿರುವನು. ಇಲ್ಲಿ ಅಜ್ಞಾನಕ್ಕೆ 'ತಮದ' ಸಾಮ್ಯವೂ; ಜ್ಞಾನಕ್ಕೆ 'ದೀಪಕ' ಸಾಮ್ಯವೂ ಹೇಳಿರುವದು. ಅದರ ಅಭಿಪ್ರಾಯವೇನೆಂದರೆ—ಅಜ್ಞಾನವು ಕತ್ತಲೆಯಂತೆ ಆವರಣಸ್ವಭಾವವುಳ್ಳದ್ದು. ಹ್ಯಾಗೆ ತಿಮಿರಯೋಗದಿಂದ ರಜ್ಜು, ಸ್ಥಾಣು, ಪಾಷಾಣಾದಿಗಳಲ್ಲಿ, ಸರ್ಪ, ಚೋರ, ವ್ಯಾಘ್ರಾದಿಗಳು ತೋರುತ್ತಿರುವವೋ, ಹಾಗೆ ಅಜ್ಞಾನಯೋಗದಿಂದ ನಿತ್ಯಮುಕ್ತನಾಗಿ, ಅಸಂಗನಾಗಿ, ನಿರ್ವಿಕಾರನಾಗಿರುವ ಆತ್ಮನು ಬದ್ಧ, ಸಂಗಿ, ವಿಕಾರಿ, ದೀನದುಃಖಿಯಾಗಿ ತೋರುತ್ತಿರುವನು. ಇವೆಲ್ಲ ಅಜ್ಞಾನದ ಮಹಿಮೆಯೇ ಆಗಿದೆ. ಶುದ್ಧಕೂಟಸ್ಥನಾದ ಆತ್ಮನಲ್ಲಿ ಬಂಧದ ಯಾವ ತೋರಿಕೆಯುಂಟೋ, ಅದು ಮಿಥ್ಯಾ ಅಧ್ಯಾಸರೂಪವಾಗಿರುವದು. ಇನ್ನು ಕೇವಲ ಅವಿದ್ಯಾದೋಷದಿಂದಲೇ ಪ್ರತೀತವಾಗುತ್ತಿರುವದು. ಮತ್ತು '**ವಿಚಾರಸಾಗರ**' ದಲ್ಲಿ ದೋಷವಿಲ್ಲದೆಲೆ ಯಾವ ಅಧ್ಯಾಸ ನಿರೂಪಣೆ ಮಾಡಿರುವದೋ, ಅದು ಪ್ರೌಢವಾದದಿಂದ ಮಾಡಲ್ಪಟ್ಟಿರುವದು. ದೋಷವಿನಃ ಅಧ್ಯಾಸವಾಗುವದಿಲ್ಲ; ಎಲ್ಲಿ ಯಾವದೂ ಅಧ್ಯಾಸದಲ್ಲಿ ಹೇತುವಿಲ್ಲವೋ ಅಲ್ಲಿಯೂ 'ಅವಿದ್ಯಾ' ಯೆಂಬ ದೋಷವು ಅವಶ್ಯವಾಗಿರುವದು. ಇದು '**ವೃತ್ತಿಪ್ರಭಾಕರ**' ದಲ್ಲಿ ಸ್ಪಷ್ಟವಾಗಿ ಹೇಳಿರುವದು." ಇದರಿಂದ ಸರ್ವದೋಷದ ಆಲಯವಾದ ಅಜ್ಞಾನವು ತಮ್ಮದಂತೆ ಆವರಣವಂ ಮಾಡಿರುವದು. ಆದಕಾರಣ ಅಜ್ಞಾನಕ್ಕೆ ತಮದಸಾಮ್ಯ ಸಂಭವಿಸಿರುವದು. ಹಾಗೆಯೇ ಜ್ಞಾನಕ್ಕೂ ದೀಪಕಸಾಮ್ಯ ಸಂಭವಿಸಿರುವದು. ಎಂತೆಂದರೆ—ಗೃಹದ ಅಂಧಕಾರವು ಕೇವಲ ದೀಪದಿಂದಲೆ ನಾಶವಾಗುವದಲ್ಲದೆ ಅನ್ಯಕ್ರಿಯಾಂತರಗಳಿಂದ ನಾಶವಾಗದಿರುವಂತೆ ಹೃದಯಗತವಾದ ಅಜ್ಞಾನವೂ ಕೂಡ, ಕೇವಲ ಜ್ಞಾನದಿಂದಲೇ ನಾಶವಾಗುವದಲ್ಲದೆ ಅನ್ಯಸಾಧನಗಳಿಂದಾಗುವದಿಲ್ಲ; ಮತ್ತು ದೀಪಕವಾದರೂ ಹ್ಯಾಗೆ ತೈಲವರ್ತಿಯಾದಿ ಸಾಮಗ್ರಿಗಳಿಂದಿರುವದೋ, ಹಾಗೆ ಜ್ಞಾನವಾದರೂ ಶ್ರದ್ಧಾಭಕ್ತಿ ಆದಿಸಾಮಗ್ರಿಗಳಿಂದಿರುತ್ತಿರುವದು. ಮತ್ತು ದೀಪಕವು ಯಾವ ಮನೆಯಲ್ಲಿ ಪ್ರಜ್ವಲಿತವಾಗುವದೋ, ಆ ಮನೆಯೊಳಗಣ ಅಂಧಕಾರವಂ ತೊಲಗಿಸುವದಲ್ಲದೆ—ಅನ್ಯಗೃಹಾಂತರದ ತಮವನ್ನು ಹೋಗಲಾಡಿಸುವದಿಲ್ಲ; ಹಾಗೆ

A- ಸಾಂಖ್ಯ ಮತ ಖಂಡನ . B. ನ್ಯಾಯ ಮತ ಖಂಡನ
सांख्य मत खंडन



ವೃತ್ತಿಜ್ಞಾನವು ಯಾರ ಅಂತಃಕರಣದಲ್ಲಿ ಪ್ರಕಟವಾಗುವದೋ, ಅವರ ಹೃದಯದೊಳಗಣ ಅಜ್ಞಾನವಂ ತೊಲಗಿಸುವದಲ್ಲದೆ ಅನ್ಯ ಪುರುಷರ ಅಜ್ಞಾನವಂ ಹೋಗಲಾಡಿಸುವದಿಲ್ಲ. ಆದ್ದರಿಂದ ಜ್ಞಾನಕ್ಕೆ ದೀಪಕಸಾಮ್ಯ ಸಂಭವಿಸಿರುವದು. ಈ ಹೇಳಿಕೆಯಿಂದ ಏನು ಸಿದ್ಧವಾಯಿತೆಂದರೆ—ನಾರಾಯಣನು ವೃತ್ತಿ ಆರೂಢನಾಗಿ ಅಜ್ಞಾನವೆಂಬ ಅಂಧಕಾರವನ್ನು ಹರಿಸುವನು.

ಆ ಅಜ್ಞಾನವು ಯಾರಿಗೆ ಆವರಣಮಾಡಿರುವದೆಂದು ಆಕಾಂಕ್ಷೆಯಾದರೆ ಹೇಳುತ್ತಾರೆ—ಅಜ್ಞಾನ, ಆವರಣ, ವಿಕ್ಷೇಪಾದಿಯಾದ ಎಲ್ಲಾ ಅವಸ್ಥೆಗಳು ಸಾಭಾಸ ಅಂತಃಕರಣಕ್ಕಾಗಿರುವವು. ಕೂಟಸ್ಥನಾದ ಆತ್ಮನಿಗೆ ಯಾವ ಅವಸ್ಥೆಯೂ ಇಲ್ಲ. ಮತ್ತು ಕೂಟಸ್ಥನಾದ ಆತ್ಮನು ನಿರ್ವಿಕಾರನಾಗಿರುವನು. ಹ್ಯಾಗೂ ಬಹು ಜನ ಆಚಾರ್ಯರು ಸ್ವಾಶ್ರಯ ಸ್ವವಿಷಯ ಅಜ್ಞಾನವೆಂದು ಅಂಗೀಕರಿಸಿರುವರು. ಆದ್ದರಿಂದ ಶುದ್ಧ ಚೇತನವನ್ನಾಶ್ರೈಸಿ ಮತ್ತು ಶುದ್ಧ ಚೇತನವನ್ನೇ ವಿಷಯೀಕರಿಸುವದು.

१—मत्यर्थ / 1-319

೧—ಮತ್ತ್ಯಾರೋ ಆಚಾರ್ಯರು ಬ್ರಹ್ಮದ ಸತ್ತು ಚಿತ್ತುಗಳೆಂಬ ಸಾಮಾನ್ಯರೂಪವು ಅಜ್ಞಾನಕ್ಕೆ ಆಶ್ರಯವೆಂತಲೂ, ಆನಂದ ಅದ್ವೈತಗಳಾದ ವಿಶೇಷ ಸ್ವರೂಪವು ಅಜ್ಞಾನಕ್ಕೆ ವಿಷಯವೆಂತಲೂ ಗ್ರಹಿಸಿದ್ದಾರೆ. [ಈ ಆಚಾರ್ಯರುಗಳ ನಾಮಗಳು ವೇದಾಂತ ಮತದರ್ಶನದಲ್ಲಿಯೂ, ವೃತ್ತಿ ಪ್ರಭಾಕರದಲ್ಲಿಯೂ ಬರೆದಿದ್ದಾರೆ.] वाचस्पती मिश्रा

೨—ಮತ್ತೊಬ್ಬರು ಜೀವನು ಅಜ್ಞಾನಕ್ಕೆ ಆಶ್ರಯವೆಂತಲೂ, ಬ್ರಹ್ಮವು ಅಜ್ಞಾನಕ್ಕೆ ವಿಷಯವೆಂತಲೂ ಹೇಳಿರುತ್ತಾರೆ.

೩—ಇನ್ನೊಬ್ಬರು ಏಕಜೀವವಾದವಂ ಗ್ರಹಿಸಿ ಏಕ ಅಜ್ಞಾನವೆಂದು ಹೇಳಿದಾರೆ. विद्यारण्यस्वामी , वाचस्पतिमिश्र

೪—ಬಳಿಕ ಮತ್ತೊಬ್ಬರು ನಾನಾ ಜೀವವಾದವಂ ಹಿಡಿದು ನಾನಾ ಅಜ್ಞಾನವೆಂದು ಹೇಳಿರುತ್ತಾರೆ.

विवरणकार ೫—ಕೆಲವರು ನಿರಂಶ ಅಜ್ಞಾನವೆನ್ನುತ್ತಾರೆ.

೬—ಕೆಲವರು ಸಾಂಶವಜ್ಞಾನವೆನ್ನುತ್ತಾರೆ. ಇತ್ಯಾದಿ ಅನೇಕಪ್ರಕಾರಗಳಿಂದ ಅಜ್ಞಾನದ ಆಶ್ರಯ, ವಿಷಯಗಳನ್ನು ಆಚಾರ್ಯರುಗಳು ಪ್ರತಿಪಾದನೆ ಮಾಡಿರುವರು.

A. । कहनेको सामर्थ्य नहीं है।

B. ಘನಚ್ಛನ್ನ ದೃಷ್ಟಿರ್ಘನಚ್ಛನ್ನಮರ್ಕಂ ಯಥಾ ನಿಷ್ಪ್ರಭಂ ಮನ್ಯತೇ ಚಾತಿಮೂಢಃ ... ಬದ್ಧವದ್ಭಾತಿ ಯೋ ಮೂಢ ದೃಷ್ಟೇಃ ...

೧ ಸುಬೋಧನೋಪದೇಶ

ಆದಾಗ್ಯೂ ಅಜ್ಞಾನದ ಅಭಿಮಾನಿ, ಚಿದಾಭಾಸನಾಗಿರುವನು. "ಅಹಂ ಆತ್ಮಾನಜಾನಾಮಿ" ಅಥವಾ "ಅಹಂಬ್ರಹ್ಮನಜಾನಾಮಿ" ಹೀಗೆಂಬ ಬ್ರಹ್ಮಾತ್ಮರ ಐಕ್ಯತ್ವದ ಅಸ್ಫುರಣ ಲಕ್ಷಣವಾದ ಅಜ್ಞಾನವು ಸಾಭಾಸ ಅಂತಃ ಕರಣದಲ್ಲಿಯೇ ಅಭಿವ್ಯಕ್ತವಾಗುವದು. ಮತ್ತು ಸುಷುಪ್ತಿಯಲ್ಲಿ ಅನಭಿವ್ಯಕ್ತ ವಾಗಿ ಅಜ್ಞಾನವಿರುವದು. ಆದರೂ ಅದು ಅಕಿಂಚಿತ್ಕರವಾಗಿರುವದು. ಆದ ಕಾರಣ ಅಂತಃಕರಣದಲ್ಲಿ ಅಭಿವ್ಯಕ್ತಗೊಂಡ ಅಜ್ಞಾನವೇ ತನ್ನ ಅಧಿಷ್ಠಾನವಾದ ಆತ್ಮನಿಗೆ ಆವರಣ ಮಾಡಿರುವದೆಂದು ತೋರುತ್ತಿರುವದು. ಮತ್ತು ಅಜ್ಞಾನ ಕೃತಬಂಧವೂ ಕೂಡ ಆತ್ಮನಲ್ಲಿಯೆ ಪ್ರತೀತವಾಗುತ್ತಿರುವದು.

ಇನ್ನು ಸೂಕ್ಷ್ಮವಿಚಾರದಿಂ ನೋಡಿದರೆ, ಆತ್ಮನು ಅಜ್ಞಾನದಿಂ ಬೇರೆ ಯಾಗಿರುವನು, ಸದಾನಿರಾವರಣ ನಿತ್ಯಮುಕ್ತ ಸ್ವರೂಪನಾಗಿರುವನು, ಹಾಗೆ ಯೇ ಸಮಸ್ತಕ್ಕೂ ಸಾಕ್ಷಿಯಾಗಿ ತಮಸ್ಸಿಗೆ ಪರನಾಗಿರುವನು, ಮತ್ತು ಆದಿತ್ಯ ವರ್ಣನಾದ ಚೇತನಾತ್ಮನು ತಮದಿಂ ಪರನಾಗಿರುವನು. ಹೀಗೆ ಶೃತಿಸ್ಮೃತಿಗ ಳಲ್ಲಿ ಪ್ರಸಿದ್ಧವಾಗಿ ಪೇಳಲ್ಪಟ್ಟಿರುವದು. ಇನ್ನು ಘನಚ್ಛನ್ನ (ಮೇಘದಿಂದಾವ ರಿಸಲ್ಪಟ್ಟ) ದೃಷ್ಟಿಯುಳ್ಳ ಪುರುಷನು ಘನಚ್ಛನ್ನನೆಂದು ಸೂರ್ಯನಂ ತಿಳಿಯು ವಂತೆ ಮೂಢರ ದೃಷ್ಟಿಯಿಂದ ಆತ್ಮನು ಆವರಣ ಸಹಿತನಾಗಿಯೂ, ಬಂಧವುಳ್ಳ ವನಾಗಿಯೂ ಕಾಣುತ್ತಿರುವನು. ಹೀಗೆ ಹಸ್ತಾಮಲಕಾಚಾರ್ಯರ ವಾಕ್ಯ ದಿಂದಲೂ, ಕೇವಲ ಬುದ್ಧಿಯ ದೋಷವೇ ಆಗಿದೆ. ಇದರಿಂದ ಕೂಟಸ್ಥನಾದ ಆತ್ಮನಲ್ಲಿ ಯಾವ ದೋಷವೂ ಸಂಭವಿಸಲಿಲ್ಲವೆಂಬರ್ಥವು ಸಿದ್ಧವಾಯಿತು.

(೨) ಈಗ "ಪ್ರಕಾಶಕಂ ಪ್ರಕಾಶ್ಯಾನಾಂ" ಈ ದ್ವಿತೀಯ ವಿಶೇಷ ಣದ ಅರ್ಥವಂ ಪೇಳುತ್ತಾರೆ—ಪ್ರಕಾಶಿಸಿಕ್ಕೊಳ್ಳುವದಕ್ಕೆ ಯೋಗ್ಯವಾವುದೋ, ಅದು ಪ್ರಕಾಶ್ಯವೆನಿಸಿಕ್ಕೊಳ್ಳುವದು. ಮತ್ತಾವುದು ಪ್ರಕಾಶಪಡಿಸತಕ್ಕದ್ದೋ, ಅದು ಪ್ರಕಾಶಕವೆನ್ನಲ್ಪಡುವದು. ಅವ್ಯಕ್ತಾದಿ ಪೃಥ್ವಿ ಪರ್ಯಂತವಾಗಿರುವ ಕಾರಣ ಕಾರ್ಯರೂಪವಾದ ಭೂತಭೌತಿಕವೆನಿಪ ಸರ್ವ ಪ್ರಪಂಚವು ದೃಶ್ಯವಾ ದ್ದರಿಂದ ಪ್ರಕಾಶ್ಯವಾಗಿರುವದು. ಅವುಗಳಂ ಪ್ರಕಾಶಪಡಿಸುವಂಥಾ ಸ್ವಯಂ ಜ್ಯೋತಿಸ್ವರೂಪನಾದ ಪ್ರತ್ಯಗಭಿನ್ನ ಪರಮಾತ್ಮನು ಪ್ರಕಾಶಕನಾಗಿರುವನು. ಹ್ಯಾಗೂ ಬಾಹ್ಯಘಟಾದಿ ಪದಾರ್ಥಗಳನ್ನು ಸೂರ್ಯಾದಿಗಳೂ ಪ್ರಕಾಶಪಡಿ ಸುವರು; ಆದಾಗ್ಯು ಆ ಸೂರ್ಯಾದಿ ಜ್ಯೋತಿಗಳು ಪರಿಚ್ಛಿನ್ನವಾಗಿರುವವು.

ಮತ್ತು ಆ ಜ್ಯೋತಿಗಳನ್ನೂ ಪ್ರಕಾಶಪಡಿಸುವವನು ಚೈತನ್ಯಾತ್ಮನೇ ಆಗಿರುವನು ಆ ಚಿತ್ಸ್ವರೂಪನಾದ ನಾರಾಯಣನ ಪ್ರಕಾಶದಿಂದಲೇ ಸೂರ್ಯಾದಿಗಳ ಪ್ರಕಾಶವಾಗುತ್ತಿರುವವು. ಆ ಜ್ಯೋತಿಗಳಲ್ಲಿ ಸ್ವತಃ ಪ್ರಕಾಶತ್ವವಿಲ್ಲ, ಅದೆಂತೆಂದರೆ— **"ತಸ್ಯಭಾಸಾ ಸರ್ವಮಿದಂ ವಿಭಾತಿ"** ಮತ್ತು **"ಜ್ಯೋತಿಷಾಮಪಿತಜ್ಜ್ಯೋತಿಃ"**, ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಆ ಪರಮಾತ್ಮನ ಪ್ರಕಾಶದಿಂದಲೇ, ಅವುಗಳ ಭಾಸವು. ಮತ್ತು ಅವನು ಜ್ಯೋತಿಗಳಿಗೂ ಜ್ಯೋತಿಯೆಂದು ಪ್ರಸಿದ್ಧವಾಗಿ ಹೇಳಲ್ಪಟ್ಟಿರುವದು. ಆ ಜ್ಯೋತಿಯಾದರೂ ಅಗ್ನಿಯಂತೆ ದೀಪ್ತಿರೂಪವಾಗಿಲ್ಲ; ಮತ್ತೇನೆಂದರೆ—ಜ್ಞಪ್ತಿರೂಪವಾಗಿರುವದು. ಇದರಿಂದ ಏನು ಸಿದ್ಧವಾಯಿತೆಂದರೆ, ಅಂತರ್ಬಾಹ್ಯದಲ್ಲಿರುವ ಸರ್ವದೃಶ್ಯ ಪದಾರ್ಥಗಳನ್ನೂ, ಮತ್ತು ಸೂರ್ಯಾದಿ ಜ್ಯೋತಿಗಳನ್ನೂ ಏಕ-ಚಿದಾತ್ಮ ನಾರಾಯಣನೇ ಪ್ರಕಾಶಗೈಯ್ಯುವನು.

(೩) ಪುನಃ ಅವನು ಎಂತಿರುವನೆಂದರೆ–ಶುದ್ಧನಾಗಿರುವನು. "ಶುದ್ಧ"ನೆಂದರೆ, ಅವಿದ್ಯಾದಿಮಲದಿಂ ರಹಿತನೆಂಬುದರ್ಥ. ಹ್ಯಾಗೂ ಮಲವೆಂಬ ಹೆಸರು ಪಾಪಕ್ಕೂ ಇರುವದು; ಮತ್ತು ರಾಗಾದಿಗಳಾದ ಮಾನಸದೋಷಗಳಿಗೂ ಶಾಸ್ತ್ರಗಳಲ್ಲಿ ಮಲವೆಂದು ಹೇಳಿರುವದು. ಹಾಗಾದರೂ ಆ ಸರ್ವವೂ ಅವಿದ್ಯೆಯಲ್ಲಿಯೇ ಅಂತರ್ಭೂತವಾಗಿರುವವು. ಆದಕಾರಣ ಅವಿದ್ಯಾನಿಷೇಧದಿಂದ ಆ ಎಲ್ಲಾ ಮಲಗಳಿಗೂ ನಿಷೇಧವುಂಟಾಯಿತು. ಈ ಕಾರಣದಿಂದ ಆ ನಾರಾಯಣನು ಶುದ್ಧನಾಗಿರುವನು.

(೪) ಮತ್ತು ಆ ನಾರಾಯಣನು ಬುದ್ಧನಾಗಿರುವನು. "ಬುದ್ಧ"ನೆಂದರೆ, ಜ್ಞಾನಸ್ವರೂಪನಲ್ಲದೆ ಜ್ಞಾನಗುಣವುಳ್ಳವನಲ್ಲ ಯಾಕೆಂದರೆ—ಯಾವದು ಗುಣವಾಗುವದೋ, ಅದು ಆಗಮಾಪಾಯಿ ಆಗುವದು. (ಉತ್ಪತ್ತಿ. ನಾಶಕ್ಕೆ ಆಗಮಾಪಾಯಿಯೆಂದು ಹೆಸರು.) ಈ ಜ್ಞಾನವು ಆಗಮಾಪಾಯಿ ಅಲ್ಲ; ಆದ್ದರಿಂದ ನಿತ್ಯವಾಗಿರುವದು. ಹ್ಯಾಗೆ ಸೂರ್ಯನು ಪ್ರಕಾಶಸ್ವರೂಪನೋ, ಮತ್ತು ಅಗ್ನಿ ಉಷ್ಣಸ್ವರೂಪವೋ, ಹಾಗೆ ಪರಮಾತ್ಮನು ಜ್ಞಾನಸ್ವರೂಪನಾಗಿರುವನು. ಯಾವ ಚೇತನದ ಪ್ರಕಾಶವಂ ಪೊಂದಿ ಅಬೋಧಾತ್ಮಕವಾದ (ಜ್ಞಾನವಿಲ್ಲದಿರುವ) ಚಕ್ಷುರಾದೀಂದ್ರಿಯಗಳು ತಮ್ಮತಮ್ಮ ವಿಷಯಗಳಲ್ಲಿ ಪ್ರವರ್ತಿಸುವವೋ, ಅಂದರೆ—ಈ ಪರಮಾತ್ಮನ ಪ್ರಕಾಶದಿಂದಲೇ ಸರ್ವವೂ ಪ್ರವರ್ತಿಸುತವೆಂಬ ತಾತ್ಪರ್ಯ.

**ಆಕ್ಷೇಪ**—ಆದರೆ ವಿಜ್ಞಾನಸ್ವರೂಪವೆಂದು ಬುದ್ಧಿಯು ಶಾಸ್ತ್ರಗಳಲ್ಲಿ ಕೇಳಲ್ಪಟ್ಟಿರುವದು. ಅದರಿಂದ ಇಂದ್ರಿಯಗಳಿಗೆ ಪ್ರವೃತ್ತಿಯು ಯಾಕಾಗುವದಿಲ್ಲ.

**ಸಮಾಧಾನ**—ಆ ಬುದ್ಧಿಯು ವಿಜ್ಞಾನಸ್ವರೂಪವಲ್ಲ; ಯಾಕೆಂದರೆ—ಬುದ್ಧಿಯು ಸತ್ವಗುಣದ ಕಾರ್ಯವಾಗಿರುವದು. ಇದರಿಂದ ಚೇತನದ ಪ್ರತಿಬಿಂಬವಂ ಗ್ರಹಿಸುವದಕ್ಕೆ ಯೋಗ್ಯವಾಗಿರುವದು. ಆದಕಾರಣ ಅದರಲ್ಲಿ ಜ್ಞಾನದ ಸಾಮರ್ಥ್ಯವುಂಟು; ಇದರಿಂದ ವಿಜ್ಞಾನವೆಂಬ ನಾಮವಂ ಪೊಂದಿರುವದು. ಆದರೂ ಸ್ವತಃ ಜಡವಾಗಿರುವದು. ಅದರಲ್ಲಿ ಜ್ಞಾನವಿರುವದೂ ಕೂಡ ಸ್ವತಃ ದುರ್ಲಭವಾದಮೇಲೆ ವಿಶೇಷ ಜ್ಞಾನರೂಪವಾದ ವಿಜ್ಞಾನವೆಂತು ಸಂಭವಿಸೀತು ? ಆದರೆ ಯಾಚಿತಮಂಡನ ನ್ಯಾಯದಂತೆಯೂ, ಅಥವಾ ಕೃಷ್ಣನ ಸನ್ನಿಧಿಯಲ್ಲಿದ್ದ ಅರ್ಜುನನ ಸಾಮರ್ಥ್ಯದಂತೆಯೂ ಚೇತನರೂಪನಾದ ಆತ್ಮನ ಸನ್ನಿಧಿಯಿಂದಲೇ ಜ್ಞಾನಯೋಗ್ಯತೆಯಂ ಪೊಂದಿರುವದು. ಮತ್ತೀಬುದ್ಧಿಯು ಕ್ರಮಕ್ರಮವಾಗಿ (ಒಂದಾದಮೇಲೆ ಒಂದು) ವಿಷಯವಂ ಪ್ರಕಾಶಪಡಿಸುವದು. ಆತ್ಮನಾದರೋ, ಕ್ರಮವಿಲ್ಲದಲೇ ಒಟ್ಟಿಗೆ ಸರ್ವಪದಾರ್ಥಗಳನ್ನು ಪ್ರಕಾಶಪಡಿಸುವನು ಮತ್ತು ಈ ಬುದ್ಧಿಯು ತನ್ನ ಪ್ರಕಾಶದಲ್ಲಿ ಚೇತನವನ್ನಪೇಕ್ಷಿಸುವದು, ಆತ್ಮನೋ ತನ್ನ ಪ್ರಕಾಶದಲ್ಲಿ ಬುದ್ಧಿಯನ್ನಾಗಲೀ, ಅಥವಾ ಇತರವಾದ ಯಾವ ಪದಾರ್ಥವನ್ನಾಗಲೀ ಅಪೇಕ್ಷಿಸುವದಿಲ್ಲ; ಈ ಕಾರಣದಿಂದ ಬುದ್ಧಿಯು ಜ್ಞಾನಸ್ವರೂಪವಲ್ಲ. ಮತ್ತೇನೆಂದರೆ—ಅದರಲ್ಲಿ ಗೌಣವಾದ ವಿಜ್ಞಾನಶಬ್ದದ ಪ್ರಯೋಗವಿರುವದು. ಮುಖ್ಯಜ್ಞಾನಸ್ವರೂಪನು ಆತ್ಮನೇ ಆಗಿರುವನು. ಅದೆಲ್ಲ, ಅನೇಕ ಶೃತಿ ಸ್ಮೃತಿ ಶಾಸ್ತ್ರಗಳಲ್ಲಿ ಪೇಳಿರುವವು. ಈ ಅರ್ಥವನ್ನು ವಿಸ್ತಾರವಾಗಿ ಮುಂದೆ ಪೇಳುವೆವು. ಇಲ್ಲಿ ದಿಙ್ಮಾತ್ರ ಪೇಳಲ್ಪಟ್ಟಿರುವದು. ಇಂತು ಈ ಪೂರ್ವೋಕ್ತವಾದ ವಿಶೇಷಣಗಳಿಂದ ವಿಶಿಷ್ಟನಾದ ಯಾವ ನಾರಾಯಣನಿರುವನೋ, ಅವನಿಗೆ ನನ್ನ ಅಭೇದರೂಪವಾದ ನಮಸ್ಕಾರವಾಗಲೀ. ಇದು ಮಂಗಳಶ್ಲೋಕದ ಅರ್ಥವು. ॥ ೧ ॥

ಅ॥—ಈ ರೀತಿಯಾಗಿ ಗ್ರಂಥಾರಂಭದಲ್ಲಿ ಮಂಗಳವಂ ಮಾಡಿ ಈಗ ಮೂಲ ನವ (೯) ಶ್ಲೋಕಾತ್ಮಕವಾದ "ವಿಜ್ಞಾನನೌಕಾ" ಎಂಬುದರ ಟೀಕೆಯನ್ನು ಆರಂಭಮಾಡುವರು.

## ॥ ೩ ॥ ಗ್ರಂಥಾರಂಭ.

ಈ ವಿಜ್ಞಾನನೌಕಾ ಎಂಥಾದ್ದೆಂದರೆ—ಸಂಸಾರವೆಂಬ ಸಮುದ್ರವಂ ದಾಟಿಸುವಂಥಾ ಹಡಗಾಗಿರುವದು. ಇಲ್ಲಿ ಸದ್ಗುರು ರೂಪಿಯಾದ ಕರಣಧಾರಕನ ಆಶ್ರಯವಂ ಪಿಡಿದು, ಪುನಃ ಇದನ್ನು ವಿಚಾರಿಸಿ, ಇದರ ತಾತ್ಪರ್ಯದಲ್ಲಿ ವೃತ್ತಿ ಸಂಪಾದನೆಯನ್ನಾರ್ಯರು ಮಾಡುವರೋ, ಅವರು ಅನಾಯಾಸವಾಗಿ ಭವಸಾಗರವಂ ದಾಟಿ ಪರಂಪಾರವಂ ಪೊಂದುವರು. ಸಂಸಾರವಂ ಸಾಗರರೂಪವಾಗಿ, ಶೃತಿ ಸ್ಮೃತಿಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಇದರಲ್ಲಿ ಜನ್ಮಮೃತ್ಯು ರೂಪವಾದ ಜಲವೂ, ರಾಗಾದಿಗಳಾದ ಮಕರ ಮತ್ಸ್ಯಾದಿ ಜಂತುಗಳೂ, ಶೋಕರೂಪವಾದ ವಡವಾನಲವೂ, ಸುಖದುಃಖಾಕಾರವಾದ ವೃತ್ತಿಗಳ ತರಂಗವೂ, ಭ್ರಮರೂಪವಾದ ಸುಳಿಯೂ ಇರುವದು. ಈ ಸಂಸಾರ ಸಾಗರದ ಪಾರವು ಪರಬ್ರಹ್ಮವಾಗಿರುವದು. ಯಾವದನ್ನು ಪೊಂದಿ ಪುನಃ ಸಂಸಾರದಲ್ಲಿ ಪತನವಾಗುವದಿಲ್ಲವೋ, ಅದನ್ನು "ನಸಪುನರಾವರ್ತತೆ" ಈ ಶೃತಿಯು ಪ್ರಸಿದ್ಧವಾಗಿ ಪೇಳಿರುವದು. ಇದನ್ನೇ "ಪರಮಧಾಮ" ವೆಂದು ಗೀತೆಯಲ್ಲಿ ಪೇಳಲ್ಪಟ್ಟಿರುವದು. ಆದ್ದರಿಂದ ಸರ್ವಶೃತಿಗಳ ಸಿದ್ಧಾಂತ ರೂಪವಾದ ಈ ವಿಜ್ಞಾನ ನೌಕೆಯನ್ನು ಜಿಜ್ಞಾಸುಗಳು ಅವಶ್ಯವಾಗಿ ವಿಚಾರಿಸಬೇಕು.

ಅ॥ ಈಗ ಇದರ ಅನುಬಂಧ ಚತುಷ್ಟಯವನ್ನು ವೇದಾಂತ ಪ್ರತಿಪಾದಿತವಾಗಿ ತೋರಿಸುತ್ತಾರೆ; ಯಾಕೆಂದರೆ—ಅನುಬಂಧವಂ ತಿಳಿದಲ್ಲದೆ ಜಿಜ್ಞಾಸುಗಳಿಗೆ ಗ್ರಂಥದಲ್ಲಿ ಪ್ರವೃತ್ತಿಯಾಗುವದಿಲ್ಲ. ಮತ್ತು ಗ್ರಂಥದ ತಾತ್ಪರ್ಯವೂ ತಿಳಿಯಲಾಗುವದಿಲ್ಲ. ಆದ್ದರಿಂದ ಅನುಬಂಧವನ್ನವಶ್ಯವಾಗಿ ತಿಳಿಯಬೇಕು. ಆ ಅನುಬಂಧವಾವುದೆಂದರೆ—

## ॥೪॥ ಅನುಬಂಧ ಚತುಷ್ಟಯ ವರ್ಣನೆ.

(೧) ಅಧಿಕಾರಿ (೨) ಸಂಬಂಧ (೩) ವಿಷಯ (೪) ಪ್ರಯೋಜನ, ಈ ನಾಲ್ಕಕ್ಕೆ ಅನುಬಂಧವೆಂದು ಪೆಸರು. [ಚತುರ್ದಿಕ್ಕುಗಳಲ್ಲಿಯೂ ನಾಲ್ಕು ಗೋಡೆಗಳಿಲ್ಲದಿದ್ದರೆ, ಗೃಹಶೋಭಿಸದಂತೆ, ಅನುಬಂಧ ಚತುಷ್ಟಯಗಳಿಲ್ಲದಿದ್ದರೆ ಗ್ರಂಥವು ಶೋಭಿಸುವದಿಲ್ಲ; ಆದ್ದರಿಂದ ಅನುಬಂಧ ಬೇಕು ]

೧—ಅಧಿಕಾರಿ—ಮಲವಿಕ್ಷೇಪದೋಷದಿಂ ರಹಿತನಾಗಿ, ನಾಲ್ಕು ಸಾಧನಗಳಿಂದೊಡಗೂಡಿದವನಾಗಿ, ಸ್ವರೂಪವಂ ಮರಸಿದ ಅಜ್ಞಾನಮಾತ್ರ

ಉಳ್ಳವನಾಗಿ ಯಾವನಿರುವನೋ, ಅವನೇ ಈ ಗ್ರಂಥಕ್ಕೆ ಅಧಿಕಾರಿಯು. ಅದನ್ನು ಈ ಗ್ರಂಥದ ಪ್ರಥಮ ಶ್ಲೋಕದಲ್ಲಿ ತೋರಿಸುತ್ತಾರೆ. ಈ ಅಧಿಕಾರಿಯ ಪ್ರಕ್ರಿಯಗಳು ಪ್ರಥಮ ಶ್ಲೋಕದ ಟೀಕಿನಲ್ಲಿ ಸ್ಪಷ್ಟವಾಗುವದು.

**೩—ಸಂಬಂಧ**—ಪ್ರತಿಪಾದಕ ಪ್ರತಿಪಾದ್ಯಭಾವವು ಗ್ರಂಥಕ್ಕೂ ಬ್ರಹ್ಮಕ್ಕೂ ಸಂಬಂಧವೆನಿಸುವದು. ಹಾಗೆಯೇ ಜ್ಞಾನಕ್ಕೂ ಗ್ರಂಥಕ್ಕೂ ಜನ್ಯಜನಕಭಾವ ಸಂಬಂಧವಿರುವದು. ಮತ್ತು ಅಜ್ಞಾನಕ್ಕೂ ಗ್ರಂಥಕ್ಕೂ ನಿವೃತ್ಯನಿವರ್ತಕಭಾವ ಸಂಬಂಧವಿರುವದು. ಇನ್ನು ಪ್ರಯೋಜನಕ್ಕೂ ಅಧಿಕಾರಿಗೂ ಪ್ರಾಪ್ಯಪ್ರಾಪಕಭಾವ ಸಂಬಂಧವಿರುವದು. ಹೀಗೆಯೇ ಉಳಿದ ಸಂಬಂಧಗಳನ್ನು ತಿಳಿದುಕೊಳ್ಳತಕ್ಕದ್ದು.

**ಶಂಕಾ;**—ಬ್ರಹ್ಮವು ವಾಣಿಗೆ ವಿಷಯವಲ್ಲವೆಂದು ಶೃತಿಯು ಹೇಳಿರುವದು, ಅದರೊಡನೆ ಗ್ರಂಥಕ್ಕೆ ಪ್ರತಿಪಾದಕ ಪ್ರತಿಪಾದ್ಯಭಾವಸಂಬಂಧವಂ ಹೇಳಲು ಹ್ಯಾಗೆ ಸಂಭವಿಸೀತು ?

**ಸಮಾಧಾನ:**—ಸೂಚೀಕಟಾಹನ್ಯಾಯದಿಂದ ಮಾಡಿರುವದು. ಹ್ಯಾಗೂ ಶಬ್ದದ ಶಕ್ತಿವೃತ್ತಿಯಿಂದ ಬ್ರಹ್ಮವಂ ಪ್ರತಿಪಾದಿಸಲಾಗುವದಿಲ್ಲ; ಆದರೂ ಲಕ್ಷಣಾವೃತ್ತಿಯಿಂದ ಶಬ್ದವು ಬ್ರಹ್ಮವಂ ಬೋಧಿಸುವದು. ಇದರ ಪ್ರಕ್ರಿಯವು ಐದನೇ ಶ್ಲೋಕದ ವ್ಯಾಖ್ಯಾನದಲ್ಲಿ ಸ್ಪಷ್ಟವಾದೀತು! ಲಕ್ಷ್ಯದ ಜ್ಞಾನವೂ ಲಕ್ಷಣದ ರೂಪವೂ ಸಹ ಶಕ್ಯಾರ್ಥವಿನಃ ಆಗುವದಿಲ್ಲ; ಆದಕಾರಣ ಅಧ್ಯಾರೋಪ ಅಪವಾದ ನ್ಯಾಯವಾಗಿ, ಬ್ರಹ್ಮಜ್ಞಾನವು ಶಬ್ದದಿಂದಾಗುತ್ತಿರುವದು. ಇದರಿಂದ ಪ್ರತಿಪಾದಕ ಪ್ರತಿಪಾದ್ಯಭಾವ ಸಂಬಂಧ ಉಂಟಾಗಿರುವುದು.

**೪—ವಿಷಯ**—ಜೀವಬ್ರಹ್ಮರ ಏಕತ್ವವು ಈ ಗ್ರಂಥದ ವಿಷಯವಾಗಿರುವುದು.

**ಶಂಕಾ;**—ಜೀವನು ರಾಗಾದಿ ಕ್ಲೇಶದಿಂದೊಡಗೂಡಿದವನು, ಅವನಿಗೆ ಕ್ಲೇಶರಹಿತವಾದ ಬ್ರಹ್ಮದೊಡನೆ ಅಭೇದವೆಂತು ಸಂಭವಿಸೀತು ?

**ಸಮಾಧಾನ:**—ಹ್ಯಾಗೂ ಅಂತಃಕರಣ ವಿಶಿಷ್ಟಕ್ಕೆ ಬ್ರಹ್ಮದೊಡನೆ ಏಕತ್ವವಾಗುವದೂ ಇಲ್ಲ; ಹಾಗಾದರೂ ಅಂತಃಕರಣಭಾಗವಾದ ವಿಶೇಷಣವಂ ಬಿಟ್ಟು, ಚೇತನಭಾಗವಾದ ವಿಶೇಷ್ಯಕ್ಕೆ ಬ್ರಹ್ಮದೊಡನೆ ಏಕತ್ವಸಂಭವಿಸುವದು.

ಎಂತೆಂದರೆ—ರಾಗಾದಿಕ್ಲೇಶಗಳು ವಿಶೇಷಣದ ಧರ್ಮವು, ವಿಶೇಷ್ಯರೂಪವಾದ ಸಾಕ್ಷಿಯು ಸರ್ವಕ್ಲೇಶಗಳಿಂ ರಹಿತವಾಗಿರುವದು; ಅದಕ್ಕೆ ಬ್ರಹ್ಮದೊಡನೆ ಸದಾ ಅಭೇದವಿದೆ. ಇದು ಸರ್ವವೇದಾಂತಗಳ ಸಿದ್ಧಾಂತವು. ಇದರ ಪ್ರಕ್ರಿಯವು ವಿಚಾರಸಾಗರದಲ್ಲಿ ವಿಸ್ತಾರವಾಗಿದೆ.

೪—ಪ್ರಯೋಜನ—ಪರಮಾನಂದಪ್ರಾಪ್ತಿಯೂ, ಮೂಲಸಹಿತ ಅನರ್ಥದ ನಿವೃತ್ತಿಯೂ ಇವು ಗ್ರಂಥದ ಮುಖ್ಯ ಪ್ರಯೋಜನವೆನಿಸುವದು. ಜ್ಞಾನವು ಅವಾಂತರ ಪ್ರಯೋಜನವೆನಿಸುವದು.

ಶಂಕಾ:—ಪರಮಾನಂದವು ಜೀವನಸ್ವರೂಪವೇ ಯೆಂದು ವೇದದಲ್ಲಿ ಪೇಳಿರುವದು, ಅವನಿಗೆ ಪುನಃ ಪರಮಾನಂದಪ್ರಾಪ್ತಿಯೆಂ ಪೇಳುವದು ಅಸಂಭವವು.

ಸಮಾಧಾನ:—ಹ್ಯಾಗೂ ಪರಮಾನಂದವು ಜೀವನಸ್ವರೂಪವೇ ಆಗಿದ್ದರೂ, ಅಜ್ಞಾನಕಾಲದಲ್ಲದು ಪ್ರಕಟವಾಗುವದಿಲ್ಲ; ಮತ್ತೇನೆಂದರೆ—ಜ್ಞಾನಕಾಲದಲ್ಲಿಯೇ ಪ್ರಕಟವಾಗುವದು. ಆದಕಾರಣ ಕಂಠಚಾಮಿಾಕರ [ಕತ್ತಿನ ಮಾಲಿಕೆ] ನ್ಯಾಯದಂತೆ ಪ್ರಾಪ್ತಿಗೆ ಪ್ರಾಪ್ತಿಯೂ ಸಂಭವಿಸುವದು.

ಹೀಗೆ ನಾಲ್ಕು ಅನುಬಂಧಗಳು ಸಾಮಾನ್ಯವಾಗಿ ನಿರೂಪಿಸಲ್ಪಟ್ಟಿದೆ. ಗ್ರಂಥ ವಿಸ್ತಾರವಾಗುವದೆಂಬ ಭಯದಿಂದ ಅಧಿಕವಾಗಿ ವಿವರಿಸಲಿಲ್ಲ.

೧—ಪೂರ್ವದಲ್ಲಿ ಪೇಳಿದ ಅಧಿಕಾರಿಯ ಲಕ್ಷಣದಲ್ಲಿ ಒಂದು ಜಿಜ್ಞಾಸವಿರುವದು ಏನೆಂದರೆ—ಮಲವಿಕ್ಷೇಪದೋಷಗಳ ನಿವೃತ್ತಿಯು ಯಾವ ಸಾಧನದಿಂದಾಗುವದು? ಮತ್ತು ನಾಲ್ಕು ಸಾಧನಗಳ್ಯಾವವು? ಆ ನಾಲ್ಕು ಸಾಧನಗಳು ಯಾವ ಉಪಾಯದಿಂ ಪುಟ್ಟುವದು? ಮತ್ತು ಅಜ್ಞಾನದ ನಿವೃತ್ತಿಗೆ ಸಾಧನವೇನು? ಇನ್ನು ಅಜ್ಞಾನನಿವೃತ್ತಿಯಾದರೂ ಅಧಿಕಾರಿಗೆ ಏನುಲಾಭವಾಗುವದು? ಇಷ್ಟು ಪ್ರಶ್ನೆಗಳಿಗೆ ಈ ಪ್ರಥಮಶ್ಲೋಕದಿಂದಲೂ, ಅದರ ವ್ಯಾಖ್ಯಾನದಿಂದಲೂ ಉತ್ತರವಂ ಪೇಳುತ್ತಾರೆ.

೨—ಶ್ರೀಮಚ್ಛಂಕರಾಚಾರ್ಯರು ತಮ್ಮ ಶಿಷ್ಯರಿಗೋಸುಗ ಸಾಧನಗಳಿಂದೊಡಗೂಡಿದ ತತ್ತ್ವೋಪದೇಶವನ್ನು ದಿಗ್ವಿಜಯಾದಿ ಗ್ರಂಥಗಳಲ್ಲಿ ಮಾಡಿದ್ದಾರೆ; ಅದರ ಸಾರಸಂಗ್ರಹ ರೂಪವಾದ ಈ ಗ್ರಂಥದಲ್ಲಿ ಎಲ್ಲಾ ಪದಾರ್ಥಗಳನ್ನು ತೋರಿಸಿದ್ದಾರೆ, ಅವುಗಳಲ್ಲಿ ಮೊದಲು ಅಧಿಕಾರಿಯ ಸಾಧನಗಳಂ ತೋರಿಸುತ್ತಾ ತಮ್ಮ ಅನುಭವವನ್ನು ಪೇಳುತ್ತಾರೆ—

## ॥ ಶ್ರೀ ॥ ಪ್ರಥಮಸುಬೋಧನೋಪದೇಶ—॥ ೧ ॥

—॥ ತಪೋಯಜ್ಞದಾನಾದಿಭಿರಿತಿ ॥—

ಮೂ—ತಪೋ ಯಜ್ಞದಾನಾದಿಭಿಃ ಶುದ್ಧಬುದ್ಧಿ
ರ್ವಿರಕ್ತೋ ನೃಪಾದೌ ಪದೇ ತುಚ್ಛಬುದ್ಧ್ಯಾ ॥
ಪರಿತ್ಯಜ್ಯ ಸರ್ವಂ ಯದಾಪ್ನೋತಿ ತತ್ವಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೧ ॥

ತಪೋಯಜ್ಞದಾನಾದಿಗಳಿಂದ ಶುದ್ಧವಾದ ಬುದ್ಧಿಯುಳ್ಳವನಾಗಿ ಅದರಿಂದ ನೃಪಾದಿ ಪದವಿಗಳಲ್ಲಿ ಮಿಥ್ಯಾತ್ವನಿಶ್ಚಯವಂ ಪಡೆದು ಯಾವನು ವಿರಕ್ತನಾಗಿರುವನೋ, ಅವನು ಸರ್ವವನ್ನು ಪರಿತ್ಯಜಿಸಿ ಯಾವ ನಿತ್ಯರೂಪವಾದ ಪರಬ್ರಹ್ಮತತ್ವವಂ ಪೊಂದುವನೋ, ಅದೇ ನಾನಾಗಿರುವೆನೆಂಬುದು ಪದದ ಅರ್ಥ.

### ೧:—ತಪಶಬ್ದದ ಅರ್ಥ.

ಅಪರೋಕ್ಷಾನುಭೂತಿ 3

ಟೀಕಾ—ಸ್ವವರ್ಣಾಶ್ರಮದ ಧರ್ಮಾನುಷ್ಠಾನವು ತಪವೆನಿಸುವದು. ಅದು ಬ್ರಾಹ್ಮಣಾದಿ ನಾಲ್ಕು ವರ್ಣಗಳ ಮತ್ತು ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳ ಧರ್ಮವೆಂದು ಮನ್ವಾದಿಸ್ಮೃತಿಗಳಲ್ಲಿಯೂ, ಭಾರತ, ಭಾಗವತ, ಧರ್ಮಸಿಂಧ್ವಾದಿ ಶಾಸ್ತ್ರಗಳಲ್ಲಿಯೂ, ಪ್ರಸಿದ್ಧವಾಗಿ ಪೇಳಿರುವದು. ಅಥವಾ ಕರಣಗ್ರಾಮದ ಸಂಯಮದ ಪೆಸರು ತಪವೆನಿಸುವದು. ಇನ್ನು ಕೃಚ್ಛ್ರ ಚಾಂದ್ರಾಯಣಗಳಿಗೂ ತಪವೆಂಬ ನಾಮವಿರುವದು. ಹಾಗೆಯೇ ವೈರಾಗ್ಯಕ್ಕೂ ತಪವೆಂದೆನ್ನುವರು. ಮತ್ತು ವಿಚಾರಕ್ಕೂ ಕೂಡ ತಪವೆಂದು ಪೇಳಿರುವರು. ಹೀಗೆ 'ತಪ' ಶಬ್ದದ ಅರ್ಥವು ಬಹು ಪ್ರಕಾರವಾಗಿ ಶಾಸ್ತ್ರಗಳಲ್ಲಿ ವರ್ಣಿಸಿರುವವು. ಇದಲ್ಲದೆ ಗೀತೆಯಲ್ಲಿ ಸಾತ್ವಿಕ, ರಾಜಸ, ತಾಮಸ ಭೇದದಿಂದ ಮೂರು ಬಗೆಯಾಗಿ ತಪವಂ ಪೇಳಿರುವದು. ಅವುಗಳಲ್ಲಿ ಸಾತ್ವಿಕ ತಪವು ಅನುಷ್ಠಾನೀಯವು. ಅದಾದರೂ [೧] ಶಾರೀರ, [೨] ವಾಙ್ಮಯ, [೩] ಮಾನಸವೆಂಬ ಭೇದದಿಂದ ಮೂರು ವಿಧವಾಗಿರುವದು. ಅವುಗಳಲ್ಲಿ,

ಗೀತ 17—14 (೧) ದೇವತೆಗಳನ್ನೂ, ದ್ವಿಜರನ್ನೂ, ಗುರುಗಳನ್ನೂ, ಪ್ರಾಜ್ಞರನ್ನೂ ಪೂಜಿಸುವದು. ಮತ್ತು ಶೌಚ, ಆರ್ಜವ, ಬ್ರಹ್ಮಚರ್ಯ, ಅಹಿಂಸಾ ಇವೆಲ್ಲವು 'ಶಾರೀರತಪ' ವೆನಿಸುವದು,

(೨) ಅನುದ್ವೇಗಕರತ್ವ, ಸತ್ಯವಚನ ಪ್ರಿಯವಚನ, ಹಿತವಚನೋಚ್ಚಾರಣ, ವೇದಾಭ್ಯಾಸ ಇವೆಲ್ಲವು 'ವಾಙ್ಮಯತಪ' ವೆನಿಸುವದು. ಬಳಿಕ—

(೩) ಮನೋನಿರ್ಮಲತೆ, ಸೌಮ್ಯತೆ, ಮೌನ, ಅಂತಃಕರಣನಿಗ್ರಹ, ಭಾವಸಂಶುದ್ಧಿ ಇವುಗಳೆಲ್ಲ 'ಮಾನಸತಪ' ವೆನಿಸುವದು. ಹೀಗೆ ತಪ ಶಬ್ದವನ್ನು ತಿಳಿದುಕೊಳ್ಳತಕ್ಕದ್ದು.

### ೩:—ಯಜ್ಞಪದದ ಅರ್ಥ.

ಈಶ್ವರಾರ್ಪಣ ಬುದ್ಧಿಯಿಂದ ಸರ್ವಾಂಗ ಯುಕ್ತವಾಗಿ ಮಾಡಲ್ಪಡುವ ಯಜನವು ಯಜ್ಞವೆನಿಸುವದು. ಅದು ಶ್ರೌತಸ್ಮಾರ್ತ ಭೇದದಿಂದಲೂ, ಅಧಿಕಾರಿಯ ಭೇದದಿಂದಲೂ, ಮುಖ್ಯ ಗೌಣಭೇದದಿಂದಲೂ, ಅನೇಕ ಪ್ರಕಾರವಾಗಿರುವದು. ಬೃಹಸ್ಪತಿಸವನ-ರಾಜಸೂಯ-ವೈಶ್ಯಸ್ತೋಮ ಇತ್ಯಾದಿಗಳು ಶ್ರೌತಯಜ್ಞವೆನಿಸುವವು. ಅವುಗಳನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಯಥಾಕ್ರಮವಾಗಿ ಮಾಡತಕ್ಕದ್ದು. ಇನ್ನು ದೇವಯಜ್ಞ, ಋಷಿಯಜ್ಞ, ಪಿತೃಯಜ್ಞಾದಿ ಪಂಚಮಹಾಯಜ್ಞಗಳುಂಟು, ಅವು ಸ್ಮಾರ್ತಯಜ್ಞವೆನಿಸುವವು. ಅವು ನಿತ್ಯವೂ ಗೃಹಸ್ಥನಿಗೆ ಕರ್ತವ್ಯವಾಗಿರುವದು. ಹಾಗೆಯೇ ದರ್ಶ, ಪೂರ್ಣಮಾಸಾದಿಗಳು ವಾನಪ್ರಸ್ಥರಿಗೆ ಪೇಳಿರುವದು. ಮತ್ತು ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ, ಸ್ವಾಧ್ಯಾಯಯಜ್ಞ, ಜ್ಞಾನಯಜ್ಞ ಮೊದಲಾದವುಗಳನ್ನು ಗೀತೆಯಲ್ಲಿ ಗೌಣಯಜ್ಞವೆಂದು ಪೇಳಿರುವದು. ಅದು ಅವರವರ ಅಧಿಕಾರಾನುಸಾರ ಎಲ್ಲಾ ಆಶ್ರಮಿಗಳಿಗೂ ಮಾಡತಕ್ಕದ್ದಾಗಿರುವದು.

### ೪:—ಈಗ ದಾನಶಬ್ದದ ಅರ್ಥವಂ ಪೇಳುವರು.

ದಾನವು ಸಾತ್ವಿಕ, ರಾಜಸ, ತಾಮಸ ಭೇದದಿಂದ ಮೂರು ಬಗೆಯಾಗಿ ಭಗವಂತನು ಪೇಳಿರುವನು. ಅವುಗಳಲ್ಲಿ ಮುಮುಕ್ಷುಗಳಿಗೆ ಸಾತ್ವಿಕದಾನವು ದಾತವ್ಯವಾಗಿರುವದು. ಉತ್ತಮದೇಶ, ಉತ್ತಮಕಾಲಗಳಲ್ಲಿ ಉತ್ತಮಪಾತ್ರರಂ ಕುರಿತು ಯತ್ಕಿಂಚಿತ್ ಯಾವದು ಕೊಡಲ್ಪಡುವದೋ, ಅದು ಸಾತ್ವಿಕ ದಾನವೆನಿಸುವದು. ಅದು ಅನ್ನದಾನ, ವಸ್ತ್ರದಾನ, ಶರೀರಕ್ಕೆ ಸಮತೂಕವಾದ ಹಿರಣ್ಯದಾನ, ಗೋದಾನ ಮೊದಲಾದ ದ್ರವ್ಯಸಾಧ್ಯದಾನಗಳು ಸರ್ವರಿಗೂ ಯಥಾಶಕ್ತಿ ದಾತವ್ಯವಾಗಿರುವದು. ಮತ್ತು ದಾನಕ್ಕೆ ಪಾತ್ರರಾದವರ ಭೇದವು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವದು. ಎಲ್ಲಾ ದಾನಗಳಲ್ಲಿ ಅನ್ನದಾನ ಪ್ರಧಾನವು.

ಅದಕ್ಕೆ ಸರ್ವರೂ ಅಧಿಕಾರಿಗಳಾಗಿರುವರು. ಮತ್ತು ಧನದ ದಾನದಲ್ಲಿ ಪಾತ್ರ ಅಪಾತ್ರರ ಅವಶ್ಯವಿಚಾರ, ಕರ್ತವ್ಯವಾಗಿದೆ. ಇಲ್ಲಿನವರಿವಿಗೆ ತಪ, ಯಜ್ಞ, ದಾನಗಳೆಂಬ ಮೂರು ಪದಗಳಿಗೆ ವ್ಯಾಖ್ಯಾನ ಮಾಡಲ್ಪಟ್ಟಿತು. ಬಳಿಕ,

## ೪:—ಆದಿಪದದ ಅರ್ಥ.

ಆದಿ ಶಬ್ದದಿಂದ ಪೇಳಲ್ಪಡದಿರುವ ಸರ್ವ ಕರ್ಮಗಳನ್ನೂ ಸಗುಣೋಪಾಸನೆಯನ್ನೂ ಸಹ ಗ್ರಹಿಸಿಕೊಳ್ಳಬೇಕು. ಯಾಕೆಂದರೆ—ನಿತ್ಯನೈಮಿತ್ತಿಕಾದಿ ಕರ್ಮವೂ ಪಾಪಗಳ ನಾಶಕವೆಂದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವವು. ಮತ್ತು ತೀರ್ಥಸ್ನಾನಾದಿಗಳೂ ಕೂಡ ಚಿತ್ತಶುದ್ಧಿಗೆ ಹೇತುವೆಂದು ಪೇಳಿಇುವದು ಆದ್ದರಿಂದ ಅವುಗಳನ್ನೂ ಮಾಡಬೇಕು. ಗಂಗಾದಿ ನದಿಗಳ ಪೆಸರು ತೀರ್ಥವೆನಿಸಿಕೊಳ್ಳುವದು. ಆದರೆ, ಗುರುಪಾದೋದಕವು ಪರಮ ತೀರ್ಥವಾಗಿರುವದು. ಅದೆಂತೆಂದರೆ—ಸಪ್ತಸಾಗರ ಪರ್ಯಂತವಾದ ತೀರ್ಥಸ್ನಾನಾದಿಗಳ ಫಲವು ಗುರುರಂಘ್ರಿಜಲದ ಸಹಸ್ರಾಂಶದಿಂದಲೂ ದುರ್ಲಭವೆಂದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಇನ್ನು ಸತ್ಯ, ಕ್ಷಮಾ, ಇಂದ್ರಿಯನಿಗ್ರಹ, ಸರ್ವಭೂತಗಳಮೇಲೂ ದಯಾ, ಆರ್ಜವ ಈ ಸರ್ವವೂ ಅಂತರ ತೀರ್ಥವಾಗಿರುವದು. ಅವೂ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವದು. ದಯಾ, ಕ್ಷಮಾ, ಅನಸೂಯಾ, ಶೌಚ, ಅನಾಯಾಸ, ಮಂಗಳ, ಅಕಾರ್ಪಣ್ಯ, ಅಸ್ಪೃಹ ಇವೆಂಟು ಸರ್ವವರ್ಣಾಶ್ರಮದ ಸಾಧಾರಣ ಧರ್ಮವಾಗಿರುವದು. ಇತ್ಯಾದಿ ಕರ್ಮಗಳನ್ನೂ ಪರಮೇಶ್ವರನ ಧ್ಯಾನಲಕ್ಷಣ ಉಪಾಸನೆಯನ್ನೂ ಮಾಡಬೇಕು. ಆದಿ ಶಬ್ದದಿಂದ ಆಚಾರ್ಯನಂ ತೋರಿಸಿರುವರು. ಆ ಶ್ರೌತ ಸ್ಮಾರ್ತವಾದ ತಪೋಯಜ್ಞದಾನಾದಿ ಕರ್ಮಗಳ ಅನುಷ್ಠಾನದಿಂದ ಬುದ್ಧಿ ಶುದ್ಧವಾಗುವದು. ನಾಮದಿಂದ ಮಲದೋಷ ನಿವೃತ್ತಿಯಾಗುವದು. ಬಳಿಕ ಉಪಾಸನೆಯಿಂದ ಚಿತ್ತಚಂಚಲವೆಂಬ ದೋಷವು ದೂರವಾಗುವದು.

ಶಂಕಾ;—ಕರ್ಮದಿಂದ ಪಿತೃಲೋಕಪ್ರಾಪ್ತಿಯೆಂದು ವೇದದಲ್ಲಿ ಪೇಳಿರುವದು; ಆದಕಾರಣ ಕರ್ಮದಿಂದ ಅಂತಃಕರಣಶುದ್ಧಿಯಂ ಪೇಳುವದು ಸರಿಯಲ್ಲ?

ಸಮಾಧಾನ:—ಸಕಾಮಬುದ್ಧಿಯಿಂ ಮಾಡಿದ ಕರ್ಮದಿಂದಲೇ ಉತ್ತಮಲೋಕಪ್ರಾಪ್ತಿಯೆಂದು ವೇದವು ಪೇಳಿರುವದು. ನಿಷ್ಕಾಮದಿಂದಲ್ಲ; ಮತ್ತು "ಧರ್ಮೇಣಪಾಪಮಪನುದತಿ" ಈ ಶ್ರುತಿಯು ಧರ್ಮಾನುಷ್ಠಾನದಿಂದ

ಪುರುಷನ ಪಾಪರೂಪಮಲದ ನಿವೃತ್ತಿಯನ್ನೇ ಪೇಳಿರುವದು. ಆದ್ದರಿಂದ ತಪೋಯಜ್ಞದಾನಾದಿ ಕರ್ಮಗಳು ನಿಷ್ಕಾಮನಿಗೆ ಅಂತಃಕರಣಶುದ್ಧಿಗೆ ಹೇತುವಾಗಿರುವವು. ಈ ಮಾತು "**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್**" ಈ ಸ್ಮೃತಿವಾಕ್ಯದಲ್ಲಿ ಯಜ್ಞ, ದಾನ ತಪಗಳು, ಬುದ್ಧಿವಂತರಿಗೆ ಪಾವನಕರವೆಂದು ಪ್ರಸಿದ್ಧವಾಗಿ ಪೇಳಿರುವದು. ಆದಕಾರಣ ನಿಷ್ಕಾಮ ಕರ್ಮದಿಂದ ಪಿತೃಲೋಕಾದಿಗಳ ಪ್ರಾಪ್ತಿಯಾಗುವದಿಲ್ಲ; ಮತ್ತೇನೆಂದರೆ— ಅಂತಃಕರಣಶುದ್ಧಿಯಾಗುವದು. ಅದರಿಂದ ಜ್ಞಾನವಾಗಿ, ಮೋಕ್ಷವಾಗುವದು. ಇದು ವೇದದ ಸಿದ್ಧಾಂತವು.

ಶಂಕಾ;—ಜನಕಾದಿಗಳಿಗೆ ಕರ್ಮದಿಂದಲೇ 'ಸಂಸಿದ್ಧಿಯೆಂದು ಸ್ಮೃತಿಯಲ್ಲಿ ಪೇಳಿರುವದು, ಆದ್ದರಿಂದ ಮುಮುಕ್ಷುಗಳಿಗೆ ಕರ್ಮದಿಂದಲೇ ಮೋಕ್ಷವಾದೀತು. ಜ್ಞಾನದಿಂದೇನು ?

**ಸಮಾಧಾನ:**—"**ನಾಸ್ತ್ಯಕೃತಕೃತೇನ ಕರ್ಮಣಾ ನ ಪ್ರಜಯಾ**" ಇತ್ಯಾದಿ ಶ್ರುತಿಗಳಲ್ಲಿ ಕರ್ಮಗಳು ಮೋಕ್ಷಕ್ಕೆ ಹೇತುವಲ್ಲವೆಂದು ಪ್ರಸಿದ್ಧಪಡಿಸಿರುವವು. ಮತ್ತು ಸ್ಮೃತಿಯಲ್ಲಿ ಜನಕಾದಿಗಳಿಗೆ ಕರ್ಮದಿಂದಲೆ ಸಂಸಿದ್ಧಿಯೆಂದು ಪೇಳಿರುವದಲ್ಲವೇ; ಆ ಸಂಸಿದ್ಧಿಶಬ್ದಕ್ಕೆ ಮೋಕ್ಷವೆಂದರ್ಥವಲ್ಲ. ಮತ್ತೇನೆಂದರೆ—ಅಂತಃಕರಣಶುದ್ಧಿಯೆ ಸಂಸಿದ್ಧಿಶಬ್ದಕ್ಕೆ ಅರ್ಥವು.

ಇನ್ನು ಕರ್ಮದಿಂದಾಗುವ ಉತ್ಪಾದ್ಯ-ಪ್ರಾಪ್ಯ-ಸಂಸ್ಕಾರ್ಯ-ವಿಕಾರ್ಯರೂಪವಾದ ಫಲಗಳು ಅನಿತ್ಯವೆನಿಸುವವು. ಹಾಗೆ ಮೋಕ್ಷವೂ ಕರ್ಮದ ಫಲವೆಂದಂಗೀಕರಿಸಿದರೆ ಅನಿತ್ಯವಾದೀತು ! ಮತ್ತು ಏಕಭಾವಿಕವಾದಿಯು, ಕಾಮ್ಯನಿಷಿದ್ಧಗಳಂ ಬಿಟ್ಟು ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನದಿಂದ ಮೋಕ್ಷವಾಗುವದೆಂತಲೂ, ಅಥವಾ ಒಂದು ಭಾವೀಜನ್ಮ ಉಂಟಾಗುವದೆಂತಲೂ, ಅಂಗೀಕರಿಸಿರುವನು. ಆ ವಾದವನ್ನು ಭಾಷ್ಯದಲ್ಲಿ ನಿರಾಕರಣೆ ಮಾಡಿರುವರು. ಮತ್ತು ವಾರ್ತಿಕಕಾರರು (**ಸುರೇಶ್ವರಾಚಾರ್ಯರು**) ನೈಷ್ಕರ್ಮಸಿದ್ಧಿಯಲ್ಲಿ ಬಹುಪ್ರಕಾರವಾಗಿ ಖಂಡನೆಯಂ ಮಾಡಿರುವರು. ಆದಕಾರಣ ಕರ್ಮದಿಂದ ಮುಮುಕ್ಷುಗಳಿಗೆ ವಾಂಛಿತವಸ್ತು ಪ್ರಾಪ್ತಿಯಾಗುವದಿಲ್ಲ; ಮತ್ತೇನೆಂದರೆ— ಚಿತ್ತಶುದ್ಧಿಯೇ ಆಗುವದು. ಈ ವಿಷಯವನ್ನು "**ಚಿತ್ತಸ್ಯ ಶುದ್ಧಯೇ ಕರ್ಮ ನತು ವಸ್ತೂಪಲಬ್ಧಯೇ**" ವಾಕ್ಯಗಳಿಂದ, ಗ್ರಂಥಾಂತರಗಳಲ್ಲಿ

ಪ್ರಸಿದ್ಧವಾಗಿ ಪೇಳಿರುವವು. ಕರ್ಮಯೋಗಿಯು ಶರೀರದಿಂದಲೂ, ಮನದಿಂದಲೂ, ಬುದ್ಧೀಂದ್ರಿಯಗಳಿಂದಲೂ ಯಾವ ಕರ್ಮವಂ ಮಾಡುವನೋ, ಅದು ಚಿತ್ತಶುದ್ಧಿಗೋಸ್ಕರವಾಗುವದು. ಹೀಗೆ ಸ್ಮೃತಿಯಲ್ಲಿಯೂ ಪೇಳಿರುವದು. ಆದ್ದರಿಂದ ಕರ್ಮವೆಲ್ಲವೂ ಅಂತಃಕರಣಶುದ್ಧಿಗೆ ಹೇತುವಾಗುವದು. ಅಥವಾ ಚಿತ್ತಶುದ್ಧಿದ್ವಾರಾ ವಿವಿದಿಷಾಕ್ಕೆ ಹೇತುವಾಗುವದು. ಅಥವಾ ವೈರಾಗ್ಯಕ್ಕೆ ಹೇತುವಾಗುವದು. ಅಲ್ಲದೆ ವೈರಾಗ್ಯಾದಿ ಸಾಧನಚತುಷ್ಟಯಕ್ಕೆ ಹೇತುವಾಗುವದು. ಅದರಿಂದ ತತ್ವಜ್ಞಾನವಾಗಿ ಮೋಕ್ಷವಾಗುವದು.

ಪೂರ್ವದಲ್ಲಿ ಪೇಳಿದ ತಪ ಯಜ್ಞ ದಾನಾದಿ ಕರ್ಮಗಳು ವಿವಿದಿಷಾಕ್ಕೆ ಹೇತುವೆಂದು ಪೇಳಿದ್ದು ವೇದದಲ್ಲಿ ಪ್ರಸಿದ್ಧವಾಗಿದೆ. ಆ ಶೃತಿಯಾವದೆಂದರೆ;—

**" ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನದಾನೇನತಪಸಾನಾಶಕೇನ "**

ಎಂಬುದು. ಇದರ ಅರ್ಥವೇನೆಂದರೆ;—ಬ್ರಾಹ್ಮಣನು ಯಜ್ಞದಿಂದಲೂ, ದಾನದಿಂದಲೂ, ತಪದಿಂದಲೂ ಅನಾಶಕದಿಂದಲೂ ವಿವಿದಿಷಾನಾಗುವನು. [ತಿಳಿಯಬೇಕೆಂಬ ಇಚ್ಛೆಗೆ ವಿವಿದಿಷಾ ಎಂದು ಪೆಸರು.] ನಿಷಿದ್ಧಾನಿಷಿದ್ಧಗಳಂ ಸೇವಿಸದೆ ಇರುವದಕ್ಕೆ ಅನಾಶಕವೆಂದು ಪೆಸರು. ಅಥವಾ ಅಹಿಂಸಾವೃತ್ತಿಯ ಪೆಸರು ಅನಾಶಕವಾಗುವದು. ಯಜ್ಞಾದಿಗಳ ಅರ್ಥವು ಹಿಂದೆ ಪೇಳಲ್ಪಟ್ಟಿರುವದು. ಈ ಪ್ರಕಾರವಾಗಿ ಕರ್ಮವು ವಿವಿದಿಷಾಕ್ಕೆ ಕಾರಣವಾಗಿರುವದು. ಮತ್ತು ಈಶ್ವರನು ಯಾವನಿಗೆ ಪ್ರಸನ್ನನಾಗುವನೋ, ಅವನು ವೈರಾಗ್ಯಫಲವಂ ಪೊಂದುವನು. ಈ ರೀತಿಯಾಗಿ ಈಶ್ವರ ಸಮರ್ಪಿತವಾದ ಕರ್ಮಗಳಿಗೆ ವೈರಾಗ್ಯವೆಂಬ ಫಲವು ವ್ಯಾಸಮುನಿಯು ಪೇಳಿರುವನು. ಜಿಹಾಸೆಯ ಪೆಸರು ವೈರಾಗ್ಯವೆನಿಸುವದು. ಈ ಲೋಕದ ಅಥವಾ, ಪರಲೋಕದ ದುಃಖದಾಯಕವಾದ ಭೋಗಗಳು ನನಿಗೆ ಬೇಡಾ, ಎಂದು ತ್ಯಾಗಮಾಡುವ ಇಚ್ಛೆಯ ಪೆಸರು ಜಿಹಾಸೆಯೆನಿಸುವದು.

**ಶಂಕಾ;**—ಸರ್ವ ಪುರುಷರೂ ಭೋಗಗಳನ್ನಪೇಕ್ಷಿಸುವರು. ಆದಕಾರಣ ಎಲ್ಲಾ ಭೋಗಗಳನ್ನು ತೊರೆಯುವದು ಶಕ್ಯವಲ್ಲ.

**ಸಮಾಧಾನ:**—ಹ್ಯಾಗೂ ಮೂಢರು ವಿಷಯ ಭೋಗತ್ಯಾಗವನ್ನಪೇಕ್ಷಿಸುವದಿಲ್ಲ; ಯಾಕೆಂದರೆ;—ಅವರ ಅಂತಃಕರಣವು ಮಲಿನವಾಗಿರುವದು. ಆದ್ದರಿಂದ ಭೋಗಾಭಿಲಾಷೆಯ ತ್ಯಾಗವು ಅವರಿಗೆ ಅಶಕ್ಯ; ಆದಾಗ್ಯು ಪುಣ್ಯ

ಭಾಜನದಿಂದ ಶುದ್ಧಚಿತ್ತರಾದ ಪ್ರೇಕ್ಷಾವಂತರು, ಭೋಗಾಶೆಯಂ ತೊರೆದು ಕೊಳ್ಳುವರು. ಇದಕ್ಕೆ « **ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್** " ಎಂಬಶ್ರುತಿ ಇರುವದು. ಇದರ ಅರ್ಥವೇನೆಂದರೆ;-ಬ್ರಹ್ಮಜಿಜ್ಞಾಸುವು [ಕರ್ಮರಚಿತವಾದ ಸ್ವಾರ್ಗಾದಿ ಲೋಕಗಳನ್ನು ವಿಚಾರಿಸಿ ವೈರಾಗ್ಯವಂ ಪೊಂದುವನು. ಆದ್ದರಿಂದ ಇದೇ ಪರಮೇಶ್ವರನ ಅನುಗ್ರಹವೆನಿಸುವದು. ಭೋಗೈಶ್ವರ್ಯಗಳ ಪ್ರಾಪ್ತಿಯು ಈಶ್ವರಾನುಗ್ರಹವಲ್ಲ. ಹೀಗೆ ಪೇಳಿದ್ದರಿಂದ ಏನು ಸಿದ್ಧವಾಯಿತೆಂದರೆ;—ಈಶ್ವರಾರ್ಪಿತ ಕರ್ಮದಿಂದ ಚಿತ್ತಶುದ್ಧಿದ್ವಾರಾ, ವೈರಾಗ್ಯವುಂಟಾಗುವದು. ಆ ವೈರಾಗ್ಯವನ್ನೀಗ ಆಚಾರ್ಯರು ಪೇಳುವರು.

## ‖ ೬ ‖ ವೈರಾಗ್ಯವರ್ಣನೆ.

(**ವಿರಕ್ತೋನೃಪಾದೌ ಇತಿ**) 'ನೃಪಾದೌ' ಅಂದರೆ ರಾಜನು ಮೊದಲುಗೊಂಡು ಬ್ರಹ್ಮನ ಪರ್ಯಂತವಾಗಿ ಎಷ್ಟು ಭೋಗೈಶ್ವರ್ಯಗಳಿರುವವೋ, ಅವುಗಳಲ್ಲಿ ತುಚ್ಛತ್ವ ನಿಶ್ಚಯದಿಂದ ಶುದ್ಧಚಿತ್ತವುಳ್ಳ ಜಿಜ್ಞಾಸುವು ವಿರಕ್ತನಾಗಿರುವನು. [ವೀತರಾಗನಿಗೆ ವಿರಕ್ತನೆಂದೆನ್ನುವರು] ಆ ವಿರಕ್ತನು ಸರ್ವಸಂಸಾರವನ್ನು ತೃಣದಂತೆ ತುಚ್ಛವೆಂದರಿತಿರುವನು. ಇದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಆದ್ದರಿಂದ ಪರಮ ವೈರಾಗ್ಯವೇ ನಿಷ್ಕಾಮ ಕರ್ಮಗಳ ಫಲವೆನಿಸುವದು. ಯಾವವರಿಗೆ ವೈರಾಗ್ಯ ಪ್ರಕಟವಾಗುವದಿಲ್ಲವೋ, ಆವರಿವಿಗೆ ಜಿಜ್ಞಾಸುವು ಕರ್ಮವನ್ನವಶ್ಯವಾಗಿ ಮಾಡಬೇಕು. ಯಾವಾಗ ತನ್ನ ಹೃದಯದಲ್ಲಿ ಸಂಸಾರಭೋಗಗಳಿಂದ ವೈರಾಗ್ಯ ಉದಯವಾಯಿತೆಂದು ತಿಳಿಯಲ್ಪಡುವದೋ ಮತ್ತು ಮನದಲ್ಲಿ ದುರ್ವಾಸನೆ ಪುಟ್ಟದಿರುವದೋ. ಆಗ ಬುದ್ಧಿಯು ಶುದ್ಧವಾಯಿತೆಂದು ನಿಶ್ಚೈಸಬೇಕು. ಆದಕಾರಣ ವೈರಾಗ್ಯೋದಯಪರ್ಯಂತವೇ ಕರ್ಮವು ಕರ್ತವ್ಯವಾಗಿರುವದು. ಅದರ ಬಳಿಕವಿಲ್ಲ; ಅದನ್ನು « **ತಾವತ್ಕರ್ಮಾಣಿ ಕುರ್ವೀತ ನನಿರ್ವಿದ್ಯೆ ತಯಾವತಾ** " ಈ ಭಾಗವತದ ವಾಕ್ಯದಿಂದ ಎಲ್ಲಿಯವರಿವಿಗೆ ವೈರಾಗ್ಯವಂ ಪೊಂದುವದಿಲ್ಲವೋ ಅಲ್ಲಿಯವರಿವಿಗೂ ಪುರುಷನು ಕರ್ಮವಂ ಮಾಡಬೇಕೆಂತಲೂ, ಮತ್ತು " **ಸಂನ್ಯಸ್ಯ ಶ್ರವಣಂ ಕುರ್ಯಾತ್** " ಈ ಶೃತಿಯು ಚಿತ್ತಶುದ್ಧಿಯಾದ ಬಳಿಕ ಕರ್ಮಸಂನ್ಯಾಸಪೂರ್ವಕವಾಗಿ, ವೇದಾಂತ ಶ್ರವಣವೇ ವೀತರಾಗನಾದ ಜಿಜ್ಞಾಸುವು ಮಾಡ

ಬೇಕೆಂತಲೂ ಫೇಳಿರುವದು. ಆದ್ದರಿಂದ ಮಲವಿಕ್ಷೇಪಗಳ ನಿವೃತ್ತಿಯ ಪರ್ಯಂತವೇ ಕರ್ಮೋಪಾಸನಾರೂಪವಾದ ಬಹಿರಂಗಸಾಧನ ಕರ್ತವ್ಯವಾಗಿರುವದು. ತದನಂತರ ಕರ್ಮತ್ಯಾಗದಿಂದ ಅಂತರಂಗ ಸಾಧನವನ್ನೇ ತತ್ವಜ್ಞಾನಕ್ಕೋಸುಗ ಸಂಪಾದಿಸಬೇಕು.

ಶಂಕಾ;—ಎಲ್ಲಿಯವರಿವಿಗೆ ಜೀವಂತನಾಗಿರುವನೋ, ಅಲ್ಲಿಯವರಿವಿಗೂ ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಬೇಕೆಂದು ವೇದದಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಆದಕಾರಣ ಕರ್ಮತ್ಯಾಗವಾಗತಕ್ಕದ್ದಲ್ಲ. ಇನ್ನು ಜ್ಞಾನ ಕರ್ಮಗಳೆರಡೂ ಸೇರಿ ಮೋಕ್ಷಕ್ಕೆ ಹೇತುವೆನಿಸುವದು. ಇಷ್ಟೇ ಅಲ್ಲ; ಶೃತಿ ಸ್ಮೃತಿಗಳೊಳ್ ಬಹುಸ್ಥಾನಗಳಲ್ಲಿ ಸಮುಚ್ಚಯ ಕೇಳ್ಬಂದಿರುವದು; ಆದಕಾರಣ ಕರ್ಮವು ಸದಾ ಕರ್ತವ್ಯವಾಗಿದೆ.

ಸಮಾಧಾನ:—ವೇದದಲ್ಲಿ ಜೀವಿತಕಾಲದವರಿವಿಗೆ ಕರ್ಮವಂ ಮಾಡಬೇಕೆಂದು ಪೇಳಿರುವದಕ್ಕೆ ಅಭಿಪ್ರಾಯವೇನೆಂದರೆ;—ಕರ್ಮದಲ್ಲಿ ಬಹಿರ್ಮುಖರಿಗೆ ಪ್ರವೃತ್ತಿಯನ್ನುಂಟುಮಾಡುವದರಲ್ಲಿ ತಾತ್ಪರ್ಯ. ಅದರಿಂದ ಚಿತ್ತಶುದ್ಧಿಯನ್ನುಂಟುಮಾಡಿಸಿ, ಪ್ರವೃತ್ತಿ ಮಾರ್ಗವಂ ಬಿಡಿಸಿ ನಿವೃತ್ತಿ ಮಾರ್ಗವಾದ ಸನ್ಯಾಸದಲ್ಲಿಯೇ ಶೃತಿವಿಧಾನ ಗೈದಿರುವದು. ಮತ್ತು ಜ್ಞಾನಕರ್ಮಗಳಿಗೆ ವಿರೋಧವು ಸ್ವಭಾವವಾದ್ದರಿಂದ ಅವೆರಡಕ್ಕೆ ಸಮುಚ್ಚಯವಾಗುವದಿಲ್ಲ; ಆ ಸಮುಚ್ಚಯ ವಾದವನ್ನು ಸೂತ್ರಕಾರರು [ವ್ಯಾಸರು.] ಭಾಷ್ಯಕಾರರು [ಶಂಕರಾಚಾರ್ಯರು] ಬಹುಸ್ಥಾನಗಳಲ್ಲಿ ಖಂಡಿಸಿರುವರು. ಮತ್ತು ಶ್ರೀಮದ್ ಗೀತೆಯಲ್ಲಿಯೂ ಸಮುಚ್ಚಯ ವಾದವನ್ನು ಪ್ರಸಿದ್ಧವಾಗಿ ನಿಷಿದ್ಧಮಾಡಲ್ಪಟ್ಟಿರುವದು. ಈ ಮಾತು ಮುಂದೆ ಸ್ಪಷ್ಟವಾದೀತು. ಇನ್ನು ಶೃತಿಸ್ಮೃತಿಗಳಲ್ಲಿ ಕಾಣ್ಬಂದಿರುವ ಕರ್ಮಜ್ಞಾನ ಸಮುಚ್ಚಯವು ಸಮಸಮುಚ್ಚಯವಲ್ಲ; ಮತ್ತೇನೆಂದರೆ, ಕ್ರಮಸಮುಚ್ಚಯವಾಗಿರುವದು. ಆದ್ದರಿಂದ ಇಲ್ಲಿ ಏನು ಸಿದ್ಧವಾಯಿತೆಂದರೆ ;—

ನಿಷ್ಕಾಮಕರ್ಮದ ಫಲ ಚಿತ್ತಶುದ್ಧಿ, ಅಥವಾ, ಚಿತ್ತಶುದ್ಧಿ ಮೂಲಕ ವಿವಿದಿಷಾ, ಅಥವಾ, ವಿಷಯಗಳಲ್ಲಿ ವೈರಾಗ್ಯ, ಅಥವಾ ವೈರಾಗ್ಯಾದಿ ಚತುಷ್ಟಯ ಸಾಧನಗಳ ಪ್ರಾಪ್ತಿ ಆಗಲು, ತದನಂತರ, ಕರ್ಮತ್ಯಾಗವಂ ಮಾಡಿ ತತ್ವವಿಚಾರವೇ ಮಾಡಬೇಕು. ಅದನ್ನು,

A · ९२।८३। श्रीति असकेना धर्म, अहिंसा



ಬ್ರ—" ಅಥಾತೋ ಬ್ರಹ್ಮಜಿಜ್ಞಾಸಾ " ಈ ವ್ಯಾಸಸೂತ್ರದಲ್ಲಿಯೂ, ಚತುಷ್ಟಯ ಸಾಧನ ಪ್ರಾಪ್ತಿಯಾದ ಬಳಿಕ ಉತ್ಕಟ ಜಿಜ್ಞಾಸಾಪೂರ್ವಕವಾಗಿ, ಬ್ರಹ್ಮವಿಚಾರವೇ ಮಾಡಬೇಕೆಂದು ಪೇಳಿರುವದು. ಆ ಸಾಧನ ಚತುಷ್ಟಯವು ಈಶ್ವರಾರ್ಪಿತ ಕರ್ಮದಿಂದಲೂ, ಈಶ್ವರನ ಪ್ರಸನ್ನತೆಯಿಂದಲೂ, ಆಗುವದು. ಅದನ್ನು ಮತ್ತೊಂದು ಶಾಸ್ತ್ರದಲ್ಲಿಯೂ ತನ್ನ ವರ್ಣಾಶ್ರಮದ ಧರ್ಮದಿಂದಲೂ, ತಪದಿಂದಲೂ, ಸರ್ವಭೂತ ದಯಾಲಕ್ಷಣದಿಂದಲೂ, ಮತ್ತು ಹರಿತೋಷಣ ಧರ್ಮದಿಂದಲೂ ಪುರುಷರಿಗೆ ವೈರಾಗ್ಯಾದಿ ಸಾಧನಚತುಷ್ಟಯ ಪ್ರಕಟವಾಗುವದೆಂದು ಪೇಳಿರುವದು. ಆ ನಾಲ್ಕು ಸಾಧನಗಳ ಪೆಸರು ಯಾವವೆಂದರೆ ;—

## ॥ ೭ ॥ ಸಾಧನ ಚತುಷ್ಟಯ.

(೧) ವಿವೇಕ, (೨) ವೈರಾಗ್ಯ, (೩) ಶಮಾದಿಷಟ್‌ಸಂಪತ್ತಿ, (೪) ಮುಮುಕ್ಷುತ್ವ.

ಎಲ್ಲಿ ವೈರಾಗ್ಯ ಮೊದಲು ಪೇಳಿರುವದೋ, ಅದು ಬಲಿಷ್ಠವಾದ್ದರಿಂದ ಅನುಕ್ರಮದಿಂ ಪೇಳಿರುವದು. ಕ್ರಮದಿಂದಾದರೆ ನಿತ್ಯಾನಿತ್ಯ ವಸ್ತುವಿವೇಕವೇ ಪ್ರಥಮವೆನಿಸುವದು.

ಅ—ಈಗ ಆ ನಾಲ್ಕು ಸಾಧನಗಳಿಗೆ ಕ್ರಮವಾಗಿ ಲಕ್ಷಣವಂ ಪೇಳುವರು.

**೧ :—ವಿವೇಕ :**—ಆತ್ಮನು ನಿತ್ಯನಾಗಿಯೂ, ಸುಖರೂಪನಾಗಿಯೂ ಇರುವನು. ಅವನಿಂ ಭಿನ್ನವಾಗಿ ದೃಶ್ಯವಾಗುವ ಜಗತ್ತೆಲ್ಲವು ಅನಿತ್ಯವಾಗಿಯೂ, ದುಃಖರೂಪವಾಗಿಯೂ ಇರುವದು. ಹೀಗೆ ಅರಿಯುವದಕ್ಕೆ ವಿವೇಕವೆಂದು ಪೆಸರು. ಆ ವಿವೇಕದಿಂದ ವೈರಾಗ್ಯ ಪುಟ್ಟುವದು. ಅದೆಂತೆಂದರೆ;— ಯಾವ ಪದಾರ್ಥವು ಅನಿತ್ಯವೆಂದು, ದುಃಖರೂಪವೆಂದು ನಿಶ್ಚಯಿಸಲ್ಪಡುವದೋ, ಅದರಲ್ಲಿಯೇ ಹೇಯಬುದ್ಧಿ ಉಂಟಾಗುವದು. ಹ್ಯಾಗೆ ಮೃಗತೃಷ್ಣಾ ಜಲಾದಿಗಳನ್ನೂ, ವಿಷಸಂಯುಕ್ತವಾದ ಅನ್ನಾದಿಗಳನ್ನೂ ಮಿಥ್ಯಾದುಃಖಪ್ರದವೆಂದು ತಿಳಿಯುವದ್ದರಿಂದ ಅವುಗಳಲ್ಲಿ ಹೇಯಬುದ್ಧಿಯುಂಟಾಗುವದೋ, ಹಾಗೆ ವಿಷಯಭೋಗಗಳಲ್ಲಿಯೂ, ಶಾಸ್ತ್ರೋಕ್ತವಾದ ನಾನಾದೋಷಗಳಂ ನೋಡುವದ್ದರಿಂದ, ಜಿಹಾಸೆಯುಂಟಾಗುವದು. ಈ ದೋಷವು ಮುಂದೆ ಸ್ಪಷ್ಟ [illegible]

ಅ—ಈಗ ವೈರಾಗ್ಯಲಕ್ಷಣವಂ ಪೇಳುವರು.

ಅಪ.೪ ಸೂ.೨. ಉ:—ವೈರಾಗ್ಯ:—ಬ್ರಹ್ಮಲೋಕದ ವರಿವಿಗೂ, ಎಷ್ಟುಬಗೆಯಾಗಿ ಕಾಣಲ್ಪಟ್ಟು ಕೇಳಲ್ಪಡುವ ಭೋಗಗಳಿರುವವೋ ಅವುಗಳೆಲ್ಲವೂ ಕಾಗೆಯ ಮಲದಂತೆಯೂ, ಅಥವಾ ಶ್ವಾನವಮನದಂತೆಯೂ ತ್ಯಾಗಗೈಯುವ ಇಚ್ಛೆಯ ಪೆಸರು ವೈರಾಗ್ಯವೆನಿಸುವದು. ಈ ವೈರಾಗ್ಯವನ್ನು ನಿರ್ಮಲ, ತೀವ್ರತರ, ವಶೀಕಾರವೆಂಬ ಸಂಜ್ಞೆಗಳಿಂದ ವಿದ್ವಾಂಸುಗಳು ಪೇಳುವರು. ಇದರ ವಿಶೇಷ ಸ್ವರೂಪವನ್ನೂ, ಹೇತುವನ್ನೂ, ಫಲಾದಿಗಳನ್ನೂ ಮತ್ತು ಅವಾಂತರ ವೈರಾಗ್ಯ ಭೇದವನ್ನೂ ಮುಂದೆ ಪೇಳುವೆವು.

ಅ—ಈಗ ಷಟ್‌ಸಂಪತ್ತಿಯ ನಾಮರೂಪಂ ಪೇಳುವರು.

ಉ:—(೧) ಶಮ, (೨) ದಮ, (೩) ಶ್ರದ್ಧಾ, (೪) ಸಮಾಧಾನ, (೫) ಉಪರತಿ, (೬) ತಿತಿಕ್ಷಾ:—ಅದರಲ್ಲಿ—

ಅಪ.೬ ಸೂ.೨ (೧)—ಶಮ:—ವಾಸನಾತ್ಯಾಗವೇ ಶಮವೆಂದು ಪೇಳಿರುವರು. ವಾಸನೆಯ ಪೆಸರು ಸೂಕ್ಷ್ಮಸಂಸ್ಕಾರಕ್ಕಾಗುವದು. ಅದರ ಉಪೇಕ್ಷೆಯ ಪೆಸರು ವಾಸನಾತ್ಯಾಗವೆನಿಸುವದು. ಉಪೇಕ್ಷೆಯೆಂದರೆ, ತಿರಸ್ಕಾರವೆಂದರ್ಥ. ವ್ಯಾಕರಣರೀತಿಯಿಂದ ಶಮವೆಂದರೆ ಚಿತ್ತದ ಉಪಶಮಕ್ಕೆ ಪೆಸರಾಗುವದು. ಮತ್ತು ಶೃತಿಯಲ್ಲಿ ಶಾಂತಿಪದವೆಂದು ಪೇಳಿರುವದು. ಇನ್ನು ಶಾಸ್ತ್ರಗಳಲ್ಲಿ ಮನದ ನಿರೋಧವು ಶಮದ ಲಕ್ಷಣವೆಂದು ಪೇಳಿರುವವು. ನಿರೋಧವೆಂಬ ಪೆಸರು ಸಂಯಮಕ್ಕೆ ಪೇಳಲ್ಪಡುವದು.

ಅ—ಈಗ ದಮದ ಲಕ್ಷಣವಂ ಪೇಳುವರು.

೨. (೨)—ದಮ:—ಬಾಹ್ಯವೃತ್ತಿಯಿಂದ ಇಂದ್ರಿಯಗಳಂ ನಿಗ್ರಹಿಸುವದಕ್ಕೆ ದಮವೆಂದು ಪೇಳಿರುವರು. ಯೋಗಶಾಸ್ತ್ರದಲ್ಲಿ ಇದಕ್ಕೆ ಪ್ರತ್ಯಾಹಾರವೆಂದು ಪೇಳಿರುವದು. ಶೃತಿಯಲ್ಲಿ ಇದಕ್ಕೆ ದಾಂತಿ ಎಂದು ಪೇಳಲ್ಪಟ್ಟಿರುವದು. ಆ ಇಂದ್ರಿಯಗ್ರಾಮದ ನಿರೋಧವು ಮನದ ನಿರೋಧಾಧೀನವಾಗಿರುವದು. ರಥಯುಂತ್ರಿತವಾದ ಅಶ್ವಗಳು ಹ್ಯಾಗೆ ರಜ್ಜುವಿನಿಂದ ನಿರೋಧವಾಗುವದೋ, ಹಾಗೆ ಶೃತಿಯಲ್ಲಿ ಶರೀರವನ್ನು ರಥವೆಂತಲೂ, ಇಂದ್ರಿಯಗಳನ್ನು ಕುದುರೆಗಳೆಂತಲೂ, ಮನವನ್ನು ಹಗ್ಗವೆಂತಲೂ, ಬುದ್ಧಿಯನ್ನು ಸಾರಥಿ ಎಂತಲೂ ಪೇಳಿರುವದು. ಹ್ಯಾಗೆ ಒಳ್ಳೆ (ಪ್ರಮಾದವಿಲ್ಲದ) ಸಾರಥಿಯು ಹಗ್ಗವಂ ಪಿಡಿ

ದೆಳದು ಎಡಬಲಗಳ ಹಳ್ಳಗಳಲ್ಲಿ ಅಶ್ವಗಳು ಹೋಗಿ ಬೀಳದಂತೆ ತಡದು ಸರಿಯಾದ ಮಾರ್ಗದಲ್ಲಿ ರಥವಂ ನಡೆಸುವನೋ, ಹಾಗೆ ವಿವೇಕವುಳ್ಳ ಬುದ್ಧಿಯು ಮನವಂ ತಡದು ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹೋಗದಂತೆ ನಿರೋಧಿಸಿ, ಮೋಕ್ಷಮಾರ್ಗದಲ್ಲಿ ಪ್ರವೃತ್ತಿಗೊಳಿಸುವದು.

ಅ—ಈಗ ಶ್ರದ್ಧಾಲಕ್ಷಣವಂ ಪೇಳುವರು.

ಸೂ ೨೬ (೩) ಶ್ರದ್ಧಾ:—ವೇದಗುರುಗಳ ವಾಕ್ಯಗಳಲ್ಲಿ, ವಿಶ್ವಾಸವಿರುವದಕ್ಕೆ 'ಶ್ರದ್ಧಾ' ಎಂದು ಪೇಳುವರು. ಸತ್ಯತ್ವಬುದ್ಧಿಗೆ ವಿಶ್ವಾಸವೆಂದು ಪೆಸರು. ಹೀಗೆ ಪೇಳಿದ್ದರಿಂದ ಈಶ್ವರಗುರುಭಕ್ತಿಗೂ ಸೂಚನೆಮಾಡಿದಂತಾಯಿತು. ಅದೆಂತೆಂದರೆ;—ಯಾರಲ್ಲಿ ಯಾರಿಗೆ ಪ್ರೀತಿ ಇರುವದೋ, ಅವರ ವಚನಗಳಲ್ಲಿ ಅವರಿಗೆ ಶ್ರದ್ಧೆಯಿರುವದು. ಆ ಶ್ರದ್ಧೆಯನ್ನು ಜಿಜ್ಞಾಸುವು ಅವಶ್ಯ ಸಂಪಾದಿಸಿಕ್ಕೊಳ್ಳತಕ್ಕದ್ದು. ಯಾಕೆಂದರೆ;—"ಶ್ರದ್ಧಾಭಕ್ತಿ ಧ್ಯಾನಯೋಗಾದವೇಹಿ" ಈ ಶೃತಿಯು ಶ್ರದ್ಧಾ ಭಕ್ತಿ ಧ್ಯಾನ ಯೋಗಾದಿಗಳಿಂದ ತಿಳಿಯಬೇಕೆಂದು ಜ್ಞಾನಪ್ರಾಪ್ತಿಯ ನಿಮಿತ್ತ ಶ್ರದ್ಧೆಯಂ ವಿಧಾನಗೈದಿರುವದು. ಮತ್ತು "ಶ್ರದ್ಧಾವಾನ್ ಲಭತೆಜ್ಞಾನಂ" ಈ ಸ್ಮೃತಿಯಲ್ಲಿಯೂ ಶ್ರದ್ಧಾವಂತನಿಗೇನೆ ಜ್ಞಾನಪ್ರಾಪ್ತಿ ಎಂದು ಪೇಳಿರುವದು. ಇದರಿಂದ ಶ್ರದ್ಧೆಯನ್ನು ಅವಶ್ಯ ಸಂಪಾದಿಸಿಕ್ಕೊಳ್ಳಬೇಕು.

ಅ—ಈಗ ಸಮಾಧಾನದ ಲಕ್ಷಣವಂ ಪೇಳುವರು:—

ಸೂ ೨೭ (೪)—ಸಮಾಧಾನ:—ಚಿತ್ತವನ್ನು ಶುದ್ಧಬ್ರಹ್ಮದಲ್ಲಾಗಲೀ, ಅಥವಾ ಶ್ರವಣದಲ್ಲಾಗಲೀ, ಸ್ಥಾಪಿಸುವದಕ್ಕೆ ಸಮಾಧಾನವೆನ್ನುವರು. ಆಧಾನದ ಪೆಸರು ಸ್ಥಾಪನೆಗಾಗುವದು. ಸಮ್ಯಕ್—ಆಧಾನ, ಸಮಾಧಾನವು; ಅದರಿಂದೊಡಗೂಡಿದವನನ್ನು ಶೃತಿಯಲ್ಲಿ ಸಮಾಹಿತನೆಂದು ಪೇಳಿರುವದು.

ಅ—ಈಗ ಉಪರತಿಯ ಲಕ್ಷಣವಂ ಪೇಳುವರು:—

(೫)—ಉಪರತಿ:—ವಿಷಯಗಳಿಂದ ಪರಾಙ್ಮುಖವಾದ ವೃತ್ತಿಯನ್ನು ಉಪರತಿ ಎಂದು ಪೇಳುವರು. ಅಥವಾ ವಿಷಯದಲ್ಲಿಯೂ ಅದರ ಸಾಧನವಾದ ಸ್ತ್ರೀಯಾದಿಗಳಲ್ಲಿಯೂ, ಅತ್ಯಂತ ತಿರಸ್ಕಾರವಾಗಿದ್ದರೆ, ಉಪರತಿಯೆನಿಸಿಕ್ಕೊಳ್ಳುವದು. ಅಥವಾ ಸಾಧನಸಹಿತ ಕರ್ಮಸನ್ಯಾಸದ ಪೆಸರು ಉಪರತಿಯಾಗುವದು.

ಅ—ಈಗ ತಿತಿಕ್ಷಾ ಲಕ್ಷಣವಂ ಪೇಳುವರು :—

(೬)—ತಿತಿಕ್ಷಾ:—ಶ್ರವಣಾದಿಯ ನಿಮಿತ್ತ ಶೀತ ಉಷ್ಣ, ಕ್ಷುಧಾ ತೃಷಾದಿ ದ್ವಂದ್ವಗಳ ಚಿಂತಾವಿಲಾಪವಿಲ್ಲದೆ, ಸಹನಸ್ವಭಾವದಿಂದಿರಲೂ ತಿತಿಕ್ಷಾ ಎನಿಸುವದು. ಈ ಶಮಾದಿಗಳಾರೂ ಕೂಡಿ ಷಟ್‌ಸಂಪತ್ತಿ ಎನಿಸಿಕ್ಕೊಳ್ಳುವದು.

ಅ—ಈಗ ಮುಮುಕ್ಷುತ್ವದ ಲಕ್ಷಣವಂ ಪೇಳುವರು.

೪ ;—ಮುಮುಕ್ಷುತೆ :—ಪರಮಾನಂದರೂಪವಾದ ಬ್ರಹ್ಮದ ಪ್ರಾಪ್ತಿಯೂ, ಕಾರಣಸಹಿತ ಜಗದನರ್ಥದ ನಿವೃತ್ತಿಯೂ ಸಹ ಮೋಕ್ಷವೆನಿಸುವದು. ಅದರ ಇಚ್ಛೆಯ ಪೆಸರು ಮುಮುಕ್ಷುತ್ವವೆನಿಸುವದು, ಆ ಮುಮುಕ್ಷುತ್ವವು (೧) ಮಂದ, (೨) ಮಧ್ಯಮ, (೩) ತೀವ್ರವೆಂಬ ಭೇದದಿಂದ ಮೂರು ಪ್ರಕಾರವಾಗಿರುವದು. ಅವುಗಳಲ್ಲಿ ತೀವ್ರೇಚ್ಛೆಯಿದ್ದರೆ ;—ಸದ್ಯಃ ಫಲಿತವಾಗುವದು. ಮಂದ, ಮಧ್ಯಮವಾಗಿದ್ದರೆ, ಸದ್ಯಃ ಫಲಿತವಾಗುವದಿಲ್ಲ ; ಆದರೆ ಗುರುಸೇವಾದಿಗಳಿಂದ ವೃದ್ಧಿಯಾಗಿ, ಅವರ ಪ್ರಸಾದದಿಂದ ಪಕ್ವವಾಗುವದು. ಈ ನಾಲ್ಕು ಸಾಧನಗಳಿಂದ ಯಾವನು ಕೂಡಗೂಡಿರುವನೋ, ಅವನು ಜ್ಞಾನಾಧಿಕಾರಿ, ಎನಿಸುವನು. ಆ ನಾಲ್ಕು ಸಾಧನಗಳು ಸತ್ಯವಾಗಿ ಸಿದ್ಧಿಸಿದ್ದರೆ, ಸನ್ನಿಷ್ಠನಾಗುವನು. ಅವುಗಳಿಲ್ಲದಿದ್ದರೆ, ಸನ್ನಿಷ್ಠನಾಗುವದಿಲ್ಲ; ಹೀಗೆ ಅನ್ವಯ ವ್ಯತಿರೇಕ ವಿಚಾರದಿಂದ ಸಾಧನಚತುಷ್ಟಯವನ್ನು ಜಿಜ್ಞಾಸುವು ಅವಶ್ಯ ಸಂಪಾದನೆ ಮಾಡಿಕ್ಕೊಳ್ಳಬೇಕು.

ಈ ನಾಲ್ಕು ಸಾಧನಗಳಿಂ ಸಂಯುಕ್ತನಾಗಿರುವ ವಿರಕ್ತನು ಸರ್ವರಾಜ್ಯಪದವಿ ಮೊದಲುಗೊಂಡು ಹಿರಣ್ಯಗರ್ಭನ ಭೋಗೈಶ್ವರ್ಯಪರ್ಯಂತವಾದ ಸಕಲ ಸಂಸಾರಸುಖಗಳನ್ನು ವಿರಸ್ಯ ತುಚ್ಛವೆಂದು ತಿಳಿದು ಅವುಗಳೆಲ್ಲವನ್ನು ಪರಿತ್ಯಾಗಮಾಡಿ, ಅಂದರೆ:—ತತ್ವಜ್ಞಾನದಿಂದ ಶುಕ್ತಿರಜತಾದಿಗಳಂತೆ ಬಾಧೆಗೊಳಿಸಿ ಪರಮತತ್ವವಂ ಪೊಂದುವನು.

ಶಂಕಾ ;—ಈ ಲೋಕದ ವಿಷಯವು ಹ್ಯಾಗೂ ತುಚ್ಛವಾಗಿರುವದು. ಅದನ್ನು ಬಿಡತಕ್ಕದ್ದು ಉಚಿತವೇ ಸರಿ ! ಆದರೆ ಹಿರಣ್ಯಗರ್ಭಾದಿಗಳ ಐಶ್ವರ್ಯವು ಉತ್ಕೃಷ್ಟವಾಗಿರುವದು; ಅದನ್ನು ಬಿಡುವದು ಸರಿಯಲ್ಲ.

ಬೃಹ 8-1-6 ಗೀತ 9-21 ಗೀತ 8-16

ಸಮಾಧಾನ:—ಹ್ಯಾಗೆ ಕರ್ಮ ರಚಿತವಾದ ಈ ಲೋಕವು ಕ್ಷಯವಾಗುವದೋ, ಹಾಗೆ ಪರಲೋಕವೂ ಕರ್ಮ ರಚಿತವಾದ್ದರಿಂದ ಕ್ಷಯವಾಗುವದು. ಇದು ಶ್ರುತಿಯ ಲಿಖಿತವು. ಮತ್ತು ಆ ಬ್ರಹ್ಮಭುವನಾದಿ ಲೋಕಗಳೆಲ್ಲ ಪುನರಾವೃತ್ತಿಯುಳ್ಳದ್ದಾಗಿರುವದು; ಇದು ಸ್ಮೃತಿಯ ಲಿಖಿತವು. ಆದ್ದರಿಂದ ಈ ಲೋಕದಂತೆ ಪರಲೋಕವೂ ನಶ್ವರವಾಗಿರುವದು. ಮತ್ತು "ಸರ್ವಮೇವ ದುಃಖಂ ವಿವೇಕಿನಃ" ಈ ಪತಂಜಲಿ ಸೂತ್ರವು ವಿವೇಕಿಗಳಿಗೆ ಸರ್ವಭೋಗವು ದುಃಖರೂಪವೆಂದು ಪೇಳಿರುವದು. ಇನ್ನು ಇಂದ್ರಲೋಕದಲ್ಲಿನ ಮಹದ್ದುಃಖಗಳಿಗಿಂತಲೂ, ಪ್ರಜಾಪತಿಲೋಕದಲ್ಲಿ ಮಹತ್ತರ ದುಃಖವಿರುವದು. ಇತ್ಯಾದಿ ಶಾಸ್ತ್ರಗಳ ವಚನದಿಂದಲೂ, ಮತ್ತು ಎಲೈ ಕೌಂತೆಯನೆ! ಇಂದ್ರಿಯಸಂಬಂಧಿಯಾದ ಯಾವ ಭೋಗವುಂಟೋ, ಅದು ದುಃಖಕ್ಕೆ ಕಾರ

ಗೀತ 5-22

ಣವಾಗಿರುವದು, ಆದಿ ಅಂತ [ಉತ್ಪತ್ತಿನಾಶ] ಉಳ್ಳದ್ದಾಗಿರುವದು; ಅವುಗಳಲ್ಲಿ ಪಂಡಿತನು ರಮಿಸುವದಿಲ್ಲ; ಹೀಗೆಂಬ ಭಗವದ್ವಚನದಿಂದಲೂ, ಮತ್ತು ಈ ಬಾಂಧವರನ್ನು ದಗ್ಧ [ಸೀದು ಕರಕಾದ] ಅನ್ನದಂತೆ ದೂರದಲ್ಲಿ ತ್ಯಜಿಸುತ್ತಲೂ, ಸಂಗದಿಂದ ಸರ್ಪದಂತೆ ಭಯವಾಗುವದೆಂದೆಣಿಸುತ್ತಲೂ, ಭೋಗಗಳನ್ನು ರೋಗಸಮವೆಂದರಿಯುತ್ತಲೂ, ಸ್ತ್ರೀರುಗಳನ್ನು ತೃಣದಂತೆ ನೋಡುತ್ತಲೂ, ಮಿತ್ರಾಮಿತ್ರರಲ್ಲಿ ಸಮವಾದ ದಯವಂ ಮಾಡುತ್ತಲೂ, ಹೀಗೆ ಯಾವನ ಚಿತ್ತವಿರುವದೋ, ಅವನಿಗೆ ಸರ್ವವೂ ಮಂಗಳವಾಗಿರುವದು. "ತುಚ್ಛತ್ವಾತ್ಸರ್ವಭಾವಾನಾಂ" ಇತ್ಯಾದಿ ಶಾಸ್ತ್ರಗಳ ವಾಕ್ಯದಿಂದ, ದೃಷ್ಟಾದೃಷ್ಟ ಭೋಗಗಳೆಲ್ಲವೂ ದೂಷಿತವಾಗಿರುವದು. ಅವುಗಳಲ್ಲಿಯೂ, ಜಲಾಂಶರೂಪವಾದ ವಿಷಯವು ಮಹಾದುಷ್ಟವಾಗಿರುವದು. ಯಾವದು ಬ್ರಹ್ಮ ಮೊದಲುಗೊಂಡು ಪಿಪೀಲಿಕಾದಿ ಸರ್ವಪ್ರಪಂಚವನ್ನು ವಶೀಕೃತಗೈದಿರುವದೋ, ಅದನ್ನು ಅನ್ಯಶಾಸ್ತ್ರದಲ್ಲಿಯೂ ಪೇಳಿರುವದು.

**ಶ್ಲೋ॥ ಇಂದ್ರಿಯಾಭ್ಯಾ ಮಜಯ್ಯಾಭ್ಯಾಂ ದ್ವಾಭ್ಯಾ ಮೇವ ಹತಂ ಜಗತ್ ॥ ಅಹೋಹ್ಯುಪಸ್ಥ ಜಿಹ್ವಾಭ್ಯಾಂ ಬ್ರಹ್ಮಾದಿ ಮಶಕಾವಧಿ ॥**

ಆದಕಾರಣ ಬ್ರಹ್ಮಲೋಕಾದಿಗಳ ಭೋಗವು ವಿರಕ್ತನ ದೃಷ್ಟಿಯಿಂದ ತುಚ್ಛವಾಗಿರುವದು. ಆದ್ದರಿಂದ ವಮನವಂ ಮಾಡಿದ ಅನ್ನದಂತೆ, ದೋಷ

ಬುದ್ಧಿಯಿಂದಲೂ, ಅಥವಾ ಮರುಜಲದಂತೆ ಮಿಥ್ಯಾತ್ವಬುದ್ಧಿಯಿಂದಲೂ, ಪರಿತ್ಯಾಗವಂ ಮಾಡಿರುವನು.

ಹ್ಯಾಗೂ ಮರುಜಲವು ಪ್ರತ್ಯಕ್ಷವಾಗಿ ತೋರುತ್ತಿದ್ದರೂ ಅದನ್ನು ಮಿಥ್ಯವೆಂದು ನಿಶ್ಚಯಿಸಿದ ಬಳಿಕ ಆ ಉದಕನಿಮಿತ್ತವಾಗಿ, ಪುರುಷನು ಹ್ಯಾಗೆ ಪ್ರಯತ್ನವಂ ಮಾಡುವದಿಲ್ಲವೋ, ಹಾಗೆ ಪ್ರತ್ಯಕ್ಷವಾಗಿ ತೋರುತ್ತಿರುವ ಜಗತ್ತನ್ನು ಬ್ರಹ್ಮದಲ್ಲಿ ಅಪರೋಕ್ಷವಾಗಿ ಮಿಥ್ಯವೆಂದು ನಿಶ್ಚಯಿಸಿದಬಳಿಕ, ವಿದ್ವಾಂಸನಿಗೆ ಪುರುಷಾರ್ಥಬುದ್ಧಿಯಿಂದ ಪ್ರವೃತ್ತಿಯಾಗುವದಿಲ್ಲ; ಈ ಮಾತು ಮತ್ತೊಂದು ಶಾಸ್ತ್ರದಲ್ಲಿಯೂ ಹೇಳಿರುವದು. ಹ್ಯಾಗೂ ವಿಶ್ವಪ್ರತ್ಯಕ್ಷವಾಗಿ ತೋರುವದಾದರೂ ಅಮಲಾವ್ಯಕ್ತರೂಪವಾದ ಬ್ರಹ್ಮದಲ್ಲಿ ರಜ್ಜುಸರ್ಪದಂತೆ ಮಿಥ್ಯವಾಗಿರುವದೆಂತಲೂ, ಅವಸ್ತುರೂಪವಾಗಿರುವದ್ದರಿಂದ ವಸ್ತುತಃ ಇಲ್ಲವೆಂತಲೂ ಈ ಜ್ಞಾನದಿಂದ ವಿಶ್ವಕ್ಕೆ ವಿಲಯವಾಗುವದು. ಈ ರೀತಿಯಾಗಿ ಶುದ್ಧಬುದ್ಧಿಯಿಂದ ವಿರಕ್ತನಾದ ಅಧಿಕಾರಿಯು ತತ್ವಜ್ಞಾನದಿಂದ ಸರ್ವವಿಧ ಪ್ರತ್ಯಯಗೋಚರ ಪ್ರಪಂಚವನ್ನು ಅಧಿಷ್ಠಾನಬ್ರಹ್ಮದಲ್ಲಿ ಬಾಧಲಕ್ಷಣ ಪರಿತ್ಯಾಗದಿಂದ ಯಾವ ತತ್ವವಂ ಪೊಂದುವನೋ, ಆ ನಿತ್ಯ [ತ್ರಿಕಾಲಾಬಾಧ್ಯ] ವಾದ ಪರಬ್ರಹ್ಮವೇ ತಾನಾಗಿರುವೆನು.

(೪) ಇಲ್ಲಿ ಅಧಿಕಾರಿಗೆ ತತ್ವಪ್ರಾಪ್ತಿಯಂ ಪೇಳಿರುವದು. ಅನಾರೋಪಿತ ವಸ್ತುವಿಗೆ ತತ್ವವೆಂದು ಪೆಸರು. ಅದೇ ಬ್ರಹ್ಮವೆಂದೆನಿಸುವದು. ಅದರ ಪ್ರಾಪ್ತಿ-ಅಂದರೆ; 'ಆ ಬ್ರಹ್ಮವೇ ನಾನು ನನಗಿಂತನ್ಯವಾಗಿ ಬ್ರಹ್ಮವಿಲ್ಲ' ವೆಂದು ಸಾಕ್ಷಾತ್ಕಾರಮಾಡಿಕೊಳ್ಳುವನು. ಅದರಿಂದ ಪರಮಾನಂದ ಪ್ರಾಪ್ತಿಯಾಗಿ ಅನರ್ಥನಿವೃತ್ತಿಯೆಂಬ ಪರಮಫಲಕ್ಕೆ ಭಾಗಿಯಾಗುವನು. ಅದನ್ನು (೧) "ಬ್ರಹ್ಮವಿದಾಪ್ನೋತಿಪರಂ (೨) ತರತಿಶೋಕಮಾತ್ಮವಿತ್" ಈ ಶ್ರುತಿಗಳು ಪ್ರಸಿದ್ಧವಾಗಿ ಪೇಳಿರುವವು. ಇವುಗಳ ಅರ್ಥವೇನೆಂದರೆ;—(೧) ಬ್ರಹ್ಮವೇತ್ತನು 'ಪರಂ' ಅಂದರೆ; ನಿರತಿಶಯಾನಂದವೆಂಬ ಬ್ರಹ್ಮವಂ ಪೊಂದುವನು. (೨) ಆತ್ಮವೇತ್ತನು ಶೋಕರೂಪವಾದ ಸಂಸಾರವಂ ತರಿಸುವನು ಯೆಂಬರ್ಥ. ಒಂದುವೇಳೆ ಇಲ್ಲಿ ಯಾರಾದರು ಹೀಗೆ ಶಂಕಿಸಿದರೆ;—

ಶಂಕಾ;—ಸ್ವರ್ಗಾದಿಗಳು ಅಪ್ರಾಪ್ತವಾಗಿನ್ನೆ, ಅವುಗಳಂ ಪಡೆಯುವದಾದ ಫಲವಂತು ಸಂಭವಿಸಬಹುದ್ದು. ಆದರೆ, ಸದಾಪ್ರಾಪ್ತರೂಪವಾದ ಬ್ರಹ್ಮದ ಪ್ರಾಪ್ತಿಯೆಂಬ ಫಲವಂ ಪೇಳಲು ಸಂಭವಿಸುವದಿಲ್ಲ ಅಂದರೆ;—

**ಸಮಾಧಾನ** :—ಕರಕಂಕಣದ ನ್ಯಾಯದಂತೆಯೂ, ಅಥವಾ ದಶಮ ಪುರುಷನಂತೆಯೂ, ಪ್ರಾಪ್ತಿಗೆ ಪ್ರಾಪ್ತಿಯೂ ಸಂಭವಿಸುವದು. ಇದರಿಂದ ಅಸಂಭವವೇನೂ ಇಲ್ಲ.

ಬಳಿಕ ಈ ಶ್ಲೋಕದ ನಾಲ್ಕನೇ ಪಾದದಿಂ ಪೇಳಿದ (**ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ**) ಈ ವಾಕ್ಯದಿಂದ ಆಚಾರ್ಯರು ಸ್ವಾನುಭವವಂ ತೋರಿಸಿ, ಜಿಜ್ಞಾಸುಗಳಿಗೆ ಮಹಾವಾಕ್ಯದ ಅಖಂಡಾರ್ಥವನ್ನು ದರ್ಶನಗೊಳಿಸಿರುವರು. ಇದರ ಪ್ರಕ್ರಿಯವನ್ನು ಮುಂದೆ ಸ್ಪಷ್ಟವಾಗಿ ಪೇಳೇವು. ‖ ೧ ‖ ಶ್ಲೋ.

ಅ—ಈ ಗ್ರಂಥದ ಪ್ರಥಮಶ್ಲೋಕದಲ್ಲಿ ಅಧಿಕಾರಿಗೆ ಪರಮತತ್ವಪ್ರಾಪ್ತಿಯಂ ಪೇಳಿರುವದು. ಅದು ಗುರೂಪದೇಶಪೂರ್ವಕ ಶ್ರವಣ-ಮನನ-ನಿದಿಧ್ಯಾಸನದಿಂದಾಗುವದು. ಅನ್ಯಥಾ ಆದರೆ ಪರಮತತ್ವಪ್ರಾಪ್ತಿ ಸಂಭವಿಸುವದಿಲ್ಲ; ಆದ್ದರಿಂದ ಎರಡನೇ ಶ್ಲೋಕದಲ್ಲಿ ಗುರುಭಕ್ತಿ ಪೂರ್ವಕ ಜ್ಞಾನಸಾಧನವಂ ಪೇಳುವರು.

—‖ ದಯಾಲುಮಿತಿ ‖—

**ಮೂ—ದಯಾಲುಂ ಗುರುಂ ಬ್ರಹ್ಮನಿಷ್ಠಂ ಪ್ರಶಾಂತಂ ।**
**ಸಮಾರಾಧ್ಯ ಭಕ್ತ್ಯಾ ವಿಚಾರ್ಯಸ್ವರೂಪಂ ‖**
**ಯದಾಪ್ನೋತಿ ತತ್ವಂ ನಿದಿಧ್ಯಾಸ್ಯ ವಿದ್ವಾನ್ ।**
**ಪರಂಬ್ರಹ್ಮನಿತ್ಯಂ ತದೇವಾಹಮಸ್ಮಿ ‖ ೨ ‖**

ದಯಾಲುವಾಗಿಯೂ, ಬ್ರಹ್ಮನಿಷ್ಠನಾಗಿಯೂ, ಪ್ರಶಾಂತನಾಗಿಯೂ ಇರುವ ಗುರುವಂ ಚನ್ನಾಗಿ ಆರಾಧಿಸಿ, ಸ್ವರೂಪವಿಚಾರದಿಂದಲೂ, ನಿದಿಧ್ಯಾಸನದಿಂದಲೂ ವಿದ್ವಾನ್ ಯಾವ ಬ್ರಹ್ಮವಂ ಪೊಂದುವನೋ, ಆ ನಿತ್ಯನಿರತಿಶಯ ಬ್ರಹ್ಮನಾನಾಗಿರುವೆನು ಎಂಬುದು ಪದದ ಅರ್ಥ.

**ಟೀಕಾ** :—ಯಾವ ಗುರುವನ್ನು ಜಿಜ್ಞಾಸುವು ಶರಣು ಹೊಂದಿ ಸೇವಿಸುವನೋ, ಯಾರ ಪ್ರಸಾದದಿಂದ ಪರಮತತ್ವದ ಪ್ರಾಪ್ತಿಯಾಗುವದೋ, ಆ ಗುರುಪದದ ಅರ್ಥವನ್ನು ಮತ್ತು ಅವನ ಲಕ್ಷಣವನ್ನು ಪೇಳುವರು.

**‖ ಅ ‖ (೧) ಗುರುಶಬ್ದಕ್ಕೆ ಅರ್ಥ ಮತ್ತು ಅವನ ಲಕ್ಷಣ.**

"**ಗೃಣಾತೀತಿಗುರುಃ**" ಈ ವ್ಯುತ್ಪತ್ತಿಯಿಂದ ತತ್ವೋಪದೇಶವಂ ಮಾಡುವವನು ಗುರುವೆನಿಸಿಕೊಳ್ಳುವನು. ಅಥವಾ (ಗು) ಕಾರವು ಅಂಧ

ಕಾರದ ವಾಚಕವಾಗಿರುವದು. (ರು) ಕಾರವು ಅದನ್ನು ನಿರೋಧಿಸುವ ತೇಜದ ವಾಚಕವಾಗಿರುವದು. ಆ (ಗುಕಾರ ರುಕಾರಗಳ) ಸಾಮಾನಾಧಿಕರಣದಿಂದ ಐಕ್ಯಾರ್ಥವುಳ್ಳದ್ದು ಪರಬ್ರಹ್ಮವಾಗಿರುವದು. ಅದೇ ಗುರುಶಬ್ದದಿಂದ ಪೇಳಿಸಿಕ್ಕೊಳ್ಳುವದು.

೧—ಅಥವಾ, ಎಲ್ಲಕ್ಕಿಂತಲೂ ಅಧಿಕವಾಗಿರುವ ವಸ್ತುವಿಗೆ ಗುರುವೆಂದು ಪೆಸರು. ಇಂಥಾವನು ಆತ್ಮನಾಗಿರುವನು. ಅವನಂ ಪೊಂದಿಸುವವನೂ ಕೂಡ ಗುರುವೆನಿಸಿಕ್ಕೊಳ್ಳುವನು.

೨—ಅಥವಾ, ತುಚ್ಛರೂಪವಾದ ಅಜ್ಞಾನವು ಲಘುವೆನಿಸುವದು. ಆ ಲಘುತ್ವದ ನಿವೃತ್ತಿಯಂ ಮಾಡುವಂಥಾದ್ದು, ಗುರುವೆನಿಸಿಕ್ಕೊಳ್ಳುವದು. ಹೀಗೆ ಬ್ರಹ್ಮವಿದ್ಯವನ್ನುಪದೇಶಿಸುವ ಬ್ರಹ್ಮವಿದನಾದ ಮಹಾತ್ಮನಾರೋ, ಅವನೇ ಪರಮ ಗುರುವಾಗಿರುವನು.

ಅ|| ಈಗ ಅವನ ವಿಶೇಷಣವಂ ಪೇಳುವರು:—

(೨) **ದಯಾಲು** ಪದದ ಅರ್ಥ:—ಆ ಗುರುವು ಎಂಥಾವನೆಂದರೆ;— ದಯಾಳುವಾಗಿರುವನು. ಪರರ ದುಃಖವನ್ನು ಸಹಿಸದಿರುವದಕ್ಕೆ ದಯಾ ಎಂದು ಪೆಸರು. ಅದು ಯಾರಲ್ಲಿ ಇರುವದೋ ಅವರು ದಯಾಲುವೆನಿಸಿಕ್ಕೊಳ್ಳುವರು. ಹೀಗೆ ಸರ್ವಭೂತಹಿತನಾಗಿ, ಬ್ರಹ್ಮವಿದನಾಗಿ, ಉತ್ತಮಸಂತನಾಗಿ, ಯಾವನಿರುವನೋ, ಅವನೇ, ಸರ್ವಥಾ ಜನ್ಮಾದಿ ಸಂಸಾರವೆಂಬ ದಾವಾನಲದಿಂ ಸಂತಪ್ತರಾದ ಜನಗಳಿಗೆ ಶಾಂತಿಯನ್ನುಂಟುಮಾಡುವನು. ಆ ದಯವೂ ಕೂಡ ಕಾರಣವಿನಃ ಮಾಡುತ್ತಿರುವನು. ಇಂಥಾ ಅಕಾರಣ ದಯಾಸಮುದ್ರನಾದ ಗುರುವು ದುರ್ಲಭನೆನಿಸಿಕ್ಕೊಳ್ಳುವನು.

ಗುರುಗೀತ 162 ೧—ಮತ್ತು ವಿತಾಪಹಾರಿಗಳಾದ ಗುರುವಂತು ಬಹುವಾಗಿರುವರು. ಈ ಮಾತು ಶಿವ ಭಗವಂತನೂ ಸಹ ಪಾರ್ವತಿಯಂ ಕುರಿತು ಎಲೈ ದೇವಿಯೇ! ಶಿಷ್ಯರ ವಿತ್ತವನ್ನಪಹರಿಸುವ ಗುರುಗಳು ಬಹಳವಾಗಿರುವರು. ಆದರೆ, ಶಿಷ್ಯರ ಸಂತಾಪಗಳನ್ನು ಹರಿಸುವ ಗುರುವು ಈ ಲೋಕದಲ್ಲಿ ದುರ್ಲಭನು ಯೆಂದು ಪೇಳಿರುವನು. ಮತ್ತು ನಿಸ್ಪೃಹನಾದ ಗುರುವಿನಿಂದಲ್ಲದೆ ನಿರಪೇಕ್ಷಬೋಧವೂ ಆಗುವದಿಲ್ಲ; ಅದನ್ನು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಆದ್ದರಿಂದ ನಿಸ್ಪೃಹನಾಗಿಯೂ, ಹಿತವನ್ನುಪದೇಶಿಸುವವನಾಗಿಯೂ, ಅಸ್ಪೃಹನಾದವನಾಹ

ದಯಾವಂತನಾಗಿಯೂ ಇರುವ ದೇಶಿಕನಿಂದಲೇ ಮುಮುಕ್ಷುವಿಗೆ ಇಷ್ಟ ಫಲದ ಸಿದ್ಧಿಯಾಗುವದು. ಈ ಮಾತು ಮತ್ತೊಂದು ಶಾಸ್ತ್ರದಲ್ಲಿಯೂ "**ಆತ್ಮೌಪಮ್ಯೇನ ಸರ್ವತ್ರ ದಯಾಂ ಕುರ್ವಂತಿ ಸಾಧವಃ**" ಎಂದು ಪೇಳಿರುವದು. ಇಲ್ಲಿಗೆ ದಯಾಲು ಪದದ ಅರ್ಥವಾಯಿತು.

ಅ|| ಈಗ ಬ್ರಹ್ಮನಿಷ್ಠಾ-ಎಂಬ ಪದದ ಅರ್ಥವಂ ಪೇಳುವರು.

(೩) ಬ್ರಹ್ಮನಿಷ್ಠಾ ಎಂಬ ಶಬ್ದದ ಅರ್ಥ-ಅಪರಿಚ್ಛಿನ್ನವಸ್ತುವಿಗೆ ಬ್ರಹ್ಮವೆಂದು ಪೆಸರು. ಅದರಲ್ಲಿ ಯಾವನಿಗೆ ಸ್ಥಿತಿ ಇರುವದೋ, ಅವನು ಬ್ರಹ್ಮನಿಷ್ಠನೆನಿಸಿಕ್ಕೊಳ್ಳುವನು. ಅರ್ಥವೇನೆಂದರೆ;—ಪ್ರತ್ಯಗಭಿನ್ನ ಬ್ರಹ್ಮದ ದೃಢಾನುಭವವು ಯಾವನಿಗಾಗಿರುವದೋ, ಅವನಿಗೆ 'ಬ್ರಹ್ಮನಿಷ್ಠ' ನೆಂಬ ಪೆಸರಪ್ಪುದು. ಈ ಬ್ರಹ್ಮನಿಷ್ಠತ್ವ ವಿಶೇಷಣವು ಶ್ರೋತ್ರಿಯತ್ವಕ್ಕೂ ಉಪಲಕ್ಷಣವಾಗುವದು. ಹ್ಯಾಗೆಂದರೆ;—ಶೃತಿಯಲ್ಲಿ ಶ್ರೋತ್ರಿಯ—ಬ್ರಹ್ಮನಿಷ್ಠ ಎಂಬ ಎರಡು ಲಕ್ಷಣವುಳ್ಳವನು ಗುರುವೆಂದು ಪೇಳಿರುವದು. ಅವನ ಬಳಿಗೇ ಮುಮುಕ್ಷುವು ಹೋಗಬೇಕು. ಆ ಶೃತಿ ಯಾವದೆಂದರೆ,—"**ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ**" ಎಂಬುದು. ಇದರ ಅರ್ಥವೇನೆಂದರೆ;—ಆ ಜಿಜ್ಞಾಸುವು ಸ್ವರೂಪಸಾಕ್ಷಾತ್ಕಾರ ಲಕ್ಷಣದ ವಿಜ್ಞಾನಕ್ಕೋಸುಗ, ಹಸ್ತದಲ್ಲಿ ಏನನ್ನಾದರೂ ನಿರ್ಮಲವಾದ ಪದಾರ್ಥಗಳಂ ತೆಗೆದುಕ್ಕೊಂಡು ಶ್ರೋತ್ರಿಯನಾಗಿಯೂ, ಬ್ರಹ್ಮನಿಷ್ಠನಾಗಿಯೂ ಇರುವ ಗುರುವಿನ ಸಮೀಪಕ್ಕೆ ಹೋಗಬೇಕೆಂದರ್ಥ. ಪ್ರಮಾಣ ಕುಶಲನಿಗೆ ಶ್ರೋತ್ರಿಯನೆಂಬರು ; ಪ್ರಮಾಣವೆಂಬ ಪೆಸರು ವೇದಕ್ಕಾಗುವದ್ದು, ಅದರ ಅರ್ಥದಲ್ಲಿ ನಿಷ್ಣನಾದವನು ಶ್ರೋತ್ರಿಯನೆನಿಸಿಕ್ಕೊಳ್ಳುವನು. ಹ್ಯಾಗೂ ಪ್ರತ್ಯಕ್ಷಾನುಮಾನಾದಿಗಳಿಗೂ ಪ್ರಮಾಣವೆಂದು ಪೇಳುವರು. ಆದಾಗ್ಯೂ ಅವೆಲ್ಲ ಪ್ರಮಾಣಾಭಾಸವಾಗಿರುವವು. ಹ್ಯಾಗೆಂದರೆ—ಆ ಸರ್ವವೂ ಪ್ರತಿಭಾಸಮಾತ್ರವಾದ ಜ್ಞಾತಸತ್ತೆಯುಳ್ಳ ಅನಾತ್ಮಪದಾರ್ಥವಂ ವಿಷಯೀಕರಿಸುವ ಜ್ಞಾನದ ಕರಣವಾಗಿರುವವು. ಅಜ್ಞಾತ ವಸ್ತುವಾದ ಬ್ರಹ್ಮವಂ ವಿಷಯೀಕರಿಸುವ ಜ್ಞಾನದ ಕರಣವಲ್ಲ; ಅಜ್ಞಾತಾರ್ಥಜ್ಞಾಪಕತ್ವ (ಅರಿಯದ ವಸ್ತುವಂ ತಿಳಿಯಪಡಿಸುವ) ಪ್ರಮಾಣದ ಲಕ್ಷಣವು ವೇದದಲ್ಲಿಯೇ ಸಂಭವಿಸುವದು. ಆದ್ದರಿಂದ ಪರಮ ಪ್ರಮಾಣವು ವೇದವೇ ಆಗಿದೆ. ಆ ವೇದಾರ್ಥವನ್ನು ಸರಿಯಾಗಿ ತಿಳಿ

ದಂಥಾವನು ಶ್ರೋತ್ರಿಯನೆನಿಸಿಕೊಳ್ಳುವನು. ಈ ರೀತಿಯಿಂದ ಅಧಿತವೇದನಾಗಿ ಪೂರ್ವೋಕ್ತ ಲಕ್ಷಣವುಳ್ಳ ಬ್ರಹ್ಮನಿಷ್ಠನನ್ನೇ ಶೃತಿಯು ಗುರುವೆಂದು

೧—ಇನ್ನು ಅಧಿತವೇದನೂ ಆಗಿರಲಿ; ಮುಖ್ಯವಾಗಿ ಬ್ರಹ್ಮನಿಷ್ಠನಲ್ಲದಿದ್ದರೆ, ಅವನೂ ಗುರುವಲ್ಲ; ಯಾಕೆಂದರೆ;—ಕೇವಲ ಶ್ರೋತ್ರಿಯನಾದ ತನ್ನಿಂದ ತನ್ನ ತಾಪವೇ ದೂರವಾಗದಮೇಲೆ ಅನ್ಯನ ಸಂತಾಪವನ್ನೆಂತು ಪರಿಹರಿಸ್ಯಾನು? ಮತ್ತು ಶ್ರೋತ್ರಿಯನಿಗೆ ಅನ್ಯಜೀವರಿಗಿಂತಲೂ, ಅಧಿಕವಾಗಿ ತಾಪವಿರುವದು. ಈ ವಾರ್ತೆ ಛಾಂದೋಗ್ಯೋಪನಿಷತ್ತಿನಲ್ಲಿ ನಾರದನು ತಾನು ಅನುಭವಿಸಿದ್ದನ್ನು ಪ್ರಸಿದ್ಧವಾಗಿ ಪೇಳಿರುವನು. ಆದ್ದರಿಂದ ಕೇವಲ ಶ್ರೋತ್ರಿಯನು ಆಚಾರ್ಯನಲ್ಲ; ಮತ್ತು

೨—ಯಾವನು ಬ್ರಹ್ಮನಿಷ್ಠನಾಗಿದ್ದರೂ, ವೇದಾಧ್ಯಯನವಂ ಮಾಡದಿರುವನೋ, ಅವನೂ ಆಚಾರ್ಯನಲ್ಲ; ಯಾಕೆಂದರೆ; ಶಿಷ್ಯನ ಚಿತ್ತದಲ್ಲಿ ಕಾಣ್ಬರುವ ನಾನಾಭೇದ ಭ್ರಮೆಗಳನ್ನು ಪರಿಹಾರಮಾಡುವದರಲ್ಲಿ ಇವನು ಸಮರ್ಥನಲ್ಲ; ಭೇದವು ಪಂಚ (೫) ಪ್ರಕಾರವಾಗಿರುವದು. ಭ್ರಮೆಯೂ ಪಂಚ (೫) ಪ್ರಕಾರವಾಗಿದೆ. ಅವುಗಳ ಉಪಪಾದನೆಯನ್ನೂ ನಿರಾಕರಣೆಯನ್ನೂ ಸಹ ಮುಂದೆ ಮಾಡುವೆವು. ಆದ್ದರಿಂದ ಕೇವಲ ಬ್ರಹ್ಮನಿಷ್ಠನೂ ಗುರುವಲ್ಲ. ಹ್ಯಾಗೂ ಆ ಬ್ರಹ್ಮನಿಷ್ಠನು ತಾನು ಮುಕ್ತನಾಗಿದ್ದಾಗ್ಯೂ ಇನ್ನು ಉತ್ತಮ ಸಂಸ್ಕಾರವುಳ್ಳ ಜಿಜ್ಞಾಸುವಿಗೂ, ತತ್ವದ ಉಪದೇಶವಂ ಮಾಡಿದಾಗ್ಯೂ ಸರ್ವ ಜಿಜ್ಞಾಸುಗಳಿಗೂ ಸಂಶಯ ಪರಿಹಾರಪೂರ್ವಕ ಬೋಧಿಸ್ಯಲು ಯೋಗ್ಯನಲ್ಲ; ಆದಕಾರಣ ಅವನೂ ದೇಶಿಕನೆಂದು ಪೇಳಿಸಿಕೊಳ್ಳುವದಿಲ್ಲ; ಮತ್ತೇನೆಂದರೆ;—ಶ್ರೋತ್ರಿಯ, ಬ್ರಹ್ಮನಿಷ್ಠ ಎಂಬ ಎರಡು ಲಕ್ಷಣಗಳಿಂದೊಡಗೂಡಿದವನೇ ಗುರುವೆನಿಸಿಕೊಳ್ಳುವನು. ಅವನಿಂದ ಮುಮುಕ್ಷುವಿಗೆ ಇಷ್ಟಪದದ ಪ್ರಾಪ್ತಿಯಾಗುವದು. ಹ್ಯಾಗೆಂದರೆ;—ನದಿಯ ಪಾರವಂ ಪೊಂದಬೇಕೆಂದಿಚ್ಛಿಸುವನಿಗೆ ಪಾರಗಾಣಿಸಿ ವಾಂಛಿತಸ್ಥಾನವಂ ತೋರಿಸುವದರಲ್ಲಿ ಅಂಧನಾಗಲೀ ಅಥವಾ ಪಂಗುವಾಗಲೀ ಹ್ಯಾಗೆ ಸಮರ್ಥನಾಗುವದಿಲ್ಲವೋ, ಆದರೆ; ನೇತ್ರಪಾದಗಳೆಂಬ ಉಭಯಕರಣ ಸಂಯುಕ್ತನೇ ನದಿಯಿಂ ಪಾರಗಾಣಿಸಿ ವಾಂಛಿತಸ್ಥಾನವಂ ತೋರಿಸುವದರಲ್ಲಿ ಸಮರ್ಥನಾಗಿರುವನೋ, ಹಾಗೆ ಶ್ರೋತ್ರಿಯ ಬ್ರಹ್ಮನಿಷ್ಠನಾದ ಗುರುವೇ ಸಂಸಾರ ನದಿಯಿಂದ ಪಾರಗಾಣಿಸಿ ತನ

ಬ್ರಹ್ಮರೂಪವಾದ ನಿಜಸ್ಥಾನವಂ ತೋರಿಸುವನು. ಮತ್ತು ಕೇವಲ ಶ್ರೋತ್ರಿಯನಿಗೆ ತಾಪವಿರುವಂತೆ ಬ್ರಹ್ಮನಿಷ್ಠೆಯಿಂದೊಡಗೂಡಿದವನಿಗೆ ತಾಪವಿರುವದಿಲ್ಲ; ಈ ಅರ್ಥವಂ ತಿಳಿಯಪಡಿಸಲೋಸುಗ ಆಚಾರ್ಯರು 'ಪ್ರಶಾಂತ' ವೆಂಬ ವಿಶೇಷಣವಂ ಪೇಳಿರುವರು.

## (೪) ಪ್ರಶಾಂತಪದಕ್ಕೆ ಅರ್ಥ:—

(ಪ್ರಶಾಂತ) ಅಂದರೆ;—ಕ್ಷೋಭದಿಂ ರಹಿತನಾದ ಬ್ರಹ್ಮನಿಷ್ಠನಿಗೆ ಪೆಸರು. ಆ ಕ್ಷೋಭದ ನಿಮಿತ್ತಗಳು ಅನೇಕವಿರುಪವು. ಅವು ಯಾವವೆಂದರೆ; ಅಧ್ಯಾತ್ಮಾದಿಗಳು–ವಿದ್ಯಾಭ್ಯಾಸದ ವಿಸ್ಮರಣಾದಿಗಳು–ರಜಸ್ತಮೋಗುಣ ಸಂಬಂಧಿಗಳಾದ ಕಾಮಕ್ರೋಧಾದಿಗಳ ಉತ್ಪತ್ತಿ–ಮತ್ತು ಕರ್ತವ್ಯಾಕರ್ತವ್ಯಗಳ ಜನ್ಯ, ಹೀಗೆ ಅನೇಕ ನಿಮಿತ್ತಗಳಿಂದ ತಾಪವು ಜ್ಞಾನಹೀನನಿಗಾಗುವದು; ಬ್ರಹ್ಮನಿಷ್ಠನಿಗೆ ಆಗುವದಿಲ್ಲ; ಆದ್ದರಿಂದ ಪ್ರಶಾಂತನೆಂದು ಪೇಳಿರುವರು. ಅಧ್ಯಾತ್ಮಾದಿ ಮೂರು ತಾಪಗಳು ಪ್ರಸಿದ್ಧವೇ ಆಗಿವೆ. ಮತ್ತು

(೧) ಅಭ್ಯಾಸ—

(೨) ವಿಸ್ಮರಣ—

(೩) ಮಾನಭಂಗ—

(೪) ಗರ್ವ—ಇವು ನಾಲ್ಕು ವಿದ್ಯಾಧ್ಯಯನದಲ್ಲಿನ ತಾಪಗಳು.

ಆ ಅಧ್ಯಾತ್ಮಾದಿ ತಾಪಗಳು ಮೂರು, ಅಭ್ಯಾಸ ವಿಸ್ಮರಣಾದಿ ನಾಲ್ಕು ಸಹಾ, ಸೇರಿದ ಏಳು ತಾಪಗಳನ್ನು ನಾರದರು ಪ್ರಸಿದ್ಧವಾಗಿ ಪೇಳಿರುವರು. ರಜಸ್ತಮಗಳು ಮತ್ತು ಅದರಿಂದ ಪುಟ್ಟಿದ ಕಾಮಾದಿ ತಾಪಗಳು ಲೋಕಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿವೆ. ಆ ಕಾಮಾದಿ ಕ್ಷೋಭದಿಂ ರಹಿತನಾದವನಾರೋ, ಅವನು ಸುಖಿಯಾಗಿರುವನು. ಈ ಮಾತು ಗೀತೆಯ ಐದನೆ ಅಧ್ಯಾಯದಲ್ಲಿ ಪೇಳಿರುವದು. ಮತ್ತು ಕರ್ತವ್ಯಾಕರ್ತವ್ಯದ ತಾಪವು ಅಜ್ಞರಂ ತಪನಗೊಳಿಸುವದು, ತಜ್ಞನಿಗೆ ತಪನಪಡಿಸುವದಿಲ್ಲ; ಇದು "ನೈನಂ ಕೃತಾಕೃತೇ ತಪತಃ" ಈ ಶೃತಿಯಲ್ಲಿ ಪ್ರಸಿದ್ಧಪಡಿಸಿರುವದು. ಈ ಪ್ರಶಾಂತಪದದಿಂದ ಬ್ರಹ್ಮನಿಷ್ಠನಿಗೆ ಜೀವನ್ಮುಕ್ತಿಯ ವೃತ್ತಿಜನ್ಯವಾದ ವಿಶೇಷ ಸುಖಾನುಭೂತಿಯಂ ಸೂಚಿಸಿದರು. ಹ್ಯಾಗೆಂದರೆ;—ಶಾಂತಿ ಸುಖಕ್ಕೆ ಅಭಿವ್ಯಂಜಕವಾಗಿರುವದು. ಈ ಮಾತು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ. ಮತ್ತು ಶಾಂತಿ ವಿನಾ ಅಶಾಂತಪುರುಷನಿಗೆ

ಸುಖವಾಗುವದಿಲ್ಲ; ಈ ಮಾತು ಭಗವಂತನು ಗೀತೆಯ ದ್ವಿತೀಯಾಧ್ಯಾಯದಲ್ಲಿ ಹೇಳಿರುವನು. ಇನ್ನು ಪ್ರಶಾಂತನಾದವನಿಗೆ ಸರ್ವ ದಿಕ್ಕುಗಳಲ್ಲಿಯೂ ಸುಖ ವಿರುವದು. ಈ ವಿಷಯ ಭಾಗವತದ ಏಕಾದಶಸ್ಕಂಧದಲ್ಲಿ ಪ್ರಸಿದ್ಧಿಪಡಿಸಿರುವದು. ಈ ಪ್ರಕಾರದಿಂ ಹೇಳಲ್ಪಟ್ಟ, ದಯಾಲು-ಬ್ರಹ್ಮನಿಷ್ಠ-ಪ್ರಶಾಂತ ಎಂಬ ವಿಶೇಷಣ ವಿಶಿಷ್ಟನಾದ ಯಾವ ಗುರುವುಂಟೋ, ಅವನೇ ಜ್ಞಾನದಾನವಂ ಕೊಡುವ ದಾತನು. ಹೀಗೆ ಗುರುವಿನ ವಿಶೇಷಣವು ಇನ್ನೂ ಅನೇಕವಾಗಿರುವದು.

೧. ಪೂರ್ಣಬುದ್ಧಿಯೂ ಪ್ರಶಾಂತತೆಯೂ ಉಳ್ಳವನಾಗಿಯೂ, ಆತ್ಮ ಜ್ಞಾನವೂ ಆತ್ಮಮನನವೂ ಉಳ್ಳವನಾಗಿಯೂ, ಸರ್ವಜನ ಸುಹೃದನಾಗಿಯೂ ಮತ್ತು ಲೋಕದಲ್ಲಿ ಶ್ರೇಷ್ಠನಾಗಿಯೂ, ಯಾವನಿರುವನೋ, ಅವನೇ ಗುರುವೆಂದು ಹೇಳಿಸಿಕೊಳ್ಳುವನು.

A ೨. ಇನ್ನು ಸಂಸ್ಕೃತ ಅಥವಾ ಪ್ರಾಕೃತ ಭಾಷೆಯಿಂದಲಾಗಲೀ, ಅಥವಾ ಗದ್ಯ ಪದ್ಯಾಕ್ಷರಗಳಿಂದಲಾಗಲೀ, ಅಲ್ಲದೆ ಶಿಷ್ಯನ ದೇಶಭಾಷೆಯಿಂದಲಾಗಲೀ ಯಾವನು ಜ್ಞಾನೋಪದೇಶವನ್ನಿತ್ತು ಕೃತಾರ್ಥನಂ ಮಾಡುವನೋ, ಅವನೂ ಗುರುವೆನಿಸಿಕೊಳ್ಳುವನು. ಹೀಗೆ ಅನೇಕ ವಿಶೇಷಣಗಳು ಗುರುವಿಗೆ ಗ್ರಂಥಾಂತರಗಳಲ್ಲಿ ಹೇಳಿರುವವು. ಅವೆಲ್ಲ ಬ್ರಹ್ಮನಿಷ್ಠನಾದ ಗುರುವಿನಲ್ಲಿ ಸ್ವಭಾವಸಿದ್ಧವಾಗಿವೆ. ಈ ಪ್ರಕಾರ ಅನೇಕ ಸದ್ಗುಣ ಸಂಯುಕ್ತನಾಗಿರುವ ಗುರುವನ್ನು ಜಿಜ್ಞಾಸುವು ಶರಣುಹೊಂದಿ ಅವನಂ ಭಕ್ತಿ ಸಂಯುಕ್ತನಾಗಿ, ಆರಾಧಿಸಬೇಕು.

॥೬॥ ಗುರುಭಕ್ತಿ:—ಭಕ್ತಿಎಂಬ ಹೆಸರು ಇಲ್ಲಿ ಪ್ರೇಮ ವಿಶೇಷಕ್ಕಾಗುವದು; ಆರಾಧನೆಯ ಹೆಸರು ಸೇವೆಗಾಗುವದು. ಯಾವ ಪುರುಷನು ಪ್ರೇಮ ಸಹಿತನಾಗಿ, ಗುರುವನ್ನು ಸೇವಿಸುವನೋ. ಅವನಿಗೆ ದೃಷ್ಟಾದೃಷ್ಟವಾದ ಉಭಯ ಫಲ ಪ್ರಾಪ್ತಿಯಾಗುವದು. ಗುರು ಸೇವೆಯಿಂದ ಧರ್ಮೋತ್ಪತ್ತಿಯಾಗಲು ಅದು ಅದೃಷ್ಟಫಲ ವೆನಿಸಿಕೊಳ್ಳುವದು. ಜ್ಞಾನೋತ್ಪತ್ತಿಯಾಗಲು ಅದು ದೃಷ್ಟಫಲವೆನಿಸಿಕೊಳ್ಳುವದು. ಮತ್ತು ಗುರುಭಕ್ತಿಹೀನನಿಗೆ ಸದ್ವಿದ್ಯೆಯ ಲಾಭವಾಗುವದಿಲ್ಲ; ಮುಖ್ಯವಾಗಿ ಗುರುಭಕ್ತಿ ಉಳ್ಳವನಿಗೇ ಆಗುವದು. ಅದನ್ನು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಹೇಳಿರುವದು. ಆದಕಾರಣ ವಿದ್ಯಾಪ್ರಾಪ್ತಿಗೆ

ಅಂತರಂಗಸಾಧನ ಈಶ್ವರ, ಗುರುಭಕ್ತಿಯೆಂದು ಪೇಳಿರುವರು. ಇಷ್ಟೇ ಅಲ್ಲ; " ಯಸ್ಯದೇವೇ ಪರಾಭಕ್ತಿರ್ಯಥಾದೇವೇ ತಥಾ ಗುರೌ " ಈ ಶೃತಿಯೂ ಪೇಳಿರುವದು. ಏನೆಂದರೆ;—ಯಾವ ಪುರುಷನಿಗೆ ದೇವನಲ್ಲಿ ಪರಾಭಕ್ತಿ ಇರುಪದೋ, ಮತ್ತು ಹ್ಯಾಗೆ ದೇವನಲ್ಲಿ ಇರುವದೋ, ಹಾಗೆ ಗುರುಗಳಲ್ಲಿ ಭಕ್ತಿಯಿರುವದೋ, ಆ ವಿವೇಕಿಗೇನೇ ವೇದಪ್ರತಿಪಾದಿತವಾದ ಅರ್ಥಗಳು ಪ್ರಕಾಶವಾಗುವವು ಎಂದು. ಈ ಶೃತಿಯ ಅಭಿಪ್ರಾಯವಾದ ವಿಶೇಷ ಗುರುಭಕ್ತಿಮಹಾತ್ಮ್ಯವು ಶಂಕರಾನಂದಸ್ವಾಮಿಯು " ಆತ್ಮಪುರಾಣ " ದಲ್ಲಿ ವಿಸ್ತರಿಸಿರುವದು.

|| ೧೦ || ಗುರುಸೇವೆ:—ಆದ್ದರಿಂದ ಮುಮುಕ್ಷುವು ನಿಷ್ಕಪಟ ನಿಷ್ಕಾಮಬುದ್ಧಿಯಿಂದ ಪ್ರೀತಿಪೂರ್ವಕವಾಗಿ (೧) ಶರೀರ, (೨) ವಾಣಿ, (೩) ಮನ, (೪) ಧನಾದಿಗಳನ್ನು ಸಮರ್ಪಿಸಿ ಸದ್ಗುರುವನ್ನು ಸೇವಿಸಬೇಕು,

[೧] ಶರೀರದಿಂದ ಪಾದಸಂವಾಹನ, ಅರ್ಚನ, ಆಜ್ಞಾಪಾಲನಾದಿ ಸೇವೆಯಂ ಮಾಡಬೇಕು.

[೨] ವಾಣಿಯಿಂದ ಸ್ತವನಾದಿಗಳಂ ಮಾಡಬೇಕು.

[೩] ಮನದಲ್ಲಿ ಗುರುಮೂರ್ತಿಯ ಧ್ಯಾನವಂ ಮಾಡಬೇಕು.

[೪] ಧನಶಬ್ದದಿಂದ ಪ್ರಿಯಪದಾರ್ಥಗಳನ್ನು ಗುರುವಿನ ಮುಂದೆ ಸಮರ್ಪಿಸಬೇಕು. ಮತ್ತು ಶಿಷ್ಯರೀತಿ ಅನುಸಾರ ಎಲ್ಲಾ ಕಾಲದಲ್ಲಿಯೂ, ಶಾಸ್ತ್ರವಿಧಿಯಂತೆ ಅಧಿಕಾರವಂ ಪಾಲನೆಗೈಯ್ಯಬೇಕು. ಇನ್ನು ಗುರುವಿನಲ್ಲಿ ಪರಮೇಶ್ವರ ಬುದ್ಧಿಯಿಂದಿರಬೇಕು. ಮನುಷ್ಯಭಾವನೆಯನ್ನೊಂದು ಕಾಲಕ್ಕೂ ಮಾಡಬಾರದು. ಯಾಕೆಂದರೆ;—ಗುರುವಿನಲ್ಲಿ ನರಬುದ್ಧಿಯಂ ಮಾಡುವದ್ದರಿಂದ ಮಹತ್ತಾದ ಅಪರಾಧವಾಗುವದು. ಅದನ್ನು

ಶ್ಲೋ|| " ಗುರುಂ ಯೋ ಮಾನವೈರನ್ಯೈಃ ಸಮಂ ಪಶ್ಯತಿ
ಮೋಹತಃ || ನತಸ್ಯಾಸ್ಮಿನ್ ಭವೇಲ್ಲೋಕೇ ಸುಖಂ
ನೈವ ಪರತ್ರಚ ಸಯಾತಿನರಕಾನ್ " ||

ಇತ್ಯಾದಿ ಶಾಸ್ತ್ರವಚನಗಳಿಂದ ಪ್ರಸಿದ್ಧಿಪಡಿಸಿರುವರು. ಆದ್ದರಿಂದ ಜಿಜ್ಞಾಸುವು ಗುರುವಿನಲ್ಲಿ ಮನುಷ್ಯಬುದ್ಧಿಯನ್ನು ಯಾವಾಗ್ಯೂ ಮಾಡಕೂಡದು. ಮತ್ತೇನೆಂದರೆ, ಭಗವದ್ಬುದ್ಧಿಯನ್ನೇ ಮಾಡಬೇಕು. ಮಾತು ಸ್ಮೃತಿ

ಘಲ್ಲಿಯೂ (೧) "ಆಚಾರ್ಯಂ ಮಾಂ ವಿಜಾನೀಯಾದಿತಿ" (೨) "ಸದೀಕ್ಷಯಾಚಾರ್ಯ ಮೂರ್ತಿಸ್ಥ ಇತಿ" ಎಂದು ಪೇಳಿರುವದು. ಇವುಗಳ ಅರ್ಥವೇನೆಂದರೆ :—

[೧] ನನ್ನನ್ನು ಆಚಾರ್ಯನೆಂದು ತಿಳಿ. ಇದು ಭಗವದ್ವಚನವು. ಮತ್ತು

[೨] ಪರಮಾತ್ಮನೇ ಶಿಷ್ಯರ ಸದುಪದೇಶಕ್ಕೋಸುಗ, ಆಚಾರ್ಯಮೂರ್ತಿಯಾಗಿರುವನು. ಈ ಪರಿಯಾದ ಸದ್ಭಾವನೆಯಿಂದ ಶಿಷ್ಯನು ಗುರುವಂ ಸೇವಿಸಿ, ಮತ್ತು ನಮಸ್ಕರಿಸಿ, ವಿನಯದಿಂದ ಪ್ರಶ್ನೆಯಂಗೈದು, ಅವನ ಉಪದೇಶವಂ ಪಡದು ಕೃತಾರ್ಥನಾಗುವನು. ಈ ಮಾತೂಕೂಡ ಭಗವಂತನು "ತದ್ವಿದ್ಧಿ ಪ್ರಣಿಪಾತೇನ" ಅಂದರೆ, ಎಲೈ ಅರ್ಜುನಾ! ನಮಸ್ಕಾರದಿಂದಲೂ, ಪರಿಪ್ರಶ್ನೆಯಿಂದಲೂ ಮತ್ತು ಸೇವೆಯಿಂದಲೂ, ಆ ಜ್ಞಾನವಂ ತಿಳಿ, ನಿನ್ನಂಥಾವನಿಗೆ ತತ್ವದರ್ಶಿಯಾದ ಜ್ಞಾನಿಯು ಜ್ಞಾನೋಪದೇಶವಂ ಮಾಡ್ಯಾನು ಎಂದು, ಈ ಶ್ಲೋಕದಿಂ ಪೇಳಿರುವನು. ಹೀಗೆ ಪೇಳಿದ್ದರಿಂದ ಏನು ಸಿದ್ಧವಾಯಿತು ಅಂದರೆ ;—ಗುರುವಿನಃ ಸ್ವಬುದ್ಧಿ ಬಲದಿಂದ ಜ್ಞಾನವಾಗುವುದಿಲ್ಲವೆಂತಲೂ, ಆಚಾರ್ಯಾಧೀನವೇ ಜ್ಞಾನವಿರುವದೆಂತಲೂ ಸಿದ್ಧವಾಯಿತು.

ಶಂಕಾ ;—ಕರ್ಮೋಪಾಸನೆಗಳಿಂದ ಶುದ್ಧಚಿತ್ತವುಳ್ಳ ಜಿಜ್ಞಾಸುವು ತಾನೆ ವಾಕ್ಯಾರ್ಥವಂ ವಿಚಾರಿಸಿ, ಬ್ರಹ್ಮವಂ ತಿಳಿದುಕೊಂಡಾನು ! ಆದ್ದರಿಂದ ಗುರುವಿನಿಂದೇನು ? ಮತ್ತು ಅವನ ಸೇವೆಯಿಂದೇನು ?

ಸಮಾಧಾನ :—ಗುರುವಿನಿಂದಲ್ಲದೆ ಜ್ಞಾನವಾಗುವುದಿಲ್ಲ; ಯಾಕೆಂದರೆ;—"ಆಚಾರ್ಯವಾನ್ ಪುರುಷೋವೇದ" ಈ ಶ್ರುತಿಯು ಗುರುಸೇವೆ ಉಳ್ಳವನಿಗೇ ಜ್ಞಾನದ ಪ್ರಾಪ್ತಿಯಂ ಪೇಳಿರುವದು. ಆದ್ದರಿಂದ ಆಚಾರ್ಯನಿಂದಲೇ ಬ್ರಹ್ಮವಿದ್ಯಾ ಲಭಿಸತಕ್ಕದ್ದು ; ಸ್ವತಃ ಜ್ಞಾನವಾಗುವದಿಲ್ಲ. ಮತ್ತು ಗುರುವಿನಃ ವೇದಗಳ ಅಧ್ಯಯನವಂ ಮಾಡುವಂಥಾದ್ದು ಸಾಗರದ ಜಲದಂತಿರುವದು. ಆದರಿಂದ ದ್ವೈತರೂಪ ಕ್ಷಾರವೇ ಅನುಭವಿಸಲ್ಪಡುವುದು. ಇನ್ನು ಗುರುಮುಖವಾಗಿ ಅಧ್ಯಯನವಂ ಮಾಡಿದರೆ,ಮೇಘದಿಂದ ಮಧುರ ಜಲದಂತೆ ಅದ್ವೈತಾಮೃತಕ್ಕೆ ಹೇತುವಾಗುವದು. ಮತ್ತು ಗುರುವಿಲ್ಲದ ಅನ್ಯ ಸಾಧನಗಳು ವೈದ್ಯನಿಲ್ಲದ ಧಾತು ಭಕ್ಷಣಾದಿಗಳಂತೆ ಖೇದಕ್ಕೆ ಕಾರಣವಾಗುವವು. ಆದ್ದರಿಂದ ಮೋಕ್ಷಮಾರ್ಗದಲ್ಲಿ ಗುರುವಿನ ಕೃಪೆಯೇ ಮುಖ್ಯವಾಗಿ

ರುವದು. ಅವನ ಮುಂದೆ ಅನ್ಯಸಾಧನಗಳು ಗಂಗಾತೀರದಲ್ಲಿ ಭಾವಿಯಂ ತೋಡಿದಂತಾಗುವದು. ಮತ್ತು ಗುರುಭಕ್ತಿಯಿಲ್ಲದೆ ಒಂದು ಕಾಲಕ್ಕೂ ಜ್ಞಾನ ವಾಗುವುದಿಲ್ಲ. ಇನ್ನು ಯಾವನಾದರೂ ಒಂದುವೇಳೆ ವಾಕ್ಪಾರಿಯಾದಾನು; ಆದರೂ ಅವನಿಗೆ ಶಾಂತಿಸುಖವಾಗುವದಿಲ್ಲ. ಆದಕಾರಣ ಎಲ್ಲಿಯವರಿವಿಗೂ ಆಯುಸ್ಸುಂಟೋ, ಅಲ್ಲಿಯವರಿವಿಗೂ ಸರ್ವದಾಕಾಲ ಗುರುವನ್ನು ಪಾಸಿಸ ಬೇಕು. ಈ ಮಾತು "ಯಾವ ದಾಯುಸ್ತ್ರಯೋವಂದ್ಯಾ" ಈ ಶ್ಲೋಕದಿಂದ ಅನ್ಯಶಾಸ್ತ್ರದಲ್ಲಿಯೂ ಪೇಳಿರುವದು. ಯಾವವರಿವಿಗೆ ಆಯು ಸ್ಸುಂಟೋ, ಆ ವರಿವಿಗೆ ವೇದಾಂತ, ಗುರು, ಈಶ್ವರ ಇವು ಮೂರನ್ನು ವಂದಿಸ ಬೇಕು. ಮೊದಲು ತತ್ವಜ್ಞಾನದ ಸಿದ್ಧಿಗಾಗಿಯೂ, ಅದರ ಬಳಿಕ ಕೃತಘ್ನತಾ ದೋಷ ನಿವೃತ್ತಿಯ ನಿಮಿತ್ತವಾಗಿಯೂ ಸೇವಿಸಬೇಕು. ಇನ್ನು ರಾಮಕೃ ಷ್ಣಾದಿಗಳೂ ಕೂಡ, ಲೋಕಸಂಗ್ರಹಾರ್ಥವಾಗಿ, ಗುರುಸೇವೆ ಗೈದಿರುವದು. ಆದರೆ, ಅದು ಅನ್ಯರಿಗೆ ಪೇಳಿದ ಕಥೆಯಾಗುವದು, ಮತ್ತು ಗುರುವಿನಿಂದಾದ ಉಪಕಾರಕ್ಕೆ ಪ್ರತಿಕೃತಿಯಂ ಮಾಡಲು ಯಾರೂ ಸಮರ್ಥರಲ್ಲ; ಆದ್ದರಿಂದ ಸದ್ಗುರುವನ್ನು ಸದಾ ಸೇವಿಸಬೇಕು. ಆ ಜಿಜ್ಞಾಸುವು ತನ್ನ ಶ್ರೇಯಸ್ಸಿಗಾ ಗಿಯೇ ಸೇವಿಸಬೇಕಲ್ಲದೆ ಆಚಾರ್ಯನಿಗೆ ಸೇವನಾದಿ ಯಾವ ಅಪೇಕ್ಷೆಯೂ ಇಲ್ಲ. ಯಾಕೆಂದರೆ, ಅವನು ಸರ್ವರಿಗೂ ಸುಹೃದನಾಗಿರುವನು, ಇನ್ನು ಸದಾತೃಪ್ತ ಕಾಮನಾಗಿರುವನು. ಕೇವಲ ಬ್ರಹ್ಮವಿದ್ಯೆಯ ದಾನವನ್ನೇ ಕೊ ಡುವನು, ಇದರಿಂದ ಆ ಗುರುವು ಸಾಕ್ಷಾತ್ ಶಿವರೂಪನಾಗಿರುವನು. ಈ ಮಾತು ಮತ್ತೊಂದು ಶಾಸ್ತ್ರದಲ್ಲಿಯೂ ಪರಮಾದ್ವೈತ ವಸ್ತುವಿನ ವಿಜ್ಞಾನ ವನ್ನು ಕೃಪೆಯಿಂದ ಶಿಷ್ಯನಂ ಕುರಿತು ದಾನವಂ ಕೊಡುವ ಗುರುವು ಸಾಕ್ಷಾತ್ ಶಿವರೂಪನೆಂದೂ, ಮತ್ತು ಸಾಕ್ಷಾತ್ ಗುರುವೂ ಅವನೇ ಯೆಂದೂ ಪೇಳಿರು ವದು. ಆ ಗುರುವಿನ ಉಪಕಾರವನ್ನು ವಿವೇಕಿಯಾದವನು ತಿಳಿಯುವನಲ್ಲದೆ ಮೂಢನು ತಿಳಿಯುವದಿಲ್ಲ; ಯಾವನು ಗುರುಪ್ರಭಾವವಂ ತಿಳಿದಿರುವನೋ, ಅವನು ಅವನ ಉಪಕಾರಸ್ಮರಣೆಯಿಂದ, ಈ ಪ್ರಕಾರವಾಗಿ ಸ್ತೋತ್ರಗೈದಿರು ವನು:—ಎಲೈ ಸ್ವಾಮಿಯೇ! ಸ್ವಾರಾಜ್ಯಸಾಮ್ರಾಜ್ಯವಾದ ಈ ವಿಭೂತಿಯು ತಮ್ಮ ಕೃಪಾಮಹಿಮೆಯ ಪ್ರಸಾದದಿಂದ ನಾನು ಪೊಂದಿರುವೆನು. ಇಂಥಾ ಮಹಾತ್ಮನಾದ ಸದ್ಗುರುವಾಗಿರುವ ನಿನಗೆ ನನ್ನ ಪುನಃಪುನಃ ನಮಸ್ಕಾರವಾ

A. ತಾತಸ್ಯ ಕೂಪೋಽಯಮಿತಿ ಬ್ರುವಾಣಾಃ
ಕ್ಷಾರಂ ಜಲಂ ಕಾಪುರುಷಾ ಪಿಬಂತಿ



ಪ್ರ. ಮೂ. ೬೦/೫

ಗಲಿ; ಇದು " ಸ್ವರಾಜ್ಯಸಾಮ್ರಾಜ್ಯವಿಭೂತಿರೇಷಾ ಭವತ್ಕೃಪಾಯಾ ಮಹಿಮಪ್ರಸಾದಾತ್ " ಇತ್ಯಾದಿ ಶಾಸ್ತ್ರವಾಕ್ಯಗಳಿಂದ ಪ್ರಸಿದ್ಧಪಡಿಸಿರುವನು. ಇಂಥಾ ಉತ್ತಮನು ಬ್ರಹ್ಮವಿದನಾದ ಗುರುವಂ ಬಿಟ್ಟು, ಯಾವನು ಸಂಪ್ರದಾಯಪ್ರಾಪ್ತ ದ್ವೈತವಾದಿಯಾದ ಗುರುವಿನ ಸಂಗವಂ ಮಾಡುವನೋ, ಅವನು ಅಪೂರ್ವ ಪ್ರಕಟವಾದ ಮಧುರಜಲವಂ ಬಿಟ್ಟು, ಪಿತಾಮಹನಿಂ ತೋಡಿದ ಭಾವಿಯ ಕ್ಷಾರೋದಕಪಾನವಂ ಮಾಡುವನಂತೆ ಅಸದಾಗ್ರಹನೆನಿಸುವನು. ಆದ್ದರಿಂದ ಪೂರ್ವದೋಳ್ ಪೇಳಿದ ಗುರುವಿನಿಂದಲೇ ಅದ್ವಯಬ್ರಹ್ಮದ ಜ್ಞಾನವಾಗುವದು.

ಶಂಕಾ ;—॥ ೧ ॥

ಆ ಗುರುವು ಅತತ್ವಜ್ಞನಾಗಿರುವನೋ, ತತ್ವಜ್ಞನಾಗಿರುವನೋ ? ಅತತ್ವಜ್ಞನೆಂದರೆ;—ಅವನಿಂದ ಪರಮಾರ್ಥವಾದ ತತ್ತ್ವೋಪದೇಶ ಸಂಭವಿಸುವದಿಲ್ಲ; ಯಾಕೆಂದರೆ;—ಅವನು ಮೊದಲೇ ಅಜ್ಞನಾಗಿದ್ದಾನೆ. ಮತ್ತು ತತ್ವಜ್ಞನೆಂದರೆ;—ಅವನಿಗೆ ತತ್ವಜ್ಞಾನೋದಯದಲ್ಲಿಯೇ ಅಜ್ಞಾನ ನಾಶವಾದ್ದರಿಂದ, ಅದರ ಕಾರ್ಯವಾದ ಸೂಕ್ಷ್ಮ ಸ್ಥೂಲ ಶರೀರಗಳ ಸಂಬಂಧವು ತಪ್ಪಿಹೋಗಿದೆ. ಆದ್ದರಿಂದ ಅವನಿಂದಲೂ ತತ್ತ್ವೋಪದೇಶ ಸಂಭವಿಸುವದಿಲ್ಲ;

ಅನ್ಯಶಂಕಾ ;—॥ ೨ ॥

ಆ ತತ್ವಜ್ಞನು ದ್ವೈತದರ್ಶೀ ಆಗಿರುವನೋ, ಅಥವಾ ಅದ್ವೈತದರ್ಶೀ ಆಗಿರುವನೋ ? ದ್ವೈತದರ್ಶೀ ಅಂದರೆ;—ಅವನಿಂದ ಅದ್ವೈತೋಪದೇಶವಾಗುವದಿಲ್ಲ. ಮತ್ತು ಅದ್ವೈತದರ್ಶೀ ಅಂದರೆ;—ಅವನು ಸ್ವಾಪತಭೇದ ದೃಷ್ಟಿಯಿಲ್ಲದವನಾಗಿರುವನು, ಇದರಿಂದ ಶಿಷ್ಯರಂ ಕುರಿತು ಉಪದೇಶವಂ ಮಾಡುವದಕ್ಕೆ ಆಗುವದಿಲ್ಲ.

ಮತ್ತೊಂದು ಶಂಕಾ ;—॥ ೩ ॥

ಅದ್ವೈತದರ್ಶೀಯಾದ ಗುರುವು ಶಿಷ್ಯರಂ ಕುರಿತು ಸಗುಣ ಬ್ರಹ್ಮೋಪದೇಶವಂ ಮಾಡುವನೋ; ಅಥವಾ ನಿರ್ಗುಣಬ್ರಹ್ಮದ ಬೋಧೆಯಂ ಮಾಡುವನೋ ? ಸಗುಣಬ್ರಹ್ಮದ್ದೆಂದರೆ; ಸಗುಣದೊಡನೆ ಜೀವನಿಗೆ ಅಭೇದ ಸಂಭವಿಸದ್ದರಿಂದ ಪುರುಷಾರ್ಥ ಸಿದ್ಧಿ ಆಗುವದಿಲ್ಲ; ಇನ್ನು ನಿರ್ಗುಣ ಬ್ರಹ್ಮದ್ದೆಂದರೆ;—ಅದು ವಾಣಿಗೆ ವಿಷಯವಲ್ಲದ ಕಾರಣ ಅನಿರ್ದೇಶ್ಯವಾಗಿರುವುದು. ಅವನ್ನು ಪ

ದೇಶಿಸುವದಕ್ಕೆ ಯಾರೂ ಸಮರ್ಥರಾಗಿಲ್ಲ; ಆದ್ದರಿಂದ ಎರಡುಬಗೆಯಾವ ಗುರುವಿನಿಂದಲೂ, ಜಿಜ್ಞಾಸುವಿಗೆ ಇಷ್ಟಾರ್ಥ ಸಿದ್ಧಿಯಾಗುವದಿಲ್ಲ.

ಅ—ಈಗ ಕ್ರಮವಾಗಿ ಮೂರು ಶಂಕೆಗಳಿಗೂ ಪರಿಹಾರವಂ ಮಾಡುತ್ತಾರೆ:—

## ॥ ೧ ॥ ನೇ ಶಂಕೆಗೆ ಸಮಾಧಾನ :—

ಪೂರ್ವದಲ್ಲಿ ಹೇಳಿದ ಉಪದೇಶಿಯಾದ ಯಾವ ಅತತ್ವಜ್ಞನುಂಟೋ, ಅಥವಾ ತತ್ವಜ್ಞನುಂಟೋ, ಅವರಿಬ್ಬರಲ್ಲಿ ಅತತ್ವಜ್ಞನು ಶೃತಿಸ್ಮೃತಿ ರೂಪವಾದ ನೇತ್ರಗಳಿಂ ಹೀನನಾದ್ದರಿಂದ ಅಂಧನಿಗೆ ಸಮಾನನಾಗಿರುವನು. ಅವನಿಂದ ತತ್ವದ ಯಥಾರ್ಥೋಪದೇಶವಾಗುವದಿಲ್ಲ ; ಈ ಮಾತು ಅನ್ಯಶಾಸ್ತ್ರದಲ್ಲಿಯೂ ಹೇಳಿರುವದು. ವಿದ್ವಾನುಗಳಿಗೆ ಶೃತಿಸ್ಮೃತಿಗಳೇ ಉಭಯನೇತ್ರವು, ಅವುಗಳಲ್ಲಿ ಒಂದಿಲ್ಲದಿದ್ದರೆ;—ಕಾಣಾ (ಒಂದು ಕಣ್ಣಿಲ್ಲದ ಕುರುಡ) ಎನಿಸಿಕೊಳ್ಳುವನು. ಎರಡೂ ಇಲ್ಲದಿದ್ದರೆ; ಅಂಧನೆನಿಸಿಕೊಳ್ಳುವನು. ಆ ಶೃತಿ ಸ್ಮೃತಿಗಳೆರಡಕ್ಕೂ ವಿಷಯವಾದ್ದು ಒಂದೆ ಅದ್ವಯಬ್ರಹ್ಮವು ಅದನ್ನು “ ವೇದಾ ಬ್ರಹ್ಮಾತ್ಮವಿಷಯಾಃ ” ಈ ವಾಕ್ಯದಿಂದ ಭಾಗವತದಲ್ಲಿ ಪ್ರಸಿದ್ಧವಾಗಿ ಹೇಳಿರುವದು. ಹ್ಯಾಗೆ ಎರಡು ನೇತ್ರಗಳಿಗೂ ಒಬ್ಬ ಸೂರ್ಯನು ವಿಷಯನೋ, ಹಾಗೆ ಶೃತಿಸ್ಮೃತಿಗಳೆರಡಕ್ಕೂ ವಿಷಯವಾದ್ದು ಒಂದು ಅದ್ವಯಬ್ರಹ್ಮವಾಗಿದೆ. ಇಲ್ಲಿ ಸೂರ್ಯನ ಉದಾಹರಣೆಗೆ ಅಭಿಪ್ರಾಯವೇನೆಂದರೆ ;—ನೇತ್ರಪ್ರಕಾಶಕನೂ ಸೂರ್ಯನಾಗಿ, ಮತ್ತು ವಿಷಯವೂ ಸೂರ್ಯನೇ ಆಗಿರುವಂತೆ ಶೃತಿಸ್ಮೃತಿಯೂ ಬ್ರಹ್ಮದಿಂ ಪ್ರಕಾಶಿತವಾಗಿ, ಮತ್ತು ಬ್ರಹ್ಮವನ್ನೇ ವಿಷಯೀಕರಿಸುವದು. ಇಲ್ಲಿ ಆವರಣ ಭಂಗಮಾತ್ರವೇ ವಿಷಯವೆನಿಸುವದು. ಈ ವಾರ್ತೆಯನ್ನು ಮುಂದೆ ಹೇಳುವೆವು. ಆ ಅದ್ವಯಬ್ರಹ್ಮ ವಿಷಯಕವಾದ ಶೃತಿಸ್ಮೃತಿಯ ಸಿದ್ಧಾಂತವಂ ತಿಳಿಯದ ಯಾವ ಅತತ್ವಜ್ಞನುಂಟೋ, ಅವನು ತತ್ತ್ವೋಪದೇಶವಂ ಮಾಡುವದಕ್ಕೆ ಸಮರ್ಥನಲ್ಲ; ಆದಕಾರಣ ಶೃತಿಸ್ಮೃತಿಗಳಂ ತಿಳಿದ ಬ್ರಹ್ಮನಿಷ್ಠನೇ ಉಪದೇಶವಂ ಮಾಡುವದಕ್ಕೆ ಸಮರ್ಥನೆನಿಸುವನು. ಮತ್ತು ಪೂರ್ವದಲ್ಲಿ ಜ್ಞಾನಿಯಾದವನಿಗೆ ಅಜ್ಞಾನನಿವೃತ್ತಿಯಾಗಲು ಶರೀರದ ಸಂಬಂಧವು ತಪ್ಪಿಹೋದದೆಂದು ಯಾವ ಶಂಕೆ ಮಾಡಲ್ಪಟ್ಟಿದ್ದುದೊ ? ಅದು ಸರಿಯಲ್ಲ; ಯಾಕೆಂದರೆ ;—ಕಾರಣನಾಶವಾದರೂ ಕಾರ್ಯವು ಸ್ವಲ್ಪಕಾಲವಿರುವದುಂಟು, ಹ್ಯಾಗೆಂ ಹದಿ, ಹಗ್ಗವಿನ ಜ್ಞಾನದಿಂದ ಸರ್ಪದ ನಿವೃತ್ತಿಯಾದರೂ ಕಂಪಾದಿಗಳುಳಿವಂತೆ

ಅಜ್ಞಾನನಾಶವಾದರೂ ಪರಿಶೇಷವಾದ ಪ್ರಾರಬ್ಧಕರ್ಮದಿಂದ, ಶರೀರದ ಸ್ಥಿತಿ ಸಂಭವಿಸುವದು, ಇದರಿಂದ ಆಚಾರ್ಯಸಂಪ್ರದಾಯಕ್ಕೆ ಉಚ್ಛೇದವಾಗುವದಿಲ್ಲ. ಆದ್ದರಿಂದ ಸಂಪ್ರದಾಯ ಕ್ರಮಾನುಸಾರ ಆ ಜ್ಞಾನಿಯು ಶಿಷ್ಯರಂ ಕುರಿತು ಉಪದೇಶಿಸುವನು.

## ॥ ೨ ॥ ನೇ ಶಂಕೆಗೆ ಸಮಾಧಾನ:—

ದ್ವೈತದರ್ಶೀಯಿಂದ ಅದ್ವೈತಬೋಧೆ ಸಂಭವಿಸುವದಿಲ್ಲ; ಯಾಕೆಂದರೆ ;– ರೋಗಿಯಾದ ವೈದ್ಯನಂತೆ ತಾನೂ ದ್ವೈತವನ್ನೇ ನೋಡಿರುವದ್ದರಿಂದ ಅನ್ಯನಿಗೆ ಅದ್ವೈತವಸ್ತುವನ್ನೆಂತು ತೋರಿಸ್ಯಾನು? ಹ್ಯಾಗೆ ಯಾವನೋ ಒಬ್ಬ ಮನುಷ್ಯನ ನೇತ್ರದಲ್ಲಿ ಒಬ್ಬನಂ ನೋಡಿದರೆ ಇಬ್ಬರು ಕಾಣಿಸಿಕ್ಕೊಳ್ಳುವಂಥಾ ಒಂದು ಬಗೆ ರೋಗವಿದ್ದುದು. ಅವನು ರೋಗನಿವೃತ್ತಿಗೋಸುಗ ವೈದ್ಯನ ಬಳಿಗೆ ಹೋಗಲು ಆ ವೈದ್ಯನ ನೇತ್ರದಲ್ಲಿ ಒಬ್ಬನಂ ನೋಡಿದರೆ, ಮೂರು ಜನ ಕಾಣಿಸಿಕ್ಕೊಳ್ಳುವಂಥಾ ರೋಗವಿದ್ದುದು. ಆಗ ಆ ರೋಗಿಯು ಈ ವೈದ್ಯನ ರೋಗವು ತನ್ನ ರೋಗಕ್ಕಿಂತ ಅಧಿಕವಾಗಿದೆಯೆಂದು ತಿಳಿದು ಆ ವೈದ್ಯನಂ ಬಿಟ್ಟು ಮತ್ತೊಬ್ಬ ಅರೋಗಿಯಾದ ವೈದ್ಯನ ಬಳಿಗೆ ಹೋಗಿ ರೋಗವನ್ನು ನಿವೃತ್ತಿಸಿಕ್ಕೊಂಡನು. ಹಾಗೆ ರೋಗಿಯಾದ ವೈದ್ಯನಂತೆ ದ್ವೈತದರ್ಶೀಯಾದ ಗುರುವನ್ನುಪೇಕ್ಷಿಸಿ, ಅದ್ವೈತವಂ ತೋರಿಸುವ ಜ್ಞಾನಿಯಾದ ಗುರುವನ್ನೇ ಉಪಾಸಿಸಬೇಕು.

೧—ಮತ್ತು ಪೂರ್ವದಲ್ಲಿ ಪೇಳಿದ ಅದ್ವೈತದರ್ಶಿಯು ದ್ವೈತವಂ ನೋಡದಿರುವದ್ದರಿಂದ ಅವನಿಂದಲೂ ಉಪದೇಶ ಸಂಭವಿಸುವದಿಲ್ಲವೆಂದು ಯಾವ ಶಂಕೆ ಮಾಡಲ್ಪಟ್ಟಿದ್ದುದೊ, ಅದಕ್ಕೆ ಸಮಾಧಾನವೇನೆಂದರೆ;—ಒಬ್ಬಾನೊಬ್ಬ ಧನಿಕನಿಗೆ ಜ್ವರರೋಗ ನಿಮಿತ್ತದಿಂದ ಸನ್ನಿಪಾತವಾಗಿರಲು ಆಗಲವನು ತನ್ನ ಗುಪ್ತಧನವನ್ನೂ ಕೂಡ ಪೇಳಿಬಿಟ್ಟನು. ಆದರೆ ಅದನ್ನು ತಾನು [ನಾನು ಯಾರಿಗೆ ಗುಪ್ತಧನವನ್ನು ತೋರಿಸಿದೆ, ಎಂಬುದನ್ನು] ತಿಳಿಯನು. ಹಾಗೆ ಬ್ರಹ್ಮಾನಂದದಲ್ಲಿ ನಿಮಗ್ನನಾದ ಬ್ರಹ್ಮವಿತ್ತೆನಿಪ ಉತ್ತಮ ಮಹಾತ್ಮನು, ಸ್ವಭಾವಿಕ ತತ್ತ್ವವನ್ನುಚ್ಚರಿಸುವನು; ಅದರಿಂದ ಉತ್ತಮ ಜಿಜ್ಞಾಸುವು ಕೃತಾರ್ಥನಾಗುವನು. ಎಂತೆಂದರೆ;—ಸಿದ್ಧರುಗಳಿಂದ ಆತ್ಮಗೀತೆಯಂ ಕೇಳಿ ಜನಕರಾಯನು ಕೃತಾರ್ಥನಾದನು, ಈ ವಿಷಯ ವಾಸಿಷ್ಠದಲ್ಲಿ ಪ್ರಸಿದ್ಧವಾಗಿರುವದು, ಅಥವಾ ಅದರ

ಉಪಶಮ ಪ್ರಕರಣಂ. ೩ ನೇ ಸರ್ಗ:

ಕಂಗದಲ್ಲಿ ಅದ್ವೈತನಿಷ್ಠೆ ಇರುವನಿಗೆ ಶಾಸ್ತ್ರ, ಶಿಕ್ಷಾ, ಶಿಷ್ಯಾದಿ ಪ್ರತಿಭಾಸಮಾತ್ರವಾದ ದ್ವೈತದೃಷ್ಟಿಯಿಂದ ನಿಜವಾಗಿ ಯಾವ ಹಾನಿಯೂ ಆಗುವದಿಲ್ಲ; ಈ ಮಾತು ಗ್ರಂಥಾಂತರದೊಳ್ ಪೇಳಿರುವದು.

**ಶ್ಲೋ॥ ಕದಾಚಿದ್ವ್ಯವಹಾರೇತು ದ್ವೈತಂ ಯದ್ಯಪಿ ಪಶ್ಯತಿ ।**
**ಬೋಧಾತ್ಮವ್ಯತಿರೇಕೇಣ ನಪಶ್ಯತಿ ಚಿದನ್ವಯಾತ್ ॥**

ಇದರ ಅರ್ಥವೇನೆಂದರೆ;—ಯಾವಾಗಲಾದರೂ ವ್ಯವಹಾರದಲ್ಲಿ ಜ್ಞಾನಿಯು ಹ್ಯಾಗೂ ದ್ವೈತವಂ ನೋಡುವನು. ಹಾಗಾದರೂ ಜ್ಞಾನಸ್ವರೂಪನಾದ ಆತ್ಮನಿಗಿಂತ ವ್ಯತಿರೇಕವಾಗಿ ನೋಡುವದಿಲ್ಲ; ಯಾಕೆಂದರೆ;—ಸರ್ವವೂ ಚಿದನ್ವಯವಾಗಿರುವದ್ದರಿಂದ ಎಂಥರ್ಥವು.

೨—ಇನ್ನು ಅದ್ವೈತದರ್ಶಿಯಾದ ಜ್ಞಾನಿಯಿಂದಲೂ, ತತ್ತ್ವೋಪದೇಶವು ಅಶಕ್ಯವೆಂತಲೂ, ಬ್ರಹ್ಮವು ಅನಿರ್ದೇಶ್ಯವಾದ್ದರಿಂದ ವಾಣಿಗೆ ವಿಷಯವಲ್ಲವೆಂತಲೂ, ಹಿಂದೆ ಈ ಮೂರನೇ ಶಂಕೆ ಮಾಡಿದ್ದಕ್ಕೆ ಸಮಾಧಾನವೇನೆಂದರೆ;—

**॥ ೩ ॥ ನೇ ಶಂಕೆಗೆ ಸಮಾಧಾನ:—**

ಹ್ಯಾಗೂ ಸಾಕ್ಷಾದ್ವಾಣಿಗೆ ವಿಷಯವಾಗಿ ಬ್ರಹ್ಮವಿಲ್ಲವೂ ಇಲ್ಲ. ಅದನ್ನು ವಾಣಿಯಿಂದ ಉಪದೇಶಿಸುವದೂ ಅಶಕ್ಯವಾಗಿದೆ. ಹಾಗಾದರೂ "**ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೆ**" ಈ ನ್ಯಾಯವನ್ನಾಶ್ರೈಸಿ ಬ್ರಹ್ಮಜ್ಞಾನಿಯು ಉಪದೇಶವಂ ಮಾಡುವದಕ್ಕೆ ಶಕ್ಯನಾಗಿರುವನು. ವಸ್ತುವಿನಲ್ಲಿ ಅವಸ್ತುವಿನ ವರ್ಣನೆಗೆ ಅಧ್ಯಾರೋಪವೆನ್ನುವರು; ಮರಳಿ ಅವಸ್ತುವನ್ನು ವಸ್ತುಮಾತ್ರ ಸ್ವರೂಪವಾಗಿ ನೋಡುವದಕ್ಕೆ ಅಪವಾದವೆನ್ನುವರು. ಹ್ಯಾಗೆಂದರೆ;—ರಜ್ಜುವಿನಲ್ಲಿ ಸರ್ಪದ ಕಲ್ಪನೆ ಅಧ್ಯಾರೋಪವೆನಿಸುವದು. ಪುನಃ ಸರ್ಪವನ್ನು ರಜ್ಜುಸ್ವರೂಪವಾಗಿ ನೋಡುವದು ಅಪವಾದವೆನ್ನಲ್ಪಡುವದು. ಇದರಂತೆ ಬ್ರಹ್ಮದಲ್ಲಿ ಮಾಯೆಯಿಂದ ಆಕಾಶವು-ಅದರಿಂದ ವಾಯುವು-ಅದರಿಂದ ಅಗ್ನಿಯು-ಆ ಅಗ್ನಿಯಿಂದ ಜಲವು-ಅದರಿಂದ ಪೃಥ್ವಿಯೂ ಆಗಿ, ಬಳಿಕ ಈ ಪಂಚಭೂತಗಳಿಂದ ಇಂದ್ರಿಯ, ಪ್ರಾಣ, ಅಂತಃಕರಣ ರೂಪವಾದ ಭೌತಿಕವೂ ಮತ್ತು ಸ್ಥೂಲಬ್ರಹ್ಮಾಂಡವೂ ಇತ್ಯಾದಿ ಇಚ್ಛಾ ಮೊದಲುಗೊಂಡು ಪ್ರವೇಶಪರ್ಯಂತವಾದ ಈಶ್ವರ ಸೃಷ್ಟಿಯೂ, ಅಥವಾ ಜಾಗ್ರತ್ ಮೊದಲುಗೊಂಡು ಮೋಕ್ಷಪರ್ಯಂತವಾದ ಜೀವಸೃಷ್ಟಿಯೂ ಆ ಸರ್ವವೂ ಅಧ್ಯಾರೋಪವೆನಿಸಿ

ಕೊಳ್ಳುವದು. ಮತ್ತು "ನೇತಿನೇತಿ" ಎಂಬ ವಾಕ್ಯಗಳಿಂದ ಸರ್ವಮಾಯವನ್ನೂ, ಮಾಯಾಕಾರ್ಯವನ್ನೂ ಸಹ ಅಧಿಷ್ಠಾನ ಬ್ರಹ್ಮದಲ್ಲಿ ನಿಷೇಧಪಡಿಸಿ ಆ ನಿಷೇಧಾವಧಿಯಂ ನೋಡುವದಾವುದೋ, ಅದು ಅಪವಾದವೆನ್ನಲ್ಪಡುವದು. ಈ ರೀತಿಯಾಗಿ ಅಧ್ಯಾರೋಪ ಅಪವಾದಗಳಿಂದ ನಿಷ್ಪ್ರಪಂಚವಂ ಪ್ರಪಂಚಿಸಿರುವರು. ಹೀಗೆ ಆಚಾರ್ಯರು ಮುಮುಕ್ಷುಗಳ ಬೋಧೆಯ ನಿಮಿತ್ತವಾಗಿ, ಉಪದೇಶಕ್ರಮವಂ ಕಲ್ಪಿಸಿರುವರು; ಆದಕಾರಣ ಜ್ಞಾನಿಯಾದ ಗುರುವಿನಿಂದ ಜಿಜ್ಞಾಸುವಿಗೆ ತತ್ವಜ್ಞಾನವಾಗುವದು.

ಶಂಕಾ ;—ಬ್ರಹ್ಮತತ್ವವು ಅತಿ ಗೋಪ್ಯವಾದದ್ದು, ಅದನ್ನು ಯಾರೊಬ್ಬರ ಎದುರಿಗೂ, ಪೇಳತಕ್ಕದ್ದಲ್ಲ; ಅಂಥಾದ್ದನ್ನು ವಿದ್ವಾನ್ ಜಿಜ್ಞಾಸುವಂ ಕುರಿತು ಹ್ಯಾಗೆ ಹೇಳ್ಯಾನು?

ಸಮಾಧಾನ:—ಬ್ರಹ್ಮಜ್ಞಾನವು ಅತಿ ಗುಹ್ಯವಾದದ್ದು; ಅದು ಎಲ್ಲೆಲ್ಲೂ ಪೇಳುವದು ಯೋಗ್ಯವಲ್ಲ; ಮತ್ತು "ನಾಪುತ್ರಾಯಾಶಿಷ್ಯಾಯ ವೈ ಪುನಃ" ಈ ಶೃತಿಯಾದರೂ ಅಪುತ್ರನಿಗೂ ಮತ್ತು ಅಶಿಷ್ಯನಿಗೂ ತತ್ವೋಪದೇಶವಂ ನಿಷೇಧಿಸಿರುವದು. ಆದಾಗ್ಯೂ "ಸ್ನಿಗ್ಧಶಿಷ್ಯಾಯ ಶಮಾನ್ವಿತಾಯ ಗೋಪ್ಯಮಪಿ ಬ್ರೂಯಾತ್" ಈ ಪ್ರಕಾರದಿಂ ಸ್ನೇಹವುಳ್ಳ ಶಿಷ್ಯನಿಗೂ, ಮತ್ತು ಶಮಾವಂತನಿಗೂ ವಿದ್ವಾನ್ ಗೋಪ್ಯತತ್ವವಾದರೂ ಪೇಳಬೇಕೆಂಡು ವಿಧಾನಗೈದಿರುವದು. ಆದ್ದರಿಂದ ಜ್ಞಾನಿಯು ಜಿಜ್ಞಾಸುವಂ ಕುರಿತು ಉಪದೇಶಿಸತಕ್ಕದ್ದು ಉಚಿತವಾಗಿದೆ.

ಒಳಿಕ ಗುರುಭಕ್ತಿಯುಳ್ಳ ಶಿಷ್ಯನು ಸಮಿತ್ಪಾಣಿಯಾಗಿ ಬ್ರಹ್ಮನಿಷ್ಠನಾದ ಗುರುವಂ ಶರಣುಹೊಂದಿ, ಅವನ ಪಾದಪದ್ಮದೊಳ್ ಶಿರದಿಂ ನಮಿಸಿ, ವಿನಯ ಸಹಿತನಾಗಿ ಅಭಿಮತವಾದ ಇಂಥಾ ಪ್ರಶ್ನೆಯಂ ಮಾಡಬೇಕು;

## ॥ ೧೧ ॥ ಗುರುಸನ್ನಿಧಿಯಲ್ಲಿ ಶಿಷ್ಯನು ಮಾಡುವ ಪ್ರಶ್ನೆಗಳು:—

ಎಲೈ ಭಗವಂತನೆ! ನಾನು ಯಾರು? (೧). ಮತ್ತು ಈ ಸಂಸಾರ ಬಂಧವು ತೋರುತ್ತಿದೆ; ಇದಕ್ಕೆ ಕಾರಣವಾವುದು? (೨). ಇನ್ನು ಈ ಸಂಸಾರ ಬಂಧದ ನಿವೃತ್ತಿಯು ಯಾವ ಉಪಾಯದಿಂದಾಗುವದು? (೩). ಹೀಗೆ ಶಿಷ್ಯನು ಮಾಡಿದ ಮೂರು ಪ್ರಶ್ನೆಗಳನ್ನು ಕೇಳಿ ಮೊದಲನೇ ಪ್ರಶ್ನೆಗೆ ಉತ್ತರವಂ ಪೇಳುತ್ತಾರೆ;—

ಪ್ರಥಮ ಪ್ರಶ್ನೆಗೆ, ಉತ್ತರ:—ಎಲೈ, ಪ್ರಿಯದರ್ಶನ! ಯಾವದು ಮೂರುದೇಹಗಳಿಗೂ ದ್ರಷ್ಟೃವಾಗಿ, ಅವಸ್ಥಾತ್ರಯ ಸಾಕ್ಷಿಯಾಗಿ, ಪಂಚ ಕೋಶಾತೀತವಾಗಿ, ಮತ್ತು ಸಚ್ಚಿದಾನಂದ ಸ್ವರೂಪವಾದ ಪ್ರತ್ಯಗಾತ್ಮಾ ಬ್ರಹ್ಮಾಭಿನ್ನವಾಗಿರುವದೋ ಅದೇ ನಿನ್ನ ಸ್ವರೂಪವು. ಹೀಗೆ ಪೇಳಿದ್ದರಿಂದ ದೇಹಾದಿಗಳಿಂ ಭಿನ್ನವೆನಿಪ ಬ್ರಹ್ಮಾಭಿನ್ನತತ್ವವನ್ನು ಗುರುವು ಉಪದೇಶಿಸಿದರು. ಇದು ಸರ್ವ ವೇದಾಂತಸಾರವು. ಇದಂ ವಿಚಾರಿಸುವದ್ದರಿಂದ ಬ್ರಹ್ಮಾತ್ಮರ ಏಕತ್ವ ನಿಶ್ಚಯಲಕ್ಷಣವೆಂಬ ಜ್ಞಾನೋದಯವಾಗಿ, ಸದ್ಯಃ ಹೃದಯಗ್ರಂಥಿಯ ಭೇದನವಾಗುವದು. ಈ ಮಾತು ಶೃತಿಯಲ್ಲಿಯೂ

ಮುಂ. ಉ. ಶೃ:—ಭಿದ್ಯತೇ ಹೃದಯಗ್ರಂಥಿ ಶ್ಛಿದ್ಯಂತೇ ಸರ್ವಸಂಶಯಾಃ ।
೨-೨-೮ ಕ್ಷೀಯಂತೇ ಚಾಸ್ಯಕರ್ಮಾಣಿ ತಸ್ಮಿನ್ದೃಷ್ಟೇಪರಾವರೇ ॥

ಎಂದು ಪೇಳಿರುವದು. ಇದಕ್ಕೆ ಪರಬ್ರಹ್ಮ ಸಾಕ್ಷಾತ್ಕಾರವಾಗಲು ಹೃದಯ ಗ್ರಂಥಿಯ ಭೇದನವಾಗುವದು. ಮತ್ತು ಸರ್ವ ಸಂಶಯಗಳು ಛೇದಿಸಲ್ಪಡುವವು, ಇನ್ನು ಈ ಜ್ಞಾನಿಯ ಕರ್ಮವೆಲ್ಲವು ಕ್ಷೀಣವಾಗುವದು ಎಂದರ್ಥ.

## ॥ ೧೨ ॥ ಶರೀರತ್ರಯವಿಚಾರ.

### ಆತ್ಮಾ ಸ್ಥೂಲದೇಹದಿಂ ಭಿನ್ನ :—[೧]

(೧) ಪ್ರಶ್ನೆ—ಮೂರು ಶರೀರಗಳ್ಯಾವವು ?

ಉತ್ತರ—ಸ್ಥೂಲ-ಸೂಕ್ಷ್ಮ-ಕಾರಣವೆಂಬವೆ ಮೂರು ಶರೀರಗಳು.

(೨) ಪ್ರಶ್ನೆ—ಸ್ಥೂಲಶರೀರವೆಂದರೆ ಯಾವದು ?

ಉತ್ತರ—ಪಂಚೀಕೃತ ಭೂತಗಳ ಕಾರ್ಯವಾಗಿಯೂ, ಕರ್ಮ ರಚಿತವಾಗಿಯೂ, ಭೋಗಗಳ ಸ್ಥಾನವಾಗಿಯೂ, ಇಂದ್ರಿಯಗೋಚರವಾಗಿಯೂ ಇರುವದಾವುದೋ, ಅದನ್ನು ಸ್ಥೂಲಶರೀರವೆನ್ನುವರು. ಯಾವ ಭೂತಗಳು ಪಂಚೀಕರಣ ಮಾಡಲ್ಪಡುವವೋ ಅವು ಪಂಚೀಕೃತ ಭೂತವೆನ್ನಲ್ಪಡುವವು.

(೩) ಪ್ರ—ಪಂಚಮಹಾಭೂತಗಳ್ಯಾವವು ?

ಉ—(೧) ಆಕಾಶ, (೨) ವಾಯು, (೩) ಅಗ್ನಿ, (೪) ಜಲ, (೫) ಪೃಥ್ವಿ, ಇವೇ ಪಂಚಮಹಾಭೂತಗಳು.

(೪) ಪ್ರ—ಇವುಗಳ ಪಂಚೀಕರಣವೆಂತಾಗಿರುವವು ?

ಉ—ಪ್ರತ್ಯೇಕ ಭೂತಗಳ ಪಂಚಪಂಚ ಭಾಗಗಳಿಂದ ಪರಸ್ಪರ ಮಿಶ್ರವಾಗುವದಕ್ಕೆ ಪಂಚೀಕರಣವೆಂದು ಹೆಸರು. ಆ ಪಂಚೀಕರಣದ ರೀತಿ ಎಂತೆಂದರೆ;—ಒಂದೊಂದು ಭೂತವು ಸಮಾನವಾಗಿ, ಎರಡೆರಡು ಭಾಗವಾಗಲು ಒಂದೊಂದು ಭಾಗ ತನ್ನಂ ಬಿಟ್ಟು, ಎರಡನೇ ಭಾಗವು ಪುನಃ ನಾಲ್ಕುನಾಲ್ಕು ಭಾಗವಾಗಿ ತನ್ನಿಂದನ್ಯವಾದ ನಾಲ್ಕು ಭೂತಗಳೊಡನೆ, ದೆರೆಯಲು ಪಂಚೀಕರಣವೆನಿಸಿಕೊಂಡಿತು. ಈ ಪರಿಯಾಗಿ ಪಂಚೀಕರಿಸಲ್ಪಟ್ಟ ಭೂತಗಳಿಂದ ಸ್ಥೂಲಶರೀರವಾದುದು. ಆ ಸ್ಥೂಲಶರೀರವು ಇಪ್ಪತ್ತೈದು ತತ್ವಗಳುಳ್ಳದ್ದಾಗಿರುವದು.

(೫) ಪ್ರ—ಆ ಇಪ್ಪತ್ತೈದು ತತ್ವಗಳ್ಯಾವವು ?

ಉ—ಐದು ಭೂತಗಳದೂ ಐದೈದು ತತ್ವಗಳು ಸೇರಿ ಇಪ್ಪತ್ತೈದಾಗಿರುವವು. ಅವುಗಳಲ್ಲಿ ಆಕಾಶದ ಐದು ತತ್ವಗಳು ಯಾವವೆಂದರೆ ;—

**ಶ್ಲೋ—ಕಾಮಃಕ್ರೋಧಸ್ತಥಾ ಲೋಭೋ ಮೋಹಮಾತ್ಸರ್ಯ ಮೇವಚ ‖ ವಿಯತ್ಪಂಚಮಿದಂ ಜ್ಞೇಯಂ ದ್ರಷ್ಟವ್ಯಂ ದೇಹಮಧ್ಯತಃ ‖**

ಈ ಗ್ರಂಥಾಂತರ ವಾಕ್ಯದಿಂದ ಕಾಮ (೧), ಕ್ರೋಧ (೨), ಲೋಭ (೩), ಮೋಹ (೪), ಮಾತ್ಸರ್ಯ (೫), ಈ ಪಂಚತತ್ವಗಳು ದೇಹದಲ್ಲಿ ಆಕಾಶದ್ದೆಂದು ತಿಳಿಯಬೇಕು. ಅದನ್ನು ಪ್ರತ್ಯಕ್ಷವಾಗಿ ತೋರಿಸುತ್ತಾರೆ. ಮಾತ್ಸರ್ಯಸ್ಥಾನದಲ್ಲಿ ಎಲ್ಲೋ ಒಂದು ಕಡೆ ಭಯವನ್ನೂ ಹೇಳಿರುವರು. ಹ್ಯಾಗೂ ಕಾಮಾದಿಗಳು ಅಂತಃಕರಣದ ಪರಿಣಾಮವಾಗಿದ್ದರೂ, ಅದನ್ನು ಸ್ಥೂಲದೇಹದಲ್ಲಿ ಹೇಳುವದು ಅಸಂಭವವಾದರೂ ಸ್ಥೂಲದೇಹದಲ್ಲಿ ಅವುಗಳ ಆವೇಶವಿರುವದ್ದರಿಂದ ಸ್ಥೂಲದಲ್ಲಿ ಹೇಳಲ್ಪಟ್ಟಿರುವದು. ಅಥವಾ, ಕಟಿಯಲ್ಲಿ, ಉದರದಲ್ಲಿ, ಹೃದಯದಲ್ಲಿ, ಕಂಠದಲ್ಲಿ, ಶಿರದಲ್ಲಿ ಇರುವ ಆಕಾಶವನ್ನು ಸ್ಥಾನಭೇದದಿಂದ ಪಂಚವಿಧ ಆಕಾಶವೆಂದು ಗ್ರಂಥಾಂತರದಲ್ಲಿ ಹೇಳಿರುವದು. ಇನ್ನು—ಚಲನ (೧), ವಲನ (೨), ಧಾವನ (೩), ಪ್ರಸಾರಣ (೪), ಸಂಕೋಚ (೫). ಇವೈದು ತತ್ವಗಳು ವಾಯುವಿನದೆಂದು ತಿಳಿಯತಕ್ಕದ್ದು. ಮತ್ತೆ ಕ್ಷುಧೆ (೧), ತೃಷೆ (೨), ಆಲಸ್ಯ (೩), ನಿದ್ರೆ (೪), ಕಾಂತಿ (೫). ಇವೈದು ತತ್ವಗಳು ತೇಜದ್ದಾಗಿರುವವು. ಬಳಿಕ ಶುಕ್ರ (೧), ಶೋಣಿತ (೨), ಲಾಲ (೩), ಮೂತ್ರ (೪), ಸ್ವೇದ (೫). ಇವೈದು ತತ್ವಗಳು ಜಲದ್ದಾಗಿ

ರುವವು. ಇನ್ನು ಅಸ್ಥಿ (೧), ಮಾಂಸ (೨), ಚರ್ಮ (೩), ನಾಡಿ (೪), ರೋಮ (೫). ಇವೈದು ತತ್ವಗಳು ಪೃಥ್ವಿಯದಾಗಿರುವವು. ಇವೇ ಪಂಚ ಭೂತಗಳ ಇಪ್ಪತ್ತೈದು ತತ್ವಗಳೆನಿಸುವವು. ಅವುಗಳಲ್ಲಿ—

## ॥ ೧ ॥ ಆಕಾಶದತತ್ವಗಳು, ಅವುಗಳ ಸಂಬಂಧಗಳು.

(೧) ಲೋಭ—ಆಕಾಶದ ಮುಖ್ಯಭಾಗ, ಶೂನ್ಯ ಉದರವಾದ್ದರಿಂದ,
(೨) ಕಾಮ—ವಾಯುವಿನ ಸಂಬಂಧ, ವೇಗವುಳ್ಳದ್ದಾದ್ದರಿಂದ,
(೩) ಕ್ರೋಧ—ಅಗ್ನಿಯಸಂಬಂಧ, ದಾಹಕವಾದ್ದರಿಂದ,
(೪) ಮೋಹ—ಜಲದಸಂಬಂಧ, ದ್ರವಿತಚಿತ್ತವಾದ್ದರಿಂದ,
(೫) ಭಯ—ಪೃಥ್ವಿಯಸಂಬಂಧ, ಪಾರ್ಥಿವಪದಾರ್ಥದಿಂದಲೇ ಭಯವಾಗುತ್ತಿರುವದು.

## ॥ ಅ ಥ ವಾ ॥

೧—ಶಿರಾವಕಾಶ—ಮುಖ್ಯ ಆಕಾಶವು, ಅನಾಹತಶಬ್ದಕ್ಕೆ ಸ್ಥಾನವಾಗಿರುವದ್ದರಿಂದ,
೨—ಕಂಠಾವಕಾಶ—ವಾಯುವಿನ ಸಂಬಂಧ, ಮುಖನಾಸಿಕದಲ್ಲಿ ಸಂಚರಿಸುತ್ತಿರುವವದ್ದರಿಂದ.
೩—ಹೃದಯಾವಕಾಶ—ಅಗ್ನಿಯಸಂಬಂಧ, ಸದಾ ಉಷ್ಣಸ್ಥಿತಿಯಾಗಿರುವದ್ದರಿಂದ.
೪—ಉದರಾವಕಾಶ—ಜಲದಸಂಬಂಧ, ಕುಡಿದ ನೀರಿಗೆ ಆಶ್ರಯವಾಗಿರುವದ್ದರಿಂದ.
೫—ಕಟಿ ಅವಕಾಶ—ಪೃಥ್ವಿಯಸಂಬಂಧ, ಗಂಧಸ್ಥಾನವಾಗಿರುವದ್ದರಿಂದ.

## ॥ ೨ ॥ ವಾಯುವಿನ ತತ್ವಗಳು, ಅವುಗಳ ಸಂಬಂಧಗಳು.

—: ವಾಯುವಿನಲ್ಲಿ :—

(೬) ಧಾವನ—ಮುಖ್ಯಭಾಗ, ಸಬಲವಾದ್ದರಿಂದ.
(೭) ಪ್ರಸಾರಣ—ಆಕಾಶದ ಸಂಬಂಧ, ವಿಸ್ತೀರ್ಣವಾದ್ದರಿಂದ.
(೮) ವಲನ—ತೇಜದ ಸಂಬಂಧ ಉತ್ಕೃಷ್ಟ ವ್ಯಾಪಾರವುಳ್ಳದ್ದಾದ್ದರಿಂದ.
(೯) ಚಲನ—ಜಲದಸಂಬಂಧ, ಶಿಥಿಲವಾದ್ದರಿಂದ.
(೧೦) ಸಂಕೋಚ—ಪೃಥ್ವಿಯಸಂಬಂಧ, ಜಾಡ್ಯಸ್ವಭಾವವಾದ್ದರಿಂದ.

## ॥ ೩ ॥ ಅಗ್ನಿಯತತ್ವಗಳು, ಅವುಗಳ ಸಂಬಂಧಗಳು.

—: ತೇಜದಲ್ಲಿ :—

(೧೧) ಕ್ಷುಧಾ—ಮುಖ್ಯಭಾಗ, ಪಚನಸ್ವಭಾವವಾದ್ದರಿಂದ.

(೧೨) ನಿದ್ರಾ—ಆಕಾಶದಸಂಬಂಧ ಶೂನ್ಯಸ್ವಭಾವವಾದ್ದರಿಂದ.

(೧೩) ತೃಷಾ—ವಾಯುವಿನ ಸಂಬಂಧ, ಕಂಠಾದಿಗಳನ್ನು ಶೋಷಣೆಗೈಯ್ಯುವದ್ದರಿಂದ.

(೧೪) ಕಾಂತಿ—ಜಲದಸಂಬಂಧ, ಶೀತೋಷ್ಣಸಂಬಂಧದಿಂ ಕೃಷ್ಣಲೋಹಿತತ್ವವಾದ್ದರಿಂದ,

(೧೫) ಆಲಸ್ಯ—ಪೃಥ್ವಿಯಸಂಬಂಧ, ಜಾಡ್ಯತ್ವವಾದ್ದರಿಂದ.

## ॥ ೪ ॥ ಜಲದತತ್ವಗಳು, ಅವುಗಳ ಸಂಬಂಧಗಳು.

—: ಜಲದಲ್ಲಿ :—

(೧೬) ಶುಕ್ರ—ಮುಖ್ಯಭಾಗ, ಗರ್ಭೋತ್ಪತ್ತಿಗೆ ಹೇತುವಾಗಿಯೂ, ಶುಭ್ರವರ್ಣ ಉಳ್ಳದ್ದಾಗಿಯೂ ಇರುವದ್ದರಿಂದ.

(೧೭) ಲಾಲ—ಆಕಾಶದ ಸಂಬಂಧ, ಊರ್ಧ್ವಗಮನವಾದ್ದರಿಂದ.

(೧೮) ಸ್ವೇದ—ವಾಯುವಿನಸಂಬಂಧ, ಶ್ರಮಪ್ರಸಂಗತ್ವವಾದ್ದರಿಂದ.

(೧೯) ಮೂತ್ರ—ತೇಜದಸಂಬಂಧ. ಉಷ್ಣವಾಗಿರುವದ್ದರಿಂದ.

(೨೦) ಶೋಣಿತ—ಪೃಥ್ವಿಯ ಸಂಬಂಧ, ರಕ್ತವರ್ಣವುಳ್ಳದ್ದಾದ್ದರಿಂದ.

## ॥ ೫ ॥ ಪೃಥ್ವಿಯತತ್ವಗಳು, ಅವುಗಳ ಸಂಬಂಧಗಳು.

—: ಪೃಥ್ವಿಯಲ್ಲಿ :—

(೨೧) ಅಸ್ಥಿ—ಮುಖ್ಯಭಾಗ, ಕಾಠಿನ್ಯವಾಗಿರುವದ್ದರಿಂದ.

(೨೨) ರೋಮ—ಆಕಾಶದ ಸಂಬಂಧ. ಛೇದನದಲ್ಲಿ ದುಃಖತೋರದ್ದರಿಂದ.

(೨೩) ತ್ವಕ್—ವಾಯುವಿನ ಸಂಬಂಧ, ಸ್ಪರ್ಶಧರ್ಮತ್ವವುಳ್ಳದ್ದಾದ್ದರಿಂದ.

(೨೪) ನಾಡೀ—ತೇಜದಸಂಬಂಧ, ಜ್ವರದಲ್ಲಿ ಪರೀಕ್ಷಿಸಲ್ಪಡುವದ್ದರಿಂದ,

(೨೫) ಮಾಂಸ—ಜಲದ ಸಂಬಂಧ, ಸದ್ರವತ್ವವಾದ್ದರಿಂದ.

ಈ ರೀತಿಯಲ್ಲಿ ಪಂಚವಿಂಶತಿ (೨೫) ತತ್ವಗಳು ಮಿಶ್ರವಾಗಿರುವವು.

ಆದಕಾರಣ ಈ ಸ್ಥೂಲದೇಹದಲ್ಲಿ :—

॥ ೧ ॥ ಯಾವದು ಕಾಠಿನ್ಯವೋ, ಅದು—ಪೃಥ್ವಿ.

॥ ೨ ॥ ಯಾವದು ದ್ರವತ್ವವೋ, ಅದು—ಜಲ.

|| ೩ || ಯಾವದು ಉಷ್ಣತ್ವವೋ, ಅದು—ತೇಜ.

|| ೪ || ಯಾವದು ಸಂಚರಿಸುವದೋ, ಅದು—ವಾಯುವು.

|| ೫ || ಯಾವದು ಸುಷಿರತ್ವವೋ, ಅದು—ಆಕಾಶವಾಗಿರುವದು.

ಹೀಗೆ ಪೇಳಿದ ಪಂಚೀಕೃತಭೂತಗಳ ಕಾರ್ಯವೆನಿಪ ಈ ಸ್ಥೂಲ ಶರೀರವು ನೀನಲ್ಲ; ಯಾಕೆಂದರೆ; ಇದು ಜಡವಾಗಿ, ದೃಶ್ಯವಾಗಿ, ವಿಕಾರಿಯಾಗಿರುವದ್ದರಿಂದ, ಅನಾತ್ಮರೂಪವಾಗಿದೆ. ನೀನು ಚೇತನನಾಗಿ, ದೃಷ್ಟನಾಗಿ, ನಿರ್ವಿಕಾರನಾಗಿರುವದ್ದರಿಂದ ಆತ್ಮನಾಗಿದ್ದೀಯೆ; ಆದಕಾರಣ ಸ್ಥೂಲದೇಹದಿಂ ಭಿನ್ನನಾಗಿದ್ದೀಯೆ.

ಮತ್ತು ಈ ದೇಹವು ಸಪ್ತಧಾತುಮಯವಾಗಿಯೂ, ಷಡ್ಭಾವವಿಕಾರದಿಂದೊಡಗೂಡಿದ್ದಾಗಿಯೂ, ದಶದೋಷಗಳಿಂ ದುಷ್ಟವಾಗಿಯೂ, ಇನ್ನು ಅತಿಶಯವಾಗಿ ನಿಂದಿಸಿಕೊಳ್ಳತಕ್ಕದ್ದಾಗಿಯೂ, ಇದೆ. ಈ ಕಾರಣದಿಂದಿದನ್ನು ಯಾವ ಕಾಲದಲ್ಲೂ ಅಭಿಮಾನಿಸುವದಕ್ಕೆ ಯೋಗ್ಯವಲ್ಲ;—

(೬) ಪ್ರ—ಸಪ್ತಧಾತುಗಳ್ಯಾವವು ?

ಉ—(೧) ರೇತ, (೨) ರಕ್ತ, (೩) ಮಾಂಸ, (೪) ಮಜ್ಜಾ, (೫) ಮೇದ, (೬) ಅಸ್ಥಿ, (೭) ಚರ್ಮ, ಇವೇ ಸಪ್ತಧಾತುಗಳು.

(೭) ಪ್ರ—ಷಡ್ವಿಕಾರಗಳ್ಯಾವವು ?

ಉ—(೧) ಜಾಯತೆ, (೨) ಅಸ್ತಿ, (೩) ವರ್ಧತೆ, (೪) ವಿಪರಿಣಮತೆ, (೫) ಅಪಕ್ಷೀಯತೆ, (೬) ವಿನಶ್ಯತಿ, ಇವು ಆರು. ಅವುಗಳ್ಲಿ—

|| ೧ || ಜಾಯತೆಯ ಪೆಸರು, + ಜನ್ಮಿಸುವದು.

|| ೨ || ಅಸ್ತಿಯ ಪೆಸರು, + ಪ್ರಕಟವಾಗುವದು. [ಉಂಟೆನಿಸುವದು]

|| ೩ || ವರ್ಧತೆಯ ಪೆಸರು, + ವೃದ್ಧಿಯಂ ಪೊಂದುವದು.

|| ೪ || ವಿಪರಿಣಮತೆಯ ಪೆಸರು, + ಪರಿಣಾಮವಂ ಪಡೆಯುವದು.

|| ೫ || ಅಪಕ್ಷೀಯತೆಯ ಪೆಸರು, + ಕ್ಷೀಣತ್ವವಂ ಪೊಂದುವದು.

|| ೬ || ವಿನಶ್ಯತಿಯ ಪೆಸರು + ಇಲ್ಲವಾಗುವದು, [ನಾಶವಂ ಪಡಿಯುವದು].

ಮತ್ತು (೧) ವೃದ್ಧಿಯಿಂ ಬಾಲ್ಯಾವಸ್ಥೆಯೂ, (೨) ಪರಿಣಾಮದಿಂದ ಯೌವನಾವಸ್ಥೆಯೂ, (೩) ಅಪಕ್ಷಯದಿಂದ ವೃದ್ಧಾವಸ್ಥೆಯೂ, (೪) ವಿನಾಶದಿಂ ಮರಣವೆಂದು ತಿಳಿಯತಕ್ಕದ್ದು. ಈ ಷಡ್ಭಾವ ವಿಕಾರವು ಯಾಸ್ಕ

ರೋಕ್ತ ಸ್ಥೂಲದೇಹದ್ದಾಗಿರುವದು. ಆತ್ಮನದಲ್ಲ ಯಾಕೆಂದರೆ;—"ನಜಾಯತೇ ವ್ರಿಯತೇ ವ್ವಾ ವಿಪಶ್ಚಿತ್" ಈ ಮಂತ್ರದಲ್ಲೂ, ಅಥವಾ ಈ ಮಂತ್ರವನ್ನೇ ಪೇಳುವ ಗೀತಾವಾಕ್ಯದಲ್ಲೂ, ಆತ್ಮನು ಷಡ್ವಿಕಾರದಿಂ ರಹಿತನೆಂದು ಪೇಳಿರುವದು. ಮತ್ತು 'ಘಟದ ಉತ್ಪತ್ತಿ ನಾಶಾದಿಗಳಿಂದ ಘಟಾಕಾಶಕ್ಕೆ ಉತ್ಪತ್ತಿಯಾಗಲೀ, ಅಥವಾ ನಾಶವಾಗಲೀ ಆಗುವದಿಲ್ಲ; ಈ ಯುಕ್ತಿಯಿಂದ ಆತ್ಮನು ಜನ್ಮಾದಿ ವಿಕಾರದಿಂ ರಹಿತನೆನಿಸುವನು.

(೮) ಪ್ರ—ಹತ್ತು ದೋಷಗಳ್ಯಾವವು?

ಉ—(೧) ಅಶುದ್ಧ, (೨) ಅಶೌಚ, (೩) ದುರ್ಗಂಧ, (೪) ಅಸ್ಥಿರ, (೫) ಸ್ಥೂಲ, (೬) ಖಂಡ, (೭) ದಗ್ಧ, (೮) ಶಿಥಿಲ, (೯) ನಾನಾ ರೋಗಗ್ರಸ್ತ ಅಧೃವ, (೧೦) ಆಮಿಷ, ಇವೇ ಹತ್ತು ದೋಷಗಳು. ಇವುಗಳಿಂದೊಡಗೂಡಿ ಸ್ಥೂಲದೇಹವಿರುವದು. ಅದನ್ನು ಅನ್ಯಶಾಸ್ತ್ರದಲ್ಲಿಯೂ ಪ್ರಸಿದ್ಧವ್ವಾಗಿ ಪೇಳಿರುವದು. ಆದ್ದರಿಂದ ಅನೇಕ ದುರ್ಗುಣಗಳಿಗೆ ಆಲಯವಾಗಿರುವ ಸ್ಥೂಲದೇಹವು ನೀನಲ್ಲ.

(೯) ಪ್ರ—ಎಲೈ ಸ್ವಾಮಿಯೆ! ಕೆಲವರು ದೇಹವನ್ನೇ ಆತ್ಮನೆಂದು ಗ್ರಹಿಸಿರುವರು, ಮತ್ತು ಅದಕ್ಕೆ ಯುಕ್ತಿಪ್ರಮಾಣಗಳನ್ನೂ ಪೇಳಿರುವರು. ಅವರುಗಳ ಅಭಿಪ್ರಾಯವೇನು?

ಉ—ಎಲೈ ಶಿಷ್ಯನೆ! ದೇಹವನ್ನಾವನು ಆತ್ಮನೆಂದು ಗ ಹಿಸಿರುವನೋ, ಅವನು ಮಹಾ ಮೂಢನಾದ ಅಜ್ಞಾನಿಯಾಗಿರುವನು. ಯಾಕೆಂದರೆ;—(೧) ಆತ್ಮನು ಸದಾ ಜ್ಞಾನಮಯನಾಗಿ, ಪುಣ್ಯರೂಪನಾಗಿರುವನು. (೨) ದೇಹವು ಮಾಂಸಮಯವಾಗಿ, ಅಶುಚಿಯಾಗಿರುವದು. ಅವೆರಡನ್ನು ಏಕೀಕರಿಸಿ ನೋಡುತ್ತಿರುವನು. ಆದ್ದರಿಂದ ಇದಕ್ಕಿಂತ ಬೇರೆಯಾದ ಅಜ್ಞಾನವು ಇನ್ನಾವುದಿರುವುದು? [ಇದೆ ಪರಮ ಅಜ್ಞಾನವು] ಹೀಗೆ ಗ್ರಂಥಾಂತರದಲ್ಲಿ ಪ್ರಸಿದ್ಧಿಪಡಿಸಿರುವದು.

೧—ಮತ್ತು ವಿರೋಚನ ಮತವನ್ನನುಸರಿಸಿದವರು, ಇನ್ನು ಮಾಧ್ಯಮಿಕ, ಚಾರ್ವಾಕ, ಲೋಕಾಯತ, ಪಾಮರರುಗಳು, ದೇಹವನ್ನೇ ಆತ್ಮನೆಂದೆಣಿಸಿರುವರು. ಇಷ್ಟೇ ಅಲ್ಲ; ಸ್ವಕಪೋಲಕಲ್ಪಿತವಾದ ಯುಕ್ತಿಗಳನ್ನೂ ಪೇಳಿರುವರು. ಆದಾಗ್ಯೂ ಆ ಸರ್ವವೂ ವೇದವಿಮುಖವಾಗಿಯೂ, ವಿವೇಕದಿಂ ಶೂನ್ಯವಾಗಿಯೂ, ಇರುವವು. ಎಂತೆಂದರೆ;—ಶೃತಿ ಸ್ಮೃತಿ ಶಾಸ್ತ್ರಗಳೆಲ್ಲ ಆತ್ಮನು

ದೇಹದಿಂ ಭಿನ್ನನೆಂತಲೇ ಪ್ರತಿಪಾದನೆ ಮಾಡಿರುವವು (೧). ಮತ್ತು ಪರಲೋಕವಾದಿಗೂ ಕೂಡ, ದೇಹವೇ ಆತ್ಮನೆಂಬುದು ಇಷ್ಟವಿಲ್ಲ; ಅದನ್ನು ಅನ್ಯಶಾಸ್ತ್ರದಲ್ಲಿಯೂ ಪೇಳಿರುವದು (೨). ಕರ್ಮಕಾಂಡದಲ್ಲಿಯೂ ಆತ್ಮನು ದೇಹದಿಂ ವಿಲಕ್ಷಣನೆಂದು ಪೇಳಿರುವದು. ಯಾವ ಕಾರಣದಿಂದ ದೇಹಪಾತವಾದನಂತರ ಇಲ್ಲಿ ಮಾಡಿದ ಕರ್ಮದ ಫಲವಂ ಭೋಗಿಸುವನೋ, ಇದರಿಂದ ಆತ್ಮನು ನಿತ್ಯನೆಂದು (೩). ಮತ್ತು ದೇಹನಾಶದಿಂದ ಆತ್ಮನಿಗೆ ನಾಶವಾಗುವದಿಲ್ಲ; ಅದನ್ನು "**ನಜೀವೋಮ್ರಿಯತೇ ಅವಿನಾಶೀ ವಾ ಅರೇಯಮಾತ್ಮಾ ನಹನ್ಯತೇ ಹನ್ಯಮಾನೇ ಶರೀರೇ**" ಇತ್ಯಾದಿ ಶ್ರುತಿಸ್ಮೃತಿ ವಚನಗಳಲ್ಲಿ ಆತ್ಮನಿ ನಾಶವಿಲ್ಲವೆಂದು ಪೇಳಿರುವವು (೪). ಇನ್ನು ದೇಹದ ನಾಶದಿಂದ ಆತ್ಮನಿಗೆ ನಾಶವಂ ಗ್ರಹಿಸಿದರೆ, ಕೃತಹಾನಿ, ಅಕೃತಾಭ್ಯಾಗಮವೆಂಬ ದೋಷದ ಪ್ರಾಪ್ತಿಯಾಗುವದು. ಅದೂ ಪರಲೋಕವಾದಿಗಳಿಗೆ ಇಷ್ಟವಿಲ್ಲ; ಈ ಶ್ರುತಿಯಿಂದಲೂ, ಅನುಕೂಲತರ್ಕದಿಂದಲೂ, ಆತ್ಮನು ದೇಹದಿಂ ಭಿನ್ನನಾಗಿರುವನು. ಅನಿಷ್ಟಾಪಾದಕಕ್ಕೆ ತರ್ಕವೆಂದೆನ್ನುವರು (೫).

೨—ಇನ್ನು ಅನುಮಾನದಿಂದಲೂ, ಆತ್ಮನು ದೇಹದಿಂ ಭಿನ್ನನೆಂಬುದು ಸಿದ್ಧವಾಗಿರುವದು. ಆತ್ಮನು ದೇಹದಿಂ ಭಿನ್ನನು ದ್ರಷ್ಟನಾದ್ದರಿಂದ ಘಟದ್ರಷ್ಟನಂತೆ. ಅದನ್ನು ಗ್ರಂಥಾಂತರದಲ್ಲಿಯೂ ಪ್ರಕಟಿಸಿರುವದು. ಹ್ಯಾಗೆ ಘಟವಂ ನೋಡುವವನು ಘಟಕ್ಕಿಂತ ಬೇರೆಯಾಗಿರುವನೋ, ಅವನು ಸರ್ವಥಾ ಘಟವಾಗುವದಿಲ್ಲವೋ, ಹಾಗೆ ದೇಹವಂ ನೋಡುವ ನಾನು ದೇಹವಾಗದಿರುವೆನೆಂದು ನಿಶ್ಚೈಸಬೇಕು.

೩—ಮತ್ತು ಮನೆಯಲ್ಲಿರುವಂಥಾ ಮನುಷ್ಯನು ಮನೆಯೆಂದಿಗೂ ಆಗುವದಿಲ್ಲವೋ, ಹಾಗೆ ದೇಹದಲ್ಲಿ ಇರುವಂಥಾ ಆತ್ಮನು ದೇಹವೆಂದಿಗೂ ಆಗುವದಿಲ್ಲ; ಆದ್ದರಿಂದ ನೀನು ಸರ್ವಥಾ ದೇಹವೇ ಆತ್ಮನೆಂಬ ಬುದ್ಧಿಯಂ ಬಿಡುವನಾಗು. ಮತ್ತು ದೇಹಾತ್ಮವಾದಿಯ ಸಂಗವನ್ನು ಯಾವಾಗ್ಯೂ ಮಾಡಬೇಡ, ಯಾಕೆಂದರೆ;—ಆ ದೇಹಾತ್ಮಬುದ್ಧಿಯುಳ್ಳವನು ಮಹಾ ದೋಷಭಾಗಿಯಾಗಿರುವನು. ಅದನ್ನು "**ಅಸೂರ್ಯಾನಾಮತೇ ಲೋಕಾಃ-ಕಿಂತೇನ ನಕೃತಂ ಪಾಪಂ-ದೇಹಾತ್ಮ ಬುದ್ಧಿಜಂ ಪಾಪಂ**" ಇತ್ಯಾದಿ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವವು. ಆದಕಾರಣ ನೀನು, ಬ್ರಹಾತ್ಮಬುದ್ಧಿ

ಯಿಂದ ದೇಹಾತ್ಮಬುದ್ಧಿಯಂ ತ್ಯಜಿಸುವನಾಗು. ಯಾವಾಗ ದೇಹಾಭಿಮಾನವಂ ನೀನು ಬಿಡುವೆಯೋ, ಆಗ ದೇಹಧರ್ಮವಾದ ವಿಪ್ರಾದಿ ನಾಲ್ಕು ವರ್ಣಗಳು, ಬ್ರಹ್ಮಚರ್ಯಾದಿ ಆಶ್ರಮಗಳು, ಸ್ತ್ರೀಪುರುಷಾದಿ ಚಿಹ್ನೆಗಳು, ಮತ್ತು ದೇವದತ್ತಾದಿ ಸಂಜ್ಞೆಗಳು ಇವುಗಳೆಲ್ಲದರ ಅಭಿಮಾನವು ನಿವೃತ್ತಿಯಾಗುವದು. ಎಂತೆಂದರೆ;—ವರ್ಣಾಶ್ರಮಸಂಜ್ಞಾದಿಗಳು ಸ್ಥೂಲದೇಹದಲ್ಲಿಯೇ ಆರೋಪಿಸಲ್ಪಟ್ಟಿರುವವು. ವಿಚಾರಿಸಿದರೆ, ಸ್ಥೂಲದೇಹದಲ್ಲಿಯೂ ಕಾಣಲ್ಪಡುವದಿಲ್ಲ; ಅಂದಮೇಲೆ, ಲಿಂಗಶರೀರದಲ್ಲಾದರೂ, ಅಥವಾ ಆತ್ಮನಲ್ಲಾದರೂ ಹ್ಯಾಗೆ ಕಾಣ್ಬಂದೀತು? ಮತ್ತು ಅದಕ್ಕೆ ಯಾವದಾದರು ಧರ್ಮವಿದ್ದರೆ, ಅನ್ಯಜನ್ಮಾಂತರದಲ್ಲಿಯೂ ಗೋಚರವಾಗಬೇಕು? ಅದು ಆಗುವದಿಲ್ಲ. ಇದರಂತೆ ಮನುಷ್ಯತ್ವಾದಿ ಜಾತಿ, ಪುರುಷಾದಿ ಚಿಹ್ನೆಯೂ ಕೂಡ, ಸ್ಥೂಲದಲ್ಲಿ ಕಾಣಲ್ಪಡುವದಲ್ಲಧೆ, ಸೂಕ್ಷ್ಮಶರೀರದಲ್ಲಾಗಲೀ ಅಥವಾ ಆತ್ಮನಲ್ಲಾಗಲೀ ಕಾಣಲ್ಪಡುವದಿಲ್ಲ; ಆದ್ದರಿಂದವು ಸ್ಥೂಲದ ಧರ್ಮವಾಗಿವೆ, ನಿನ್ನ ಧರ್ಮವಲ್ಲ; ಅದೆಂತೆಂದರೆ;—"**ನತ್ವಂ ವಿಪ್ರಾದಿಕೋವರ್ಣೋ ನಾಶ್ರಮೀ ನಾಕ್ಷಗೋಚರಃ**" ಇತ್ಯಾದಿ ಶಾಸ್ತ್ರವಾಕ್ಯಗಳಿಂದ ಪ್ರಸಿದ್ಧವಾಗಿ ಪೇಳಿರುವರು. ಆದ್ದರಿಂದ ಆಕಾಶಾದಿ ಪಂಚಭೂತಗಳೂ ಅವರಿಂದಾದ ಸ್ಥೂಲಶರೀರವೂ, ಇನ್ನು ಅದರ ಧರ್ಮವಾದ ವರ್ಣಾಶ್ರಮಾದಿಗಳೂ ಕೂಡ, ನೀನಲ್ಲ; ಹ್ಯಾಗೆ ಸ್ಥೂಲಶರೀರವು ನೀನಲ್ಲವೋ, ಹಾಗೆ ಸೂಕ್ಷ್ಮವೂ ನೀನಲ್ಲ.

## ಆತ್ಮಾ ಸೂಕ್ಷ್ಮದೇಹದಿಂ ಭಿನ್ನ [೨].

—: ‖ ಸೂಕ್ಷ್ಮದೇಹವರ್ಣನೆ ‖ :—

(೧೦) ಪ್ರ—ಸೂಕ್ಷ್ಮಶರೀರವೆಂದರೆ ಯಾವದು?

ಉ—ಅಪಂಚೀಕೃತ ಭೂತಗಳ ಕಾರ್ಯವಾಗಿ, ಸಪ್ತದಶ ತತ್ವಾತ್ಮಕವಾಗಿ, ಭೋಗಾನುಭವಕ್ಕೆ ಸಾಧನವಾಗಿ, ಇಂದ್ರಿಯಕ್ಕೆ ಅಗೋಚರವಾಗಿ, ಯಾವದಿರುವುದೋ, ಅದೆ ಸೂಕ್ಷ್ಮಶರೀರವು. ಯಾವ ಭೂತಗಳು ಪಂಚೀಕರಣ ಮಾಡಲ್ಪಡಲಿಲ್ಲವೋ, ಅವು ಅಪಂಚೀಕೃತ ಭೂತವೆನ್ನಲ್ಪಡುವವು.

(೧೧) ಪ್ರ—ಹದಿನೇಳು ತತ್ವಗಳ್ಯಾವವು? ತೈ. ಪ. ೬ /— ೭೩

ಉ—ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚ ಪ್ರಾಣಗಳು, ಮನ ಮತ್ತು ಬುದ್ಧಿ, ಇವುಗಳೇ ಹದಿನೇಳು ತತ್ವಗಳು. ತತ್ವವೆಂದರೆ ಅಂಶ, ಅಥವಾ ಭಾಗಕ್ಕೆ ಪೆಸರು.

(೧೨) ಪ್ರ—ಪಂಚ ಜ್ಞಾನೇಂದ್ರಿಯಗಳ್ಯಾವವು ?

ಉ—ಶ್ರೋತ್ರ ೧, ತ್ವಕ್ ೨, ಚಕ್ಷು ೩, ಜಿಹ್ವಾ ೪, ಘ್ರಾಣ ೫. ಇವೇ ಪಂಚ ಜ್ಞಾನೇಂದ್ರಿಯಗಳು. ಇವೈದು ಶಬ್ದಾದಿಗಳ ಜ್ಞಾನಕ್ಕೆ ಸಾಧನವಾಗಿರುವದ್ದರಿಂದ, ಜ್ಞಾನೇಂದ್ರಿಯಗಳೆನಿಸಿಕೊಳ್ಳುವವು. ಜ್ಞಾನವು ಸತ್ವಗುಣದಿಂದಾಗುವದು, ಆ ಜ್ಞಾನೇಂದ್ರಿಯಗಳ ಉತ್ಪತ್ತಿ ಭೂತವೈದರ ಸತ್ವಾಂಶದಿಂ ಪೇಳಿರುವರು. “ **ಸತ್ವಾಂಶೈಃ ಪಂಚಭಿಸ್ತೇಷಾಂ ಕ್ರಮಾದ್ಧೀಂದ್ರಿಯಪಂಚಕಂ** ” ಇತ್ಯಾದಿ ವಾಕ್ಯಗಳಿಂದ ಸಿದ್ಧವಾಗಿರುವದು. ಇದರ ಅರ್ಥವೇನೆಂದರೆ ;—ಆ ಭೂತಗಳ ಪಂಚ ಸತ್ವಾಂಶಗಳಿಂದ ಕ್ರಮವಾಗಿ ಪಂಚ ಜ್ಞಾನೇಂದ್ರಿಯಗಳು ಪುಟ್ಟಿದವು. (೧) ಆಕಾಶದ ಸತ್ವಾಂಶದಿಂದ ಶ್ರೋತ್ರ, (೨) ವಾಯುವಿನಿಂದ ತ್ವಕ್, (೩) ತೇಜದಿಂದ ಚಕ್ಷು, (೪) ಜಲದಿಂದ ಜಿಹ್ವೆ, (೫) ಪೃಥ್ವಿಯಿಂದ ಘ್ರಾಣ, ಈ ಪ್ರಕಾರದಿಂ ಜ್ಞಾನೇಂದ್ರಿಯಗಳು ಯಾವಯಾವ ಭೂತದಿಂದ ಯಾವಯಾವದು ಪುಟ್ಟಿರುವದೋ, ಅದದು ಅದರದರ ಗುಣವನ್ನು ಗ್ರಹಿಸುತ್ತಿರುವದು.

ವೈ.ಪಂ.ಪ್ರ. ೧-೧೯

(೧) ಶ್ರೋತ್ರ—ಶಬ್ದವನ್ನೂ,
(೨) ತ್ವಕ್—ಸ್ಪರ್ಶವನ್ನೂ,
(೩) ಚಕ್ಷು—ರೂಪವನ್ನೂ,
(೪) ಜಿಹ್ವೆ—ರಸವನ್ನೂ,
(೫) ಘ್ರಾಣ—ಗಂಧವನ್ನೂ, ಈ ರೀತಿಯಿಂದ ಪಂಚವಿಷಯಗಳ ಗ್ರಹಣವು ಪಂಚಜ್ಞಾನೇಂದ್ರಿಯಗಳಿಂದಾಗುವದು.

(೧೩) ಪ್ರ—ಪಂಚ ಕರ್ಮೇಂದ್ರಿಯಗಳ್ಯಾವವು ?

ಉ—ವಾಕ್ ೧, ಪಾಣಿ ೨, ಪಾದ ೩, ಉಪಸ್ಥ ೪, ಗುದ ೫, ಇವೇ ಪಂಚಕರ್ಮೇಂದ್ರಿಯಗಳು. ಕರ್ಮಕ್ಕೆ ಸಾಧನವಾದ್ದರಿಂದ ಕರ್ಮೇಂದ್ರಿಯವೆನಿಸಿಕೊಳ್ಳುವವು. ಕರ್ಮವೆಂಬ ಪೆಸರು ಕ್ರಿಯಕ್ಕಾಗುವದು; ಕ್ರಿಯಾ ರಜೋಗುಣದಿಂದಾಗುವದು. ಆದ್ದರಿಂದ ಕರ್ಮೇಂದ್ರಿಯಗಳ ಉತ್ಪತ್ತಿ ಭೂತಗಳ ರಜೋಂಶದಿಂದ ಪೇಳಲ್ಪಟ್ಟಿರುವದು. “ **ರಜೋಂಶೈಃ ಪಂಚಭಿಸ್ತೇಷಾಂ ಕ್ರಮಾತ್ ಕರ್ಮೇಂದ್ರಿಯಾಣಿತು** ” ಇತ್ಯಾದಿ ವಾಕ್ಯದಿಂದ ಸಿದ್ಧವಾಗಿರುವದು. ಇದರ ಅರ್ಥವೇನೆಂದರೆ;—ಆ ಪಂಚಭೂತಗಳ ರಜೋಂಶದಿಂದ ಕ್ರಮವಾಗಿ ಕರ್ಮೇಂದ್ರಿಯಗಳು ಪುಟ್ಟಿದವು. (೧) ಆಕಾಶದ ರಜೋಂಶದಿಂದ, ವಾಕ್, (೨) ವಾಯುವಿನಿಂದ ಪಾಣಿ, (೩) ತೇಜದಿಂದ ಪಾದ,

ವೈ.ಪಂ.ಪ್ರ. ೧-೨೧

(೪) ಜಲದಿಂದ ಉಪಸ್ಥ, (೫) ಪೃಥ್ವಿಯಿಂದ ಪಾಯು. ಈ ಪ್ರಕಾರದಿಂ ಭೂತಗಳ ಪಂಚ ರಜೋಂಶದಿಂದ ಪಂಚಕರ್ಮೇಂದ್ರಿಯಗಳುಂಟಾದವು. ಮತ್ತು

(೧) ವಚನೋಚ್ಚಾರಣ,
(೨) ದಾನಾದಾನ,
(೩) ಗಮನ,
(೪) ರತಿಭೋಗಾನಂದ,
(೫) ಮಲತ್ಯಾಗ, ಇವು ಕ್ರಮದಿಂದ ಅವುಗಳ ವ್ಯಾಪಾರವಾಗಿವೆ.

ಈ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳು ಭೂತಗಳ ಅಸಾಧಾರಣ ಕಾರ್ಯವೆನಿಸುವವು. ಪ್ರಾಣ ಮತ್ತು ಅಂತಃಕರಣ ಭೂತಗಳ ಸಾಧಾರಣ ಕಾರ್ಯವಾಗಿರುವವು. ಪ್ರಾಣವು ಸ್ಥಾನಕ್ರಿಯಾಭೇದದಿಂದ ಐದು ಬಗೆಯಾಗಿರುವದು. ಮತ್ತು ಅಂತಃಕರಣವು ವೃತ್ತಿಭೇದದಿಂದ ನಾಲ್ಕು ಪ್ರಕಾರವಾಗಿರುವದು.

(೧೪) ಪ್ರ—ಪಂಚ ಪ್ರಾಣಗಳ್ಯಾವವು ?

ಉ—ಪ್ರಾಣ ೧, ಅಪಾನ ೨, ಸಮಾನ ೩, ಉದಾನ ೪, ವ್ಯಾನ ೫. ಇವೇ ಪಂಚಪ್ರಾಣಗಳು. ಅವುಗಳಲ್ಲಿ ಊರ್ಧ್ವಗತಿ ಪ್ರಾಣವೂ, ಅಧೋಗತಿ ಅಪಾನವೂ ಆಗಿರುವದು. ಮತ್ತು ಉಳಿದ ಮೂರು ವಾಯುಗಳು ನಾಭಿ ಕಂಠ ಸಂಧಿಗಳಲ್ಲಿ ವರ್ತಿಸುತ್ತಿರುವವು.

(೧೫) ಪ್ರ—ಅವೈದರ ಸ್ಥಾನ, ಕ್ರಿಯಗಳ್ಯಾವವು ?

ಉ—ಪ್ರಾಣಕ್ಕೆ ಹೃದಯಸ್ಥಾನ-ಹಸಿವುಬಾಯಾರಿಕೆ ಕ್ರಿಯಾ.
ಅಪಾನಕ್ಕೆ ಗುದಸ್ಥಾನ—ಮಲಮೂತ್ರ ಅಧೋ ನಯನ ಕ್ರಿಯಾ.
ಸಮಾನಕ್ಕೆ ನಾಭಿಸ್ಥಾನ—ಭುಕ್ತಪೀತಾನ್ನ ಜಲಗಳನ್ನು ಪಚನಗೊಳಿಸಿ ಯೋಗ್ಯವಾಗಿ ಸಮಪಡಿಸುವ ಕ್ರಿಯಾ.
ಉದಾನಕ್ಕೆ ಕಂಠಸ್ಥಾನ—ಶ್ವಾಸಕ್ರಿಯಾ.
ವ್ಯಾನಕ್ಕೆ ಸರ್ವಾಂಗಸ್ಥಾನ—ರಸಮಿಶ್ರ ಕ್ರಿಯಾ.

ಕೆಲವೆಡೆಗಳಲ್ಲಿ ಶ್ವಾಸಕ್ರಿಯಾ ಪ್ರಾಣಕೆಂದೂ. ಸ್ವಪ್ನವು, ಬಿಕ್ಕಳಿಕೆಯು ಹಿತಾಯೆಂಬ ನಾಡಿಯಲ್ಲಿರುವ ಉದಾನದ ಕ್ರಿಯವೆಂದೂ ಹೇಳಿರುವದು. ಈ ಪ್ರಕಾರವಾಗಿ ಸ್ಥಾನ, ಕ್ರಿಯಾ ಭೇದಗಳಿಂದ ಪ್ರಾಣವು ಐದು ಬಗೆಯಾಗಿರುವದು. ಆದರೂ ಸ್ವರೂಪತಃ ವಾಯುವಿಶೇಷಸ್ವರೂಪದಿಂ ಒಂದೇ ಇರುವುದು.

(೧೬) ಪ್ರ—ಯಾರೋ ಕೆಲವರು ನಾಗಾದಿ ಉಪಪ್ರಾಣ ಪಂಚಕವನ್ನು ಸೇರಿಸಿ ದಶಪ್ರಾಣವೆಂದು ಪೇಳಿರುವರು. ನೀವು ಪಂಚ ಪ್ರಾಣವೆಂದು ಹ್ಯಾಗೆ ಪೇಳುವಿರಿ ?

ಉ—ಹ್ಯಾಗೂ ಯೋಗ-ಗ್ರಂಥಾದಿಗಳಲ್ಲಿ ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ, ಇವು ಪಂಚ ಉಪಪ್ರಾಣಗಳೆಂದೂ, ಉದ್ಗಾರ-ನಿಮೇಷ-ಸೀನು-ವಿಜೃಂಭಣ-ಮೃತಶರೀರವನ್ನೂದಿಸುವದು, ಇವು ಕ್ರಮವಾಗಿ ಅವುಗಳ ಕ್ರಿಯವೆಂದೂ ಪೇಳಿರುವವು. ಆದಾಗ್ಯು ಈ ಪ್ರಕ್ರಿಯವು ವೇದಾಂತ ಗ್ರಂಥಗಳಲ್ಲಿಲ್ಲ. ಮತ್ತೇನೆಂದರೆ;—ಪೂರ್ವದಲ್ಲಿ ಪೇಳಿದ ಪಂಚಪ್ರಾಣವೇ ಬರೆಯಲ್ಪಟ್ಟಿರುವದು; ಅದು ಭೂತಗಳ ಮಿಶ್ರ ರಜೋಗುಣಾಂಶದಿಂ ಪುಟ್ಟಿರುವದು. ಮತ್ತು ಮಿಶ್ರಸತ್ವಾಂಶದಿಂದ ಅಂತಃಕರಣ ಹುಟ್ಟಿರುವದು.

(೧೭) ಪ್ರ—ಅಂತಃಕರಣವೆಂದರೆ ಏನು ?

ಉ—"ಅಂತಃ" ಅಂದರೆ ಶರೀರದ ಒಳಗೆ 'ಕರಣ' ಅಂದರೆ, ಜ್ಞಾನಕ್ಕೆ ಸಾಧನವಾಗಿರುವದು, ಆದ್ದರಿಂದ ಅಂತಃಕರಣವೆನಿಸಿಕೊಳ್ಳುವದು. ಅದಕ್ಕೆ ಪಾಚಕ—ಪಾಠಕನಂತೆ ವೃತ್ತಿಭೇದದಿಂದ ನಾಲ್ಕು ಸಂಜ್ಞೆಗಳಾಗಿರುವದು.

(೧೮) ಪ್ರ—ಆ ನಾಲ್ಕು ಸಂಜ್ಞೆಗಳ್ಯಾವವು ?

ಉ—(೧) ಮನ, (೨) ಬುದ್ಧಿ, (೩) ಚಿತ್ತ, (೪) ಅಹಂಕಾರ, ಇವು ನಾಲ್ಕು ಅಂತಃಕರಣಕ್ಕೆ ಹೆಸರು. ಅವುಗಳಲ್ಲಿ

[೧] ಸಂಕಲ್ಪ ವಿಕಲ್ಪ ರೂಪವಾದ ಅಂತಃಕರಣದ ಪರಿಣಾಮು ಮನೆ,

[೨] ನಿಶ್ಚಯರೂಪ ಪರಿಣಾಮು ಬುದ್ಧಿ,

[೩] ಚಿಂತನರೂಪ ಪರಿಣಾಮು ಚಿತ್ತ,

[೪] ಅಹಂತೆಯ ರೂಪಪರಿಣಾಮು ಅಹಂಕಾರ, ಈ ನಾಲ್ಕು ಅಂತಃಕರಣದ ಪರಿಣಾಮುವಾಗಿರುವವು. ಆದಕಾರಣ ಇವುಗಳಿಗೂ ಅಂತಃಕರಣವೆಂದು ಪೇಳಿರುವರು. ಮತ್ತು

(೧) ಮಂತವ್ಯ—ಮನನಮಾಡುವದು.

(೨) ಬೋದ್ಧವ್ಯ—ನಿಶ್ಚೈಸುವದು.

(೩) ಚಿಂತಿತವ್ಯ—ಚಿಂತಿಸಲ್ಪಡುವುದು.

(೪) ಅಹಂಕರ್ತವ್ಯ—ಅಹಂಕರಿಸುವದು. ಇವು ಕ್ರಮದಿಂದ ಅವುಗಳ ವಿಷಯವೆನಿಸುವವು. ಆ ನಾಲ್ಕರಲ್ಲಿ ಚಿತ್ತ ಅಹಂಕಾರವನ್ನು ಮನ ಬುದ್ಧಿಗಳಲ್ಲಿ ಅಂತರ್ಭಾವವಾಗಿ ಗ್ರಹಿಸಿ ದಶೇಂದ್ರಿಯ ಪಂಚಪ್ರಾಣಗಳೊಡನೆ ಮನ ಬುದ್ಧಿಗಳನ್ನು ಸೇರಿಸಿ, ಹದಿನೇಳು ತತ್ವಗಳುಳ್ಳದ್ದು ಸೂಕ್ಷ್ಮಶರೀರವೆಂದು ವೇದಾಂತಶಾಸ್ತ್ರದಲ್ಲಿ ಪೇಳಿರುವದು. "ಶರೀರಂ ಸಪ್ತದಶಭಿಃ ಸೂಕ್ಷ್ಮಂ ತಲ್ಲಿಂಗಮುಚ್ಯತೆ" ಇತ್ಯಾದಿ ವಾಕ್ಯಗಳಿಂದ ಆ ಸಪ್ತದಶ ತತ್ವಗಳಿಂದೊಡಗೂಡಿದ ಸೂಕ್ಷ್ಮಶರೀರವನ್ನು ಲಿಂಗಶರೀರವೆಂತಲೂ ಪೇಳಿರುವರು. ಮತ್ತು ಗ್ರಂಥಾಂತರದಲ್ಲಿ ಈ ಸೂಕ್ಷ್ಮಶರೀರವನ್ನು ಪುರ್ಯಷ್ಟಕರೂಪದಿಂದಲೂ ವರ್ಣಿಸಿರುವದು.

—: ಪುರ್ಯಷ್ಟಕಸ್ವರೂಪ :—

(೧೯) ಪ್ರ—ಪುರ್ಯಷ್ಟಕವಾವುದು?

ಉ—ಪಂಚ ಕರ್ಮೇಂದ್ರಿಯಗಳು (೧), ಪಂಚಜ್ಞಾನೇಂದ್ರಿಯಗಳು (೨), ಪಂಚ ಪ್ರಾಣಗಳು (೩), ಪಂಚ ಸೂಕ್ಷ್ಮಭೂತಗಳು (೪), ನಾಲ್ಕು ಅಂತಃಕರಣಗಳು (೫), ಕಾಮ (೬), ಕರ್ಮ (೭), ಅಜ್ಞಾನ (೮), ಇವಿಷ್ಟೂ ಕೂಡಿದ್ದು ಪುರ್ಯಷ್ಟಕವು. ಅದನ್ನು

ಶ್ಲೋ॥ ವಾಗಾದಿಪಂಚ ಶ್ರವಣಾದಿಪಂಚ
ಪ್ರಾಣಾದಿಪಂಚಾಭ್ರಮುಖಾನಿಪಂಚ।
ಬುದ್ಧ್ಯಾದ್ಯವಿದ್ಯಾಽಪಿಚ ಕಾಮಕರ್ಮಣಿ
ಪುರ್ಯಷ್ಟಕಂ ಸೂಕ್ಷ್ಮಶರೀರಮಾಹುಃ॥

ಈ ವಾಕ್ಯದಲ್ಲಿ ಪೇಳಿರುವದು. ಇವರ ಅರ್ಥವು ಸ್ಪಷ್ಟವೇ ಇದೆ. ಈ ಪುರ್ಯಷ್ಟಕವನ್ನು ವಿದ್ವಾಂಸುಗಳು ಸೂಕ್ಷ್ಮಶರೀರವೆಂದು ಪೇಳುವರು. ಆ ಸೂಕ್ಷ್ಮದೇಹವು ಅನಾತ್ಮರೂಪವಾದದ್ದು, ಅದರಲ್ಲಿ ಯಾವನು ತಾದಾತ್ಮ್ಯಧ್ಯಾಸವಂ ಮಾಡುವನೋ, ಅವನು ನವಗುಣ ಗ್ರಸಿತನಾಗುವನು.

(೨೦) ಪ್ರ—ನವಗುಣಗಳ್ಯಾವವು? ಮತ್ತು ಅವು ಯಾವದಕ್ಕೆ ಪೇಳುವರು?

ಉ—ಬುದ್ಧಿ ೧, ರಾಗ ೨, ದ್ವೇಷ ೩, ಪ್ರಯತ್ನ ೪, ಸಂಸ್ಕಾರ ೫ ಧರ್ಮ ೬, ಅಧರ್ಮ ೭, ಸುಖ ೮, ದುಃಖ ೯, ಇವೇ ನವಗುಣಗಳು. ಇವು ಲಿಂಗದೇಹಕ್ಕಾಗಿರುವವು.

(೨೧) ಶಂಕಾ;—ಈ ಸರ್ವಧರ್ಮವು ಆತ್ಮನಿಗೆ ಯಾಕಿಲ್ಲ?

ಸಮಾಧಾನ—ಈ ಧರ್ಮಗಳು ಆತ್ಮನದಲ್ಲ; ಯಾಕೆಂದರೆ;— ಅನ್ವಯವ್ಯತಿರೇಕ ದೃಷ್ಟಿಯಿಂದ ಈ ಗುಣಗಳೆಲ್ಲವು ಲಿಂಗ ದೇಹದಲ್ಲಿಯೇ ತೋರುತ್ತಿರುವವು. ಜಾಗ್ರತ್ಸ್ವಪ್ನಾವಸ್ಥೆಗಳಲ್ಲಿ ಲಿಂಗ ದೇಹವಿರುವದರಿಂದ ಆ ಗುಣಗಳು ತೋರುತ್ತಿರುವವು. ಸುಷುಪ್ತಿಯಲ್ಲಿ ಲಿಂಗದೇಹವಿಲ್ಲದ್ದರಿಂದ ಆ ಗುಣಗಳು ತೋರುವದಿಲ್ಲ; ಆದ್ದರಿಂದವು ಲಿಂಗಶರೀರದ ಧರ್ಮವಾಗಿದೆ; ಆತ್ಮನ ಧರ್ಮವಲ್ಲ. ಮತ್ತು ಶೃತಿಸ್ಮೃತಿಗಳಲ್ಲಿಯೂ ಕಾಮ, ಸಂಕಲ್ಪಾದಿಗಳು ಮನದ್ದೆಂತಲೂ, ಇಚ್ಛಾದ್ವೇಷಾದಿಗಳು ಕ್ಷೇತ್ರದ ಧರ್ಮವೆಂತಲೂ, ಹೇಳಿರುವದು. ಆ ಶೃತಿ ಯಾವದೆಂದರೆ;—

ಶೃ॥ ಕಾಮಃಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ
ಧೃತಿರಧೃತಿರ್ಹ್ರೀರ್ಧೀರ್ಭೀರಿ ತ್ಯೇತತ್ಸರ್ವಂ ಮನಏವೇತಿ ॥

ಇದಕ್ಕೆ ಕಾಮ–ಸಂಕಲ್ಪ–ಸಂಶಯ–ಶ್ರದ್ಧೆ–ಅಶ್ರದ್ಧೆ–ಧೃತಿ–ಅಧೃತಿ–ಲಜ್ಜೆ–ನಿಶ್ಚಯ–ಭಯ ಈ ಸರ್ವರೂಪದಿಂದ, ಮನವೇ ಪರಿಣಮಿಸಿರುವದೆಂದರ್ಥ.

ಮತ್ತು ಸ್ಮೃತಿ ಯಾವದೆಂದರೆ;—

ಸ್ಮೃ॥ ಇಚ್ಛಾದ್ವೇಷಃಸುಖಂದುಖಂ ಸಂಘಾತಶ್ಚೇತನಾಧೃತಿಃ।
ಏತತ್ಕ್ಷೇತ್ರಂಸಮಾಸೇನ ಸವಿಕಾರಮುದಾಹೃತಂ ॥

ಅರ್ಥವೇನೆಂದರೆ ;—ಇಚ್ಛೆಯು–ದ್ವೇಷವು–ಸುಖವು–ದುಃಖವು–ಸಂಘಾತವು–ಚೇತನವು–ಧೃತಿಯು ಇವುಗಳನ್ನು ಸಂಕ್ಷೇಪದಿಂದ ವಿಕಾರವುಳ್ಳ ಕ್ಷೇತ್ರವೆಂದು ಹೇಳುವರು.

## ೧ :— ಷಡೂರ್ಮಿಲಕ್ಷಣ:—

ಹಾಗೆ ಷಡೂರ್ಮಿಯಾದರೂ ಸ್ಥೂಲ ಸೂಕ್ಷ್ಮ ಸಂಘಾತದ ಧರ್ಮವಾಗಿರುವದಲ್ಲದೆ ಆತ್ಮನ ಧರ್ಮವಲ್ಲ. ಅದೆಂತೆಂದರೆ;—

ಶ್ಲೋ॥ ಕ್ಷುತ್ಪಿಪಾಸೇಹಿಪ್ರಾಣಸ್ಯ ಮನಸಃಶೋಕಮೋಹಕೌ।
ಜನ್ಮಮೃತ್ಯೂ ಶರೀರಸ್ಯ ಷಡೂರ್ಮಿ ರಹಿತಃಶಿವಃ ॥

ಇಂತೆಂಬುವದರಿಂದ ಹಸಿವು, ಬಾಯಾರಿಕೆ ಎರಡು ಪ್ರಾಣದ ಧರ್ಮವು. ಶೋಕ ಮೋಹಗಳೆರಡು ಮನದ ಧರ್ಮವು. ಜನ್ಮ, ಮೃತ್ಯುಗಳೆರಡು ಸ್ಥೂಲ

ದೇಹದ ಧರ್ಮವು. ಇನ್ನು ಶಿವಸ್ವರೂಪನಾದ ಆತ್ಮನು ಈ ಷಡೂರ್ಮಿಗಳಿಂದ ರಹಿತನೆಂಬುದು ಸಿದ್ಧವಾಯಿತು.

೨:— ಹಾಗೆ ಕರ್ತೃತ್ವ, ಭೋಕ್ತೃತ್ವಗಳೂ ಕೂಡ ಸಂಘಾತದ ಧರ್ಮವಾಗಿರುವವಲ್ಲದೆ ಆತ್ಮನದಲ್ಲ; ಯಾಕೆಂದರೆ;— ಕರ್ಮದ ಆಶ್ರಯ ದೇಹವು ೧, ಕರಣ ಇಂದ್ರಿಯವು ೨, ಕರ್ತಾ ಅಹಂಕಾರವು ೩, ಚೇಷ್ಟಿಸುವದು ಪ್ರಾಣವು ೪, ಮತ್ತು ಪ್ರಕಾಶಪಡಿಸುವದಕ್ಕೆ ದೇವತೆಗಳಿರುವರು ೫. ಇವೈದರಿಂದ ಕಾಯಿಕ-ವಾಚಿಕ-ಮಾನಸ ವ್ಯಾಪಾರರೂಪವಾದ ಶುಭಾಶುಭ ಕರ್ಮಗಳು ನಡೆಯುತ್ತಿರುವವು. ಆತ್ಮನು ಅವುಗಳಿಗೆ ಸಾಕ್ಷಿಯಾಗಿರುವನು. ಇಂಥಾ ಆತ್ಮನನ್ನು ಯಾವನಾದರು ಕರ್ತನೆಂದು ಗ್ರಹಿಸಿದರೆ, ಅವನನ್ನು ಭಗವಂತನು ದುರ್ಮತಿಯೆಂದು ಹೇಳಿರುವನು.

೩:— ಇದರಂತೆಯೇ (೧) ಭೋಗಗಳ ಸ್ಥಾನ ಸ್ಥೂಲಶರೀರವಾಗಿರುವದು. (೨) ಇಂದ್ರಿಯಗಳು ಭೋಗಸಾಧನವಾಗಿರುವವು. (೩) ಆಭಾಸಯುಕ್ತ ಬುದ್ಧಿಯು ಭೋಕ್ತೃವಾಗಿರುವದು. (೪) ವಿಷಯ ಭೋಗ್ಯವಾಗಿರುವದು. ಆ ನಾಲ್ಕನ್ನು ಆತ್ಮನು ಪ್ರಕಾಶಪಡಿಸುತ್ತಾ ಸಾಕ್ಷಿಯಾಗಿರುವನು. ಇಂಥಾ ಆತ್ಮನನ್ನು ಯಾವನು ಭೋಕ್ತನೆಂದು ಗ್ರಹಿಸುವನೋ, ಅವನು ಮೂಢರಾಜನೆನಿಸುವನು.

೪:— ಹೀಗೆಯೇ ಅಂಧತ್ವ, ಪಟುತ್ವಾದಿಗಳೂ ಕೂಡ, ಚಕ್ಷುರಾದಿ ಇಂದ್ರಿಯಗಳ ಧರ್ಮವಾಗಿರುವವು; ಆತ್ಮನು ಆ ಸರ್ವಧರ್ಮಗಳಿಂ ರಹಿತನಾಗಿರುವನು. ಈ ಧರ್ಮಗಳಿಂದೊಡಗೂಡಿದ ಯಾವ ಸೂಕ್ಷ್ಮಶರೀರವು ಹೇಳಲ್ಪಟ್ಟಿತೋ ಅದೂ ನೀನಲ್ಲ; ಅದನ್ನು ಹೇಳುವ

**ಶ್ಲೋ॥ ನತ್ವಂ ದೇಹೋನೇಂದ್ರಿಯಾಣಿ ನಪ್ರಾಣೋ ನಮನೋ ನಧೀಃ ॥ ವಿನಾಶಿತ್ವಾದ್ವಿಕಾರಿತ್ವಾದ್ದೃಶ್ಯತ್ವಾಚ್ಚ ಘಟೋಯಥಾ ॥**

ಈ ಶ್ಲೋಕದಿಂದ ಸಿದ್ಧವಾದುದು. ಇದರ ಅರ್ಥವು ಸ್ಪಷ್ಟವೇ ಇದೆ.

೮— ಈಗ ಕಾರಣಶರೀರದ ಸ್ವರೂಪವಂ ಹೇಳುವರು;—

## ಆತ್ಮಾಕಾರಣ ದೇಹದಿಂ ಭಿನ್ನ [೩]

### —: ಕಾರಣಶರೀರದ ಸ್ವರೂಪ :—

೨೨ ಪ್ರ— ಕಾರಣಶರೀರವೆಂದರೆ, ಯಾವದು ?

ಉ—ಪೂರ್ವದಲ್ಲಿ ಪೇಳಿದ ಸ್ಥೂಲ ಸೂಕ್ಷ್ಮಗಳೆಂಬ ಎರಡು ಶರೀರಕ್ಕೂ ಉಪಾದಾನವಾದ ಅಜ್ಞಾನವು ಕಾರಣಶರೀರವೆನಿಸುವದು. ಆ ಅಜ್ಞಾನವು ಅನಾದಿಯಾದದ್ದು; ಅದಕ್ಕೆ ಉತ್ಪತ್ತಿಯಂ ಗ್ರಹಿಸಿದರೆ, ತನ್ನಿಂದ ತನ್ನ ಉತ್ಪತ್ತಿಯನ್ನಂಗೀಕರಿಸಿದಂತಾಗುವದು; ಅದರಿಂದ ಆತ್ಮಾಶ್ರಯದೋಷ ಪ್ರಾಪ್ತಿಯಾದೀತು. ಮತ್ತೊಂದು ಕಾರಣವನ್ನೇನಾದರೂ ಅದಕ್ಕೆ ಗ್ರಹಿಸಿದರೆ, ವೇದಾಂತದಲ್ಲಿ ಜಡಚೇತನಗಳೆಂಬ ಎರಡು ಪದಾರ್ಥಗಳನ್ನೇ ಪೇಳಿರುವದು. ಅದರಲ್ಲಿ ಜಡಪದಾರ್ಥಗಳೆಲ್ಲವು ಅಜ್ಞಾನದ ಕಾರ್ಯವಾಗಿವೆ; ಆದರಿಂದ ಅಜ್ಞಾನದ ಉತ್ಪತ್ತಿ ಸಂಭವಿಸುವದಿಲ್ಲ. ಮತ್ತು ಚೇತನವನ್ನು ಕಾರಣವೆಂದು ಗ್ರಹಿಸಿದರೆ, ಆಗಲೂ ಜೀವೇಶ್ವರತ್ವವೆರಡೂ ಅಜ್ಞಾನದಿಂದಲೇ ಸಿದ್ಧವಹುದು. ಆದಕಾರಣ ಅವೆರಡರಿಂದಲೂ ಅಜ್ಞಾನದ ಉತ್ಪತ್ತಿಯಂ ಪೇಳಲಾಗುವದಿಲ್ಲ; ಮತ್ತು ಪರಿಶೇಷವಾದ ಶುದ್ಧ ಚೇತನವಾದರೋ ಅದು ಅಸಂಗವಾಗಿರುವದು; ಅದರಿಂದ ಅಜ್ಞಾನದ ಉತ್ಪತ್ತಿಯಂ ಗ್ರಹಿಸಿದರೆ, ಚೇತನ ವಿಕಾರಿಯಾದೀತು! ಆದಕಾರಣ ಅಜ್ಞಾನವನಾದಿಯಾದದ್ದು. ಅದೇ ಕಾರಣ ಶರೀರವೆನಿಸಿಕೊಳ್ಳುವದು.

(೨೩) ಶಂಕಾ;—ಅಜ್ಞಾನವನ್ನು ಅನಾದಿಯೆಂದು ಅಂಗೀಕರಿಸಿದರೆ, ನಿತ್ಯತ್ವ ಪ್ರಾಪ್ತಿಯಾದೀತು! ಎಂತೆಂದರೆ; — ಜನ್ಯಪದಾರ್ಥಕ್ಕೆ ನಾಶವು ಕಾಣ್ಬರುವದು.

ಸಮಾಧಾನ:—ಅಜ್ಞಾನವು ಪ್ರಾಗಭಾವದಂತೆ ಅನಾದಿಸಾಂತವಾಗಿರುವದು. ಜ್ಞಾನದಿಂದದಕ್ಕೆ 'ಅಂತ' ಅಂದರೆ, ನಾಶವಾಗುವದು. ಇದರಿಂದನಿತ್ಯತ್ವವೇನೂ ಅದಕ್ಕೆ ಪ್ರಾಪ್ತಿಯಾಗುವದಿಲ್ಲ.

೧—೪ ಅಜ್ಞಾನಕ್ಕೆ ಎರಡು ಶಕ್ತಿಗಳಿರುವವು:
ಒಂದು ಆವರಣರೂಪ.

ಮತ್ತೊಂದು ವಿಕ್ಷೇಪರೂಪ, ಅಸತ್ವಾಪಾದಕ ಮತ್ತು ಅಭಾನಾಪಾದಕವಾದ ಇವೆರಡು ಅಂತದ ಪೆಸರು ಆವರಣವೆನಿಸುವದು. ಇನ್ನು ಭ್ರಾಂತಿಯಪೆಸರು ವಿಕ್ಷೇಪವೆನಿಸುವದು. ಸ್ಥೂಲಸೂಕ್ಷ್ಮಗಳಾದ ಎರಡು ಶರೀರವೂ ಭ್ರಾಂತಿರೂಪವಾದ್ದರಿಂದ ವಿಕ್ಷೇಪವೇ ಆಗಿರುವದು. ಈ ಅಜ್ಞಾನಕ್ಕೆ ಅವಿದ್ಯಾ ಎಂದು ಮತ್ತೊಂದು ಪೆಸರುಂಟು. ಆ ಅವಿದ್ಯಾ ಅನಿರ್ವಚನೀಯರೂಪವು. ಯಾವದನ್ನು ಯಾವ ಧರ್ಮದಿಂದಲೂ ನಿರೂಪಣೆ ಗೈಯ್ಯಲಾ

ಗುವದಿಲ್ಲವೋ, ಅದಕ್ಕೆ ಅನಿರ್ವಚನೀಯವೆಂದು ಪೆಸರು. ಮತ್ತು ಅದು ಅದ್ಭುತರೂಪವಾಗಿರುವದು. ಅದನ್ನು

ಶ್ಲೋ—ಸನ್ನಾಪ್ಯಸನ್ನಾಪ್ಯುಭಯಾತ್ಮಿಕಾನೋ
ವಿ. ಚೂ. ೧೧೧ ಭಿನ್ನಾಪ್ಯಭಿನ್ನಾಪ್ಯುಭಯಾತ್ಮಿಕಾನೋ ।
ಅಂಗಾಪ್ಯನಂಗಾಪ್ಯುಭಯಾತ್ಮಿಕಾನೋ
ಮಹಾದ್ಭುತಾನಿರ್ವಚನೀಯರೂಪಾ ॥

ಈ ಶ್ಲೋಕದಿಂದ ಪೇಳಿರುವದು. ಇದರ ಅರ್ಥವೇನಂದರೆ:—ಆ ಅವಿದ್ಯವು.

(೧) ಸತ್ತು ಅಲ್ಲದೆ ಅಸತ್ತು ಅಥವಾ ಉಭಯರೂಪವೆಂದು ಪೇಳಲ್ಪಡುವದಿಲ್ಲ.

(೨) ಚೇತನದಿಂ ಭಿನ್ನ ಅಲ್ಲದೆ ಅಭಿನ್ನ ಉಭಯ ರೂಪವೆಂದು ಪೇಳಿಸಿಕ್ಕೊಳ್ಳುವದಿಲ್ಲ.

(೩) ಅಂಗಸಹಿತ ಅಲ್ಲದೆ ಅಂಗರಹಿತ ಅಥವಾ ಉಭಯ ರೂಪವಾದದ್ದೆಂದು ಪೇಳುವದಕ್ಕೆ ಶಕ್ಯವಲ್ಲ, ಇಂಥಾ ಮಹಾ ಅದ್ಭುತಶಕ್ತಿಯು ಅನಿರ್ವಚನೀಯರೂಪವೆನಿಸುವದು.

ಅವಿದ್ಯಾ ಮೂರು ಪ್ರಕಾರ:—ಆ ಅವಿದ್ಯವು ಮೂರುವಿಧವಾಗಿ ಲೋಕದಲ್ಲಿ ತೋರುತ್ತಿರುವದು.

೧—ಜೀವನ್ಮುಕ್ತನಾದ ವಿದ್ವಾಂಸನ ದೃಷ್ಟಿಗೆ ತುಚ್ಛವಾಗಿಯೂ,

೨—ಮುಮುಕ್ಷುವಿನ ದೃಷ್ಟಿಗೆ ಅನಿರ್ವಚನೀಯವಾಗಿಯೂ,

೩—ಮೂಢನ ದೃಷ್ಟಿಗೆ ಸತ್ಯ ರೂಪವಾಗಿಯೂ, ತೋರುತ್ತಿರುವದು.

ಈ ಮಾತು "ತುಚ್ಛಾನಿರ್ವಚನೀಯಾಚ ವಾಸ್ತವೀ ಚೇತ್ಯಸೌ ತ್ರಿಧಾ" ಎಂಬ ವಾಕ್ಯದಲ್ಲಿ ಪೇಳಿರುವದು. ಅದರ ನಿವೃತ್ತಿಯೂ ಕೂಡ ಶೃತಿಯು ಮೂರು ಬಗೆಯಿಂದ ಪೇಳಿರುವದು. ಪಂ. ದ. ೬-೧೩೦

## ಅವಿದ್ಯಾನಿವೃತ್ತಿ ಮೂರು ಪ್ರಕಾರ:—

೧—ವೇದಾಂತಶಾಸ್ತ್ರ ಶ್ರವಣದಿಂದ ಪರಮಾರ್ಥ ನಿಶ್ಚಯವಾಗಲು ಅವಿದ್ಯೆಗೆ ನಾಶವಾಗುವದು.

೨—ಅಪರೋಕ್ಷ ಜ್ಞಾನದಿಂದ ಕಾರ್ಯಕ್ಷಮತ್ವ ನಿವೃತ್ತಿಯಾಗುವದು.

೩—ಪ್ರಾರಬ್ಧನಾಶದಿಂದ ಪ್ರತಿಭಾಸಕ್ಕೆ ನಾಶವಾಗುವದು. ಹೀಗೆ ಕಾರಣಶರೀರದ ಸ್ವರೂಪವು ಹೇಳಲ್ಪಟ್ಟಿತು. ಅದು “ಅನಾದ್ಯವಿದ್ಯಾನಿರ್ವಾಚ್ಯಾ ಕಾರಣೋಪಾಧಿರುಚ್ಯತೆ” ಈ ಶ್ಲೋಕದಲ್ಲೂ ಹೇಳಿರುವದು.

(೧) ಪೂರ್ವದೋಳ್ ಹೇಳಿದ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳು ಆತ್ಮನಿಗೆ ಉಪಾಧಿಯಾಗಿರುವವು. ಆ ತ್ರಿವಿಧ ಉಪಾಧಿಯ ಯೋಗದಿಂದ ಆತ್ಮನು ಜೀವನೆಂದು ಹೇಳಿಸಿಕೊಳ್ಳುವನು. ಅದೆಂತೆಂದರೆ;—

ಶ್ಲೋ॥ ಸ್ಥೂಲಸೂಕ್ಷ್ಮಕಾರಣಾಖ್ಯ ಮುಪಾಧಿತ್ರಿತಯಂ ಚಿತೇಃ ।
ಏತೈರ್ವಿಶಿಷ್ಟೋಜೀವಃಸ್ಯಾ ದ್ವಿಯುಕ್ತಃಪರಮೇಶ್ವರಃ ॥

ಇದರ ಅರ್ಥವು ಸ್ಪಷ್ಟವಾಗಿಯೇ ಇದೆ. ಆ ಮೂರು ಶರೀರಗಳಲ್ಲಿ ಪಂಚಕೋಶವಿರುವದು.

॥೧೩॥ ಆತ್ಮಾ ಪಂಚ ಕೋಶಾತೀತಃ—

—: ಪಂಚಕೋಶ ವರ್ಣನೆ :—

(೨೪) ಪ್ರ—ಪಂಚ ಕೋಶಗಳ್ಯಾವವು ?

ಉ—ಅನ್ನಮಯಾದಿ ಐದು ಕೋಶಗಳಿರುವವು ; ಅವುಗಳಲ್ಲಿ ಉತ್ತರೋತ್ತರವಾದದ್ದು ಅಂತರವಾಗಿರುವದು. ಅವುಗಳ ವಿವೇಕದಿಂದ ಆತ್ಮನು ಪ್ರಕಾಶಿಸಲ್ಪಡುವನು. ಎಂತೆಂದರೆ;—

ವಾ॥ ಅನ್ನಪ್ರಾಣಮನೋಮಯ ವಿಜ್ಞಾನಾನಂದ ಪಂಚ ಕೋಶಾನಾವ್ ॥ ಏಕೈಕಾಂತರ ಭಾಜೊಂಭಜತಿ ವಿವೇಕಾತ್ಪ್ರಕಾಶತಾಮಾತ್ಮೇತಿ ॥

ಇದರ ಅರ್ಥವೇನಂದರೆ ;—

[೧] ಅನ್ನಮಯ,
[೨] ಪ್ರಾಣಮಯ,
[೩] ಮನೋಮಯ,
[೪] ವಿಜ್ಞಾನಮಯ,

[೫] ಆನಂದಮಯ, ಈ ಪಂಚಕೋಶಗಳು, ಒಂದರೊಳಗೊಂದು ಸೇರಿಕ್ಕೊಂಡಿರುವವು. ಅವುಗಳಂ ವಿವೇಕಿಸುವದ್ದರಿಂದ ಶುದ್ಧ ಆತ್ಮನು ಪ್ರಕಟವಾಗುವನು. ಆ ಕೋಶಗಳ ಸ್ವರೂಪವಾವುದೆಂದರೆ,—

(೧) ಅನ್ನದ ಪರಿಣಾಮವಾದ ಸ್ಥೂಲಶರೀರವು ಅನ್ನಮಯಕೋಶವೆನ್ನಲ್ಪಡುವದು. ಎಂತೆಂದರೆ; ತಂದೆ ತಾಯಿಗಳಿಂದ ಭುಂಜಿಸಲ್ಪಟ್ಟ, ಅನ್ನೋದಕಗಳಿಂದ ಷಟ್ಕೋಶವಾಗಿ ಶರೀರವಾಗಿರುವದು. ಅದನ್ನು "ಪಿತೃಭ್ಯಾಮಶಿತಾದನ್ನಾತ್ ಷಟ್ಕೋಶಂ ಜಾಯತೇವಪುಃ" ಈ ಶ್ಲೋಕದಲ್ಲಿ ಪೇಳಿರುವದು. ಇದರ ಅರ್ಥವೇನೆಂದರೆ;—ಮಾತಾಪಿತೃಗಳಿಂದ ಭುಂಜಿಸಲ್ಪಟ್ಟ ಅನ್ನದಿಂ ಷಟ್ಕೋಶಾತ್ಮಕವಾಗಿ ಶರೀರ ಪುಟ್ಟಿರುವದು. ಆ ಷಟ್ಕೋಶಗಳ್ಯಾವವೆಂದರೆ;—

(೧) ಸ್ನಾಯು,

(೨) ಅಸ್ಥಿ,

(೩) ಮಜ್ಜಾ, ಇವು ಮೂರು ಕೋಶಗಳು ಪಿತನಿಂದಲೂ,

(೧) ತ್ವಕ್,

(೨) ಮಾಂಸ,

(೩) ಶೋಣಿತ, ಇವು ಮೂರು ಮಾತೃವಿನಿಂದಲೂ ಆಗಿರುವವು. ಆ ಷಟ್ಕೋಶಮಯವಾಗಿ ಸ್ಥೂಲದೇಹವಿಳುವದ್ದರಿಂದ ಅನ್ನಮಯವೆನಿಸಿಕ್ಕೊಳ್ಳುವದು, ಮತ್ತು ಕೋಶಕಾರಕೀಟದ ಕೋಶದಂತೆ ಅಥವಾ ಕತ್ತಿಯ ವರೆಯಂತೆ ಆತ್ಮನಂ ಮುಚ್ಚುವದರಿಂದ ಕೋಶವೆಂದು ಪೇಳುವರು.

(೨) ಪಂಚಕರ್ಮೇಂದ್ರಿಯ ಸಹಿತವಾದ ಪಂಚಪ್ರಾಣವು ಪ್ರಾಣಮಯ ಕೋಶವೆನ್ನಲ್ಪಡುವದು.

(೩) ಪಂಚಜ್ಞಾನೇಂದ್ರಿಯದಿಂದೊಡಗೂಡಿದ ಮನವನ್ನು ಮನೋಮಯ ಕೋಶವೆನ್ನುವರು. ಎಲ್ಲೊ ಒಂದೆಡೆಯಲ್ಲಿ ಕರ್ಮೇಂದ್ರಿಯಸಹಿತವಾದ ಮನವನ್ನು ಮನೋಮಯ ಕೋಶವೆಂತಲೂ ಪೇಳಿರುವದು.

(೪) ಜ್ಞಾನೇಂದ್ರಿಯ ಯುಕ್ತವಾದ ಬುದ್ಧಿಯನ್ನು ವಿಜ್ಞಾನಮಯ ಕೋಶವೆಂದೆನ್ನುವರು.

(೫) ಸುಷುಪ್ತಿಯಲ್ಲಿರುವ ಅಜ್ಞಾನದಿಂದಾವರಿಸಲ್ಪಟ್ಟ ಪ್ರತಿಬಿಂಬರೂಪವಾದ ಆನಂದಾಭಿಮಾನದ ಪೆಸರು ಆನಂದಮಯಕೋಶವೆನಿಸುವದು. ಅಥವಾ

ಜಾಗ್ರತ್ಸ್ವಪ್ನದಲ್ಲಿ ಪ್ರಿಯ, ಮೋದ, ಪ್ರಮೋದವೆಂಬ ತ್ರಿವಿಧವೃತ್ತಿಯ ಆನಂದಕ್ಕೆ ಆನಂದಮಯ ಕೋಶವೆಂದು ಹೆಸರು.

ಸುಷುಪ್ತಿಯಲ್ಲಿ ಆನಂದಮಯವು ಸ್ಪಷ್ಟವಾಗಿಯೂ, ಜಾಗ್ರತ್ಸ್ವಪ್ನಗಳಲ್ಲಿ ಕಿಂಚಿತ್ತಾಗಿಯೂ ತೋರುವದು. ಅದೆಂತೆಂದರೆ ;—

ಶ್ಲೋ॥ ಆನಂದಮಯಕೋಶಸ್ಯ ಸುಷುಪ್ತೌ ಸ್ಫೂರ್ತಿರುತ್ಕಟಾ ।
ಸ್ವಪ್ನಜಾಗರಯೋರೀಷದಿಷ್ಟಸಂದರ್ಶನಾದಿನಾ ॥

ಅಂದರೆ ;— ಇಷ್ಟಪದಾರ್ಥ ದರ್ಶನದಿಂದ ಪ್ರಿಯವೃತ್ತಿ ಉದಯವಾಗುವದು. ಆ ಪದಾರ್ಥದ ಲಾಭದಿಂದ ಮೋದವೂ, ಅದರ ಭೋಗದಿಂದ ಪ್ರಮೋದವೂ ಜಾಗ್ರತ್ಸ್ವಪ್ನದಲ್ಲಿ ಆಗುತ್ತಿರುವದು, ಉಳಿದ ಅರ್ಥವು ಸ್ಪಷ್ಟವೇ ಇದೆ. ಈ ಪಂಚಕೋಶಗಳನ್ನು ವಿವೇಚಿಸಿದಲ್ಲದೆ, ಆತ್ಮನು ಯಥಾಸ್ಥಿತಿಯಾಗಿ ಭಾಸವಾಗುವದಿಲ್ಲ ; ಆದಕಾರಣ ಪಂಚಕೋಶಗಳಲ್ಲಿ ತತ್ತನ್ಮಯನಾಗಿ ತೋರುತ್ತಿರುವನು, ಅದೆಂತೆಂದರೆ :—

ಶ್ಲೋ॥ ಪಂಚಕೋಶಾದಿ ಯೋಗೇನ ತತ್ತನ್ಮಯ ಇವಸ್ಥಿತಃ ।
ಶುದ್ಧಾತ್ಮಾ ನೀಲವಸ್ತ್ರಾದಿ ಯೋಗೇನಸ್ಫಟಿಕೋಯಥಾ ॥

ಯೆಂದು ಹೇಳಿರುವರು. ಇದರ ಅರ್ಥವೇನಂದರೆ ;—ಹ್ಯಾಗೆ ನೀಲ ಪೀತ ವಸ್ತ್ರಾದಿಗಳ ಯೋಗದಿಂದ, ಸ್ಫಟಿಕವು ನೀಲಪೀತಾದಿ ಬಣ್ಣಗಳಿಂದೊಡಗೂಡಿ ತೋರುತ್ತಿರುವದೋ, ಹಾಗೆ ಅನ್ನಮಯಾದಿ ಪಂಚಕೋಶಗಳ ಯೋಗದಿಂದ ಶುದ್ಧಾತ್ಮನು ಆಯಾಯ ಕೋಶಮಯನಾಗಿ ತೋರುತ್ತಿರುವನೆಂದರ್ಥ— ॥ತಾತ್ಪರ್ಯವೇನೆಂದರೆ॥

(೧) ನಾನು ಮನುಷ್ಯನು— (ಅನ್ನಮಯಕೋಶದಿಂದ)
(೨) ನಾನು ಕ್ಷುತ್ಪಿಪಾಸೆಯುಳ್ಳವನು—(ಪ್ರಾಣಮಯಕೋಶದಿಂದ)
(೩) ನಾನು ಸಂಕಲ್ಪವುಳ್ಳವನು—(ಮನೋಮಯಕೋಶದಿಂದ)
(೪) ನಾನು ಕರ್ತನು—(ವಿಜ್ಞಾನಮಯಕೋಶದಿಂದ)
(೫) ನಾನು ಭೋಕ್ತನು— (ಆನಂದಮಯಕೋಶದಿಂದ)

ಹೀಗೆ ವೇದಾಂತ ವಿಚಾರಶೂನ್ಯರಾದ ಎಷ್ಟೋ ಜನ ವಾದಿಗಳು ಮುಖ್ಯ ಆತ್ಮನಂ ತಿಳಿಯದೆ ಆಯಾಯಕೋಶಗಳಲ್ಲಿ ಆತ್ಮಬುದ್ಧಿಯಿಂದ ಪರಸ್ಪರ ಕಲಹವಂ ಮಾಡುವರು.

ಹ್ಯಾಗೆ ಯಾರೋ ಐದು ಜನ ಪುರುಷರು ಯಾವದೋ ಒಂದು ಸ್ಥಾನದಲ್ಲಿ, ಬೇರೆಬೇರೆ ಬಣ್ಣವುಳ್ಳ ಪುಷ್ಪಗಳಿಂದಾಚ್ಛಾದಿಸಲ್ಪಟ್ಟ ಸ್ಫಟಿಕವಂ ನೋಡಿ ತಮ್ಮಗಳಲ್ಲಿ ವಿವಾದವಂ ಮಾಡುತ್ತಿದ್ದರು. ಪುನಃ ಯಾರೋ ಒಬ್ಬ ಜ್ಞಾತನಿಂದ ಕೇಳಲ್ಪಟ್ಟವರಾಗಿ ಪುಷ್ಪಗಳ, ಅಪಸರಣ ಮೂಲಕ ಸ್ಫಟಿಕದ ಯಥಾಸ್ಥಿತಿಯನ್ನು ತಿಳಿದರೋ, ಹಾಗೆ ವಾದಿಗಳೂ ಕೂಡ, ಸಾಕ್ಷಿಯಾದ ಆತ್ಮನಂ ತಿಳಿಯದೆ ವಿವಾದವಂ ಮಾಡುವರು.

ಒಬ್ಬನು ದೇಹವೇ ಆತ್ಮನೆಂದು,
ಮತ್ತೊಬ್ಬನು ಇಂದ್ರಿಯವೇ ಆತ್ಮನೆಂದು,
ಇನ್ನೊಬ್ಬನು ಪ್ರಾಣವೇ ಆತ್ಮನೆಂದು,
ಬೇರೊಬ್ಬನು ಮನವೇ ಆತ್ಮನೆಂದು,
ಮತ್ತೆ ಬೇರೊಬ್ಬನು ಕ್ಷಣಿಕ ವಿಜ್ಞಾನರೂಪವಾದ ಬುದ್ಧಿಯೇ ಆತ್ಮನೆಂದು,
ಇನ್ನು ಬೇರೊಬ್ಬನು ಶೂನ್ಯವೇ ಪರಮತತ್ವವೆಂದು ಹೇಳುವನು.
ಕೆಲವರು ಕೇವಲ ಜಡ ಮತ್ತು ಜ್ಞಾನಗುಣವುಳ್ಳವನ್ನು ಆತ್ಮನೆಂದೂ,
ಕೆಲವರು ಆತ್ಮನು ಜಡಚೇತನ ಉಭಯಾತ್ಮಕನೆಂದು ಗ್ರಹಿಸಿರುವರು.
ಕೆಲವರು ಆತ್ಮನು ಅಣುರೂಪನೆಂತಲೂ,

ಕೆಲವರು ವಿಭುವೆಂತಲೂ ಇವೇ ಆದಿಯಾಗಿ ತಮ್ಮ ತಮ್ಮ ಬುದ್ಧಿಯ ಕಲ್ಪಿತವನ್ನೇ ಗ್ರಹಿಸಿರುವರು. ಮತ್ತು ತಮ್ಮ ತಮ್ಮ ಪಕ್ಷದಲ್ಲಿ ಶ್ರುತ್ಯಾಭಾಸ ಯುಕ್ತಿಗಳನ್ನೂ, ಅನುಭವವನ್ನೂ ಸಹ ಹೇಳಿರುವರು. ಆದರೆ ಆ ಸರ್ವಮತವು ಶ್ರುತಿಸ್ಮೃತಿಗಳಿಗೆ ವಿರೋಧವಾಗಿರುವವು. ಮತ್ತು ಆಚಾರ್ಯರಿಂದ ಖಂಡಿಸಲ್ಪಟ್ಟಿರುವದು.

೧—ದೇಹಾತ್ಮವಾದದಲ್ಲಿ ಕೃತಹಾನಿ, ಅಕೃತಾಭ್ಯಾಗಮನಾದಿದೋಷವೂ,

೨—ಇಂದ್ರಿಯಾತ್ಮವಾದದಲ್ಲಿ ಪ್ರತ್ಯೇಕ ಆತ್ಮನಂ ಗ್ರಹಿಸುವದ್ದರಿಂದ ಅನೇಕಾತ್ಮರು ಒಂದು ಶರೀರದಲ್ಲಿ ಸಿದ್ಧವಾದರು; ಆದ್ದರಿಂದ ಅದೂ ವಿರುದ್ಧವು. ಮತ್ತು ಸಮುದಾಯವನ್ನಾತ್ಮನೆಂದರೆ, ಯಾವದಾದರೂ ಒಂದು ಇಂದ್ರಿಯವಿಲ್ಲದೆ ಹೋಗುವದರಿಂದ ಆತ್ಮನಿಗೆ ಅಭಾವರೂಪದೋಷವೂ, ಮತ್ತು ಯಾವದಾದರೂ ಒಂದು ಇಂದ್ರಿಯವನ್ನಾತ್ಮನೆಂದು ಗ್ರಹಿಸಿದಲ್ಲಿ, ಪ್ರಮಾಣ ಯುಕ್ತಿಯ ಅಭಾವರೂಪದೋಷವೂ,

೩—ಪ್ರಾಣವನ್ನಾತ್ಮನೆಂದರೆ;—ಜಡತ್ವದ ಪ್ರಾಪ್ತಿ, ಜೀವನಕ್ಕೆ ಹೇತು ಪ್ರಾಣವೆಂದರೆ, ರಕ್ತದಲ್ಲಿ ಅತಿವ್ಯಾಪ್ತಿ, ಇತ್ಯಾದಿದೋಷವಿರುವದು.

೪—ಮನಾತ್ಮವಾದದಲ್ಲಿ ವಿಕಾರಿತ್ವದ ಪ್ರಾಪ್ತಿ, ಮತ್ತು ನನ್ನದೆಂಬು ವದಕ್ಕೆ ಆಸ್ಪದವಾಗಿಯೂ, ಇನ್ನು ವಾಸ್ಯಾದಿಗಳಂತೆ ಕರಣತ್ವದ ಪ್ರಾಪ್ತಿರೂಪ ದೋಷಗಳ ಪ್ರಾಪ್ತಿಯೂ ಆಗುವದು.

೫—ಬುದ್ಧಿ ಆತ್ಮನೆಂದರೆ;—ಪರಿಣಾಮಿತ್ವ ಮತ್ತು ಕರ್ತೃತ್ವ ಇನ್ನು ಸುಷುಪ್ತಿಯಲ್ಲಿ ವಿಲಯತ್ವದ ಪ್ರಾಪ್ತಿ, ಇತ್ಯಾದಿ ದೋಷವಿರುವದು.

೬—ಶೂನ್ಯ ಆತ್ಮನೆಂದರೆ, ಪುರುಷಾರ್ಥದ ಹಾನಿ, ಮತ್ತು ಅನುಭವಕರ್ತನು ಬೇರೆ ಇರುವದ್ದರಿಂದ ಶೂನ್ಯ ಆತ್ಮನಲ್ಲ.

೭—ಜ್ಞಾನಗುಣವುಳ್ಳವನು ಆತ್ಮನೆಂಬ ಪಕ್ಷದಲ್ಲಿ, ಜ್ಞಾನಕ್ಕೆ ಅನಿತ್ಯತ್ವದ ಪ್ರಾಪ್ತಿಯೆಂಬ ದೋಷವೂ,

೮—ಜಡಚೇತನಗಳೆರಡೂ ಸೇರಿದ್ದು ಆತ್ಮನೆಂದರೆ;—ಶ್ರುತಿಗೂ ಅನುಭವಕ್ಕೂ ವಿರುದ್ಧರೂಪದೋಷ.

೯—ಅಣುವೆಂದು ಗ್ರಹಿಸಿದಲ್ಲಿ ಶರೀರದ ಏಕದೇಶದಲ್ಲಿ ಜ್ಞಾನವೂ ಅನ್ಯದೇಶದಲ್ಲಿ ಸುಖದುಃಖಗಳ ಜ್ಞಾನವಿಲ್ಲದಿರುವ ದೋಷವೂ ಪ್ರಾಪ್ತಿಯಾಗುವದು.

೧೦—ಮಧ್ಯಮ ಪರಿಮಾಣ ಆತ್ಮನೆಂದರೆ, ಯಾವದಾದರೂ ಸಣ್ಣ ಅಥವಾ ದೊಡ್ಡ ಶರೀರ ಪ್ರಾಪ್ತಿಯಾಗಲು ಸಂಕೋಚ ವಿಕಾಸತ್ವವಂ ಗ್ರಹಿಸಬೇಕಾದೀತು!

೧೧—ವಿಭುವೆಂದು ಗ್ರಹಿಸಿ, ಜಡನೆಂಬಲ್ಲಿ ಶ್ರುತಿ ಯುಕ್ತಿ ಅನುಭವಗಳಿಗೆ ವಿರುದ್ಧವಾಗುವ ದೋಷವಾದೀತು! ಇತ್ಯಾದಿ ತರ್ಕರೂಪ ಯುಕ್ತಿಯಿಂದಲೂ, ಮತ್ತು

(೧) ದೇಹ ಆತ್ಮಾ ನಭವತಿ—ದೃಶ್ಯತ್ವಾತ್ ಘಟವತ್,
(೨) ಇಂದ್ರಿಯ ಆತ್ಮಾ ನಭವತಿ—ಕರಣತ್ವಾತ್ ವಾಸ್ಯಾದಿವತ್,
(೩) ಪ್ರಾಣ ಆತ್ಮಾ ನಭವತಿ—ವಾಯುವಿಶೇಷತ್ವಾತ್ ಬಾಹ್ಯ ವಾಯುವತ್,
(೪) ಮನ ಆತ್ಮಾನಭವತಿ—ಕರಣತ್ವಾತ್ ಬಾಹ್ಯೇಂದ್ರಿಯವತ್,
(೫) ಬುದ್ಧಿಃ ಆತ್ಮಾನಭವತಿ—ಕ್ಷಣಪರಿಣಾಮಿತ್ವಾತ್ ವಿದ್ಯುದ್ವತ್,

(೬) ಶೂನ್ಯ ಆತ್ಮಾನಭವತಿ—ಸಿಸ್ತತ್ವಾತ್ ಖಪುಷ್ಪವತ್. ಇತ್ಯಾದಿ ಅನುಮಾನ ರೂಪಯುಕ್ತಿಯಿಂದಲೂ, ಮತ್ತು "ಅಶರೀರೋ ನಿರಿಂದ್ರಿಯೋಽಪ್ರಾಣೋಽಮನಾಸ್ಸಚ್ಚಿದಾನಂದಮಾತ್ರಃ" ಇಂತೆಂಬುವದಾದಿಯಾದ ಶೃತಿಯಿಂಡಲೂ, ದೇಹೇಂದ್ರಿಯ ಪ್ರಾಣಾದಿಗಳಿಗಿಂತ ಆತ್ಮನು ಭಿನ್ನನೆಂಬುದೇ ಸಿದ್ಧವಾಗುವದು. ಆದ್ದರಿಂದ ಆತ್ಮನು ದೇಹಾದಿ ಪಂಚ ಕೋಶಗಳಿಗೆ ಅತೀತನಾಗಿರುವನು.

(೨೫) ಶಂಕಾ;— "ಸವಾ ಏಷಪುರುಷೋನ್ನರಸಮಯಃ" ಇತ್ಯಾದಿ ಶೃತಿಯಿಂದ ಅನ್ನರಸಮಯವಾದ ದೇಹವು ಆತ್ಮನೆಂದು ಕೇಳ್ಬರುತ್ತಿದೆ. ಇದರಿಂದ ದೇಹಾದಿಗಳೇ ಆತ್ಮನಾಗಿದ್ದೀತು?

ಸಮಾಧಾನ:—ಹ್ಯಾಗು ಶೃತಿಯು ಅನ್ನರಸಮಯ ಪುರುಷನೆಂದು ಪೇಳಿರುವದು; ಹಾಗಾದರೂ ಅದಕ್ಕೆ ದೇಹವೇ ಆತ್ಮನೆಂದು ಪೇಳುವದರಲ್ಲಿ ತಾತ್ಪರ್ಯವಿಲ್ಲ;—ಗೌಣಾತ್ಮನ ವ್ಯಾವೃತ್ತಿಯಲ್ಲಿ ತಾತ್ಪರ್ಯ.

ಅಭಿಪ್ರಾಯವೇನೆಂದರೆ;—ಆತ್ಮನು ಮೂರು ಬಗೆಯಾಗಿ ಪೇಳಲ್ಪಡುವನು.

[೧] ಗೌಣಾತ್ಮಾ,
[೨] ಮಿಥ್ಯಾತ್ಮಾ,
[೩] ಮುಖ್ಯಾತ್ಮನೆಂದು,

(೧) ಪುತ್ರಾದಿಗಳನ್ನು ಗೌಣಾತ್ಮನೆನ್ನುವರು.

(೨) ಅನ್ನಮಯಾದಿ ಪಂಚ ಕೋಶಗಳನ್ನು ಮಿಥ್ಯಾತ್ಮವೆನ್ನುವರು.

(೩) ಸಾಕ್ಷಿಯು ಮುಖ್ಯಾತ್ಮನಾಗಿರುವದು. ಆ ಪುತ್ರಾದಿಗಳಲ್ಲಿ ಮೂಢರಿಗೆ ಆತ್ಮಬುದ್ಧಿಯುಂಟಾಗುವದು. ಅದರ ನಿವೃತ್ತಿಗೋಸುಗ, ಶೃತಿಯು ಅನ್ನರಸಮಯವಾದ ದೇಹವನ್ನು ಆತ್ಮನೆಂದು ಪೇಳಿರುವದು. ಪುನಃ ಸೋಪಾನ ಶೃತಿಗಳಿಂದ ಕ್ರಮವಾಗಿ, ಪಂಚ ಕೋಶಗಳಲ್ಲಿ ಆತ್ಮನೆಂಬ ಭ್ರಾಂತಿಯಂ ಬಿಡಿಸುತ್ತಾ, ಶಾಖಾಚಂದ್ರನ ನ್ಯಾಯದಿಂದ, ಅಥವಾ ಅರುಂಧತೀ ದರ್ಶನ ನ್ಯಾಯದಿಂದ ಶೇಷಶೃತಿಯು ಮುಖ್ಯ ಆತ್ಮನು ಸಾಕ್ಷೀಯೆಂದು ತೋರಿಸುವದು, ಆ ಸೋಪಾನ ಶೃತಿಗಳು ಯಾವವೆಂದರೆ;—

ಶೃ॥ ತಸ್ಮಾದ್ವಾ ಏತಸ್ಮಾದನ್ನರಸಮಯಾದನ್ಯೋಽಂತರಾತ್ಮಾ ಪ್ರಾಣಮಯಃ। ತಸ್ಮಾದ್ವಾ ಏತಸ್ಮಾತ್ಪ್ರಾಣಮಯಾದನ್ಯೋಽಂತರಾತ್ಮಾಮನೋಮಯಃ। ತಸ್ಮಾದ್ವಾ ಏತಸ್ಮಾ

ನ್ಯನೋಽಮಯಾ ದನ್ಯೋಽಂತರಾತ್ಮಾ ವಿಜ್ಞಾನಮಯಃ ।
ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾ ದನ್ಯೋಽಂತರಾತ್ಮಾ
ಆನಂದಮಯಃ । ಬ್ರಹ್ಮಪುಚ್ಛಂ ಪ್ರತಿಷ್ಠೇತಿ ॥

ಇವು ತೈತ್ತಿರೀಯದ್ವಿತೀಯಾಧ್ಯಾಯದ ವಾಕ್ಯಗಳು. ಇವುಗಳ ಅರ್ಥವೇನೆಂದರೆ;—

(೧) ಅದರಿಂದಲಾಗಲೀ ಅಥವಾ ಇದರಿಂದಲಾಗಲೀ ಅನ್ನ ರಸಮಯವಾದ ದೇಹಕ್ಕಿಂತ ಅನ್ಯನಾದ ಅಂತರಾತ್ಮನು ಪ್ರಾಣಮಯನು.

(೨) ಅದರಿಂದಲಾಗಲೀ ಅಥವಾ ಇದರಿಂದಲಾಗಲೀ ಪ್ರಾಣಮಯದಿಂದನ್ಯನಾದ ಅಂತರಾತ್ಮನು ಮನೋಮಯನು.

(೩) ಅದರಿಂದಲಾಗಲೀ ಅಥವಾ ಇದರಿಂದಲಾಗಲೀ ಮನೋಮಯದಿಂದನ್ಯನಾದ ಅಂತರಾತ್ಮನು ವಿಜ್ಞಾನಮಯನು.

(೪) "ತಸ್ಮಾತ್" ಅಂದರೆ, ತನ್ನಿಂದಲೂ, "ಏತಸ್ಮಾತ್" ಅಂದರೆ, ಬ್ರಹ್ಮದಿಂದಲೂ, ಹಾಗೆಯೇ ವಿಜ್ಞಾನಮಯದಿಂದಲೂ 'ಅನ್ಯ' ಅಂದರೆ, ಅಪರ ಅಂತರ, ಅಂದರೆ, ಸೂಕ್ಷ್ಮ ಆನಂದಮಯ ಆತ್ಮನಾಗಿರುವನು. ಹೀಗೆ ಮೇಲಿನ ೧-೨-೩ ಸಂಖ್ಯೆಗಳಿಗೂ ತಿಳಿದುಕೊಳ್ಳಬೇಕು. ಮತ್ತು ಆ ಆನಂದಮಯಕ್ಕೆ ಪ್ರತಿಷ್ಠಾರೂಪದಿಂ ಬ್ರಹ್ಮವೇ ಶೇಷವಾಗಿರುವದು.

ಈ ರೀತಿಯಿಂದ ಪಂಚಕೋಶಗಳನ್ನು ಪಕ್ಷಿರೂಪವಾಗಿ ವರ್ಣಿಸಿ, ಅದರಲ್ಲಿ ಆತ್ಮಬುದ್ಧಿಯಿಂದ ಉಪಾಸನೆಯಂ ತೋರಿಸಿ, ಕಡೆಗೆ ಪಂಚ ಕೋಶದಿಂ ಪರವಾದ ಆತ್ಮನಂ ತೋರಿಸುವದರಲ್ಲಿ ಶೃತಿಗಳಿಗೆ ತಾತ್ಪರ್ಯ.

(೨೬) **ಶಂಕಾ;**—ಆದರೆ ಪಂಚ ಕೋಶಗಳಿಗಿಂತ ಬೇರೆಯಾಗಿ ಯಾವನಾದರು ಆತ್ಮನಿದ್ದರೆ, ಪಂಚ ಕೋಶಗಳಂತೆಯೇ ತೋರಬೇಕು? [ಅನುಭವಕ್ಕೆ ವಿಷಯನಾಗಬೇಕು] ಅಂದರೆ;—

**ಸಮಾಧಾನ;**—ಈ ಪಂಚ ಕೋಶಗಳು ಯಾವದರಿಂದ ತಿಳಿಯಲ್ಪಡುವದೋ, ಅದೇ ಆತ್ಮನು, ಅನುಭವಕ್ಕೆ ವಿಷಯನಾಗುವದಿಲ್ಲ; ಯಾಕೆಂದರೆ;— ಅವನು ತಾನೇ ಅನುಭವರೂಪನಾಗಿರುವನು. ಈ ವಿಷಯದಲ್ಲಿ "**ಯೇನ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್**" ಎಂಬ ಶೃತಿ ಪ್ರಮಾಣವಿರುವದು. ಇದಕ್ಕೆ ಯಾವದರಿಂದ ಸರ್ವವೂ ತಿಳಿಯಲ್ಪಡುವದೋ, ಆ ಆತ್ಮನನ್ನು ಯಾವ ಕರಣದಿಂದ ಪುರುಷನು ತಿಳಿದುಕೊಂಡಾನು? ಯೆಂದರ್ಥ.

೧—ಈ ಪಂಚ ಕೋಶಗಳ ವಿವೇಕದಿಂದ ಪಂಚ ಕ್ಲೇಶಗಳಿಗೂ ನಿವೃತ್ತಿಯಾಗುವದು. ಆ ಪಂಚಕ್ಲೇಶಗಳ ಸ್ವರೂಪವನ್ನು ಮುಂದೆ ಹೇಳೇವು.

೨—ಈ ಪಂಚ ಕೋಶಗಳು ಮೂರು ಶರೀರದಲ್ಲಿ ಇರುತ್ತಿರುವವು. (೧) ಅನ್ನಮಯಕೋಶ, ಸ್ಥೂಲಶರೀರವಾಗಿರುವದು. (೨) ಪ್ರಾಣಮಯ-ಮನೋಮಯ-ವಿಜ್ಞಾನಮಯ ಈ ಮೂರು ಕೋಶಗಳು ಸೂಕ್ಷ್ಮಶರೀರದಲ್ಲಿರುವವು. (೩) ಆನಂದಮಯಕೋಶ, ಕಾರಣಶರೀರವಾಗಿರುವದು. ಆ ಪಂಚಕೋಶಾತ್ಮಕವಾದ ಮೂರು ಶರೀರಗಳು ಮೂರು ಅವಸ್ಥೆಗಳಲ್ಲಿ ವ್ಯಭಿಚರಿಸುವದ್ದರಿಂದ ಅನಿತ್ಯವಾಗಿರುವವು.

## ‖ ೧೩ ‖ ಆತ್ಮಾ ಅವಸ್ಥಾತ್ರಯ ಸಾಕ್ಷೀ:—

### —: ಅವಸ್ಥಾತ್ರಯ ವರ್ಣನೆ :—

(೨೭) ಪ್ರ—ಮೂರು ಅವಸ್ಥೆಗಳು ಯಾವವು ?

ಉ—(೧) ಜಾಗ್ರತ್ (೨) ಸ್ವಪ್ನ (೩) ಸುಷುಪ್ತಿ ಇವೇ ಮೂರು ಅವಸ್ಥೆಗಳು. [೧] ಜಾಗ್ರತ್:–ಕಾಲವಿಶೇಷದ ಹೆಸರು ಅವಸ್ಥೆಯೆನಿಸುವದು. ಎಲ್ಲಿ [ಯಾವಾಗ] ಬಾಹ್ಯೇಂದ್ರಿಯಗಳಿಂದ ಪದಾರ್ಥಗಳ ಉಪಲಬ್ಧಿಯಾಗುವದೋ, ಅದು ಜಾಗ್ರದವಸ್ಥೆ ಎನ್ನಲ್ಪಡುವದು. ಅದನ್ನು "**ಯತ್ರಾಯಂ ವ್ಯವಹಾರಃ ಸ್ಯಾದಿಂದ್ರಿಯೈರ್ಬಾಹ್ಯಚಾರಿಭಿಃ**" ಈ ವಾಕ್ಯದಲ್ಲಿ ಹೇಳಿರುವದು. ಇದರ ಸ್ಪಷ್ಟ ಭಾವಾರ್ಥವೇನಂದರೆ:—ಜಾಗ್ರತ್ತಿನ ವ್ಯವಹಾರವೆಲ್ಲವೂ ಚತುರ್ದಶ ತ್ರಿಪುಟಿಗಳಿಂದಾಗುವದು. ಮೂರು ಪುಟಗಳಿಗೆ ತ್ರಿಪುಟಿ ಎಂದು ಹೆಸರು. ಪುಟವೆಂಬ ಹೆಸರು ಅವಯವಕ್ಕಾಗುವದು. ಇಲ್ಲಿ

೧—ಅಧ್ಯಾತ್ಮ,
೨—ಅಧಿಭೂತ,
೩—ಅಧಿದೈವ, ಈಮೂರು ಅವಯವಗಳು ಸೇರಿ ತ್ರಿಪುಟಿಯಾಗಿರುವದು.

(೧) ಯಾವದು ಸಂಘಾತದಲ್ಲಿ ಇದ್ದುಕೊಂಡು ಜ್ಞಾನ ಕರ್ಮಗಳಿಗೆ ಸಾಧನವಾಗುವದೋ, ಅದು ಅಧ್ಯಾತ್ಮವೆನ್ನಲ್ಪಡುವದು. ಇಂಥಾದ್ದು ದಶ ಇಂದ್ರಿಯಗಳು, ನಾಲ್ಕು ಅಂತಃಕರಣಗಳು ಇರುವವು.

(೨) ಸಂಘಾತದಿಂದ ಭಿನ್ನವಾಗಿ, ಕರಣಗಳಿಗೆ ವಿಷಯವಾಗಿ, ಭೂತಗಳನ್ನಾಶ್ರೈಸಿರುವದು ಅಧಿಭೂತವೆನ್ನಲ್ಪಡುವದು. ಇಂಥಾದ್ದು ಶಬ್ದಾದಿ ವಿಷಯವೂ. ವಚನಾದಿ ವ್ಯಾಪಾರವೂ, ಮಂತವ್ಯ ಬೋದ್ಧವ್ಯಾದಿ ಪದಾರ್ಥಗಳೂ ಇರುವವು.

(೩) ಇಂದ್ರಿಯಾಂತಃಕರಣಗಳಿಗೆ ಅನುಗ್ರಾಹಕರಾದ ದಿಕ್-ವಾಯು-ಸೂರ್ಯಾದಿ ಚತುರ್ದಶ ದೇವತೆಗಳು ಅಧಿದೈವವೆನಿಸಿಕೊಳ್ಳುವರು. ಅವುಗಳಲ್ಲಿ,

೧—ಶ್ರೋತ್ರ —ಅಧ್ಯಾತ್ಮ,

೨—ಶಬ್ದ —ಅಧಿಭೂತ,

೩—ದಿಕ್ ಅಭಿಮಾನಿ

ದೇವತಾ —ಅಧಿದೈವ. ಈ ರೀತಿಯಿಂದ ಹದಿನಾಲ್ಕು ತ್ರಿಪುಟಿಗಳನ್ನು ತಿಳಿದುಕೊಳ್ಳಬೇಕು; ಆ ಜಾಗ್ರತ್ತಿನ ಅಭಿಮಾನಿ ವಿಶ್ವನಾಗಿರುವನು.

[೨] ಸ್ವಪ್ನ:—ಯಾವಾಗ ಮನೋಮಾತ್ರವಾದ ಅಂತರವಿಷಯಗಳ ಜ್ಞಾನವಾಗುವದೋ, ಆಗ ಸ್ವಪ್ನಾವಸ್ಥೆ ಎನಿಸಿಕೊಳ್ಳುವದು. ಅದನ್ನು "ಸ್ವಪ್ನಃಸಂಸ್ಕಾರಜೋಜ್ಞೇಯೋ ಮನೋಮಾತ್ರೈಕ ಹೇತುಕಃ" ಈ ವಾಕ್ಯದಲ್ಲಿ ಪೇಳಿರುವದು. ಇದರ ಅರ್ಥವೇನಂದರೆ;—ಸ್ವಪ್ನವು ಸಂಸ್ಕಾರಜನ್ಯವೆಂದು ತಿಳಿಯಬೇಬೇಕು, ಮನೋಮಾತ್ರ ಒಂದೇ ಅದರಲ್ಲಿ ಹೇತುವೆನಿಸುವದು. ತಾತ್ಪರ್ಯವೇನಂದರೆ;-ಸ್ವಪ್ನದಲ್ಲಿ ಎಲ್ಲಾ ತ್ರಿಪುಟಿಗಳು ಮನೋಮಯವಾಗಿರುವವು. ಈಶ್ವರ ರಚಿತವಲ್ಲ; ಆ ಸ್ವಪ್ನದ ಅಭಿಮಾನಿಗೆ ತೈಜಸನೆಂದು ಪೆಸರು.

[೩] ಸುಷುಪ್ತಿ:—ಅಹಂಕಾರಸಹಿತ ಸರ್ವತ್ರಿಪುಟಿಗಳು ವಿಲಯವಾಗಲು, ಅದಕ್ಕೆ ಸುಷುಪ್ತಿ ಎಂದು ಪೆಸರು. ಅದನ್ನು "ಸುಪ್ತೌ ವಿಲೀಯತೇ ಸರ್ವಂ" ಈ ವಾಕ್ಯದಲ್ಲಿ ಪೇಳಿರುವದು. ಆ ಸುಷುಪ್ತಿಯ ಅಭಿಮಾನಿಗೆ ಪ್ರಾಜ್ಞನೆಂದು ಪೆಸರು. ಈ ಅವಸ್ಥಾತ್ರಯಗಳು ತ್ರಿಗುಣಜನ್ಯವಾದ ಬುದ್ಧಿಯ ವೃತ್ತಿಯದಾಗಿರುವದ್ದರಿಂದ, ದೃಶ್ಯವಾಗಿ, ವ್ಯಭಿಚಾರಿಯಾಗಿರುವವು. ಎಂತೆಂದರೆ;—

ಶ್ಲೋ॥ ಸ್ವಪ್ನೋಜಾಗರಣೇಽಲೀಕಃ ಸ್ವಪ್ನೇಽಪಿ ಜಾಗರೇನಹಿ ।
ದ್ವಯಮೇವಲಯೇನಾಸ್ತಿ ಲಯೋಽಪಿಹ್ಯುಭಯೋರ್ನಚ॥

ಎಂದು ಪೇಳಿರುವರು. ಇದರ ಅರ್ಥವೇನಂದರೆ:—ಸ್ವಪ್ನವು ಜಾಗ್ರತ್ತಿನಲ್ಲಿ ಅಲೀಕವಾಗಿದೆ. ಅಂದರೆ; ಸುಳ್ಳಾಗಿರುವದು. ಮತ್ತು ಜಾಗ್ರತ್ ಸ್ವಪ್ನದಲ್ಲಿ ಇರುವದಿಲ್ಲ. ಇನ್ನು 'ದ್ವಯಂ' ಅಂದರೆ, ಜಾಗ್ರತ್ಸ್ವಪ್ನಗಳೆರಡು 'ಲಯೆ' ಅಂದರೆ;—ಸುಷುಪ್ತಿಯಲ್ಲಿ 'ನಾಸ್ತಿ' ಅಂದರೆ ಇಲ್ಲ. ಹಾಗೆ ಲಯಾವಸ್ಥೆಯೂ ಕೂಡ ಆ ಜಾಗ್ರತ್ಸ್ವಪ್ನಗಳೆರಡಲ್ಲಿ ಇಲ್ಲವೆಂದರ್ಥ.

## || ೧೫ || ಅನ್ವಯ ವ್ಯತಿರೇಕಸ್ವರೂಪ.

ಆದ್ದರಿಂದ ಈ ಮೂರು ಅವಸ್ಥೆಗಳು ವ್ಯತಿರೇಕವಾಗಿವೆ. ಮತ್ತು ಆ ಮೂರು ಅವಸ್ಥೆಗಳಿಗೆ ಸಾಕ್ಷಿಯಾದ ಆತ್ಮನು ಮೂರರಲ್ಲಿಯೂ ಅನ್ವಯನಾಗಿರುವನು. [ಇಲ್ಲಿ ವ್ಯತಿರೇಕವೆಂದರೆ ವ್ಯಾವೃತ್ತಿಗೂ, ಅನ್ವಯವೆಂದರೆ ಅನುವೃತ್ತಿಗೂ ಹೆಸರಾಗಿರುವದು.] ಈ ಮೂರು ಅವಸ್ಥೆಗಳ ವಿಶೇಷ ನಿರೂಪಣೆಯನ್ನು ಮುಂದೆ ಮಾಡುವೆವು. ಹ್ಯಾಗೆ ಮೂರು ಅವಸ್ಥೆಗಳು ವ್ಯತಿರೇಕವಾಗಿರುವವೋ, ಹಾಗೆ ಮೂರು ಅವಸ್ಥೆಗಳಲ್ಲಿರುವ ಪಂಚಕೋಶ ರೂಪವಾದ ಮೂರು ಶರೀರಗಳೂ ವ್ಯತಿರೇಕವಾಗಿವೆ. ಮತ್ತು ಆತ್ಮನು ಅನ್ವಯನಾಗಿರುವನು. ಸ್ವಪ್ನದಲ್ಲಿ ಸ್ಥೂಲದೇಹದ ಅಭಾನವೂ ಆತ್ಮನ ಭಾನವೂ, ಸುಷುಪ್ತಿಯಲ್ಲಿ ಲಿಂಗದೇಹದ ಅಭಾನವೂ ಆತ್ಮನ ಭಾನವೂ, ಸಮಾಧಿಯಲ್ಲಿ ಅಜ್ಞಾನರೂಪವಾದ ಕಾರಣ ದೇಹದ ಅಭಾನವೂ ನಿರಾವರಣ ರೂಪದಿಂದ ಆತ್ಮನ ಭಾನವೂ ಇರುವದು. ಆದ್ದರಿಂದ ಮೂರು ದೇಹಗಳು ವ್ಯತಿರೇಕವಾಗಿಯೂ, ಆತ್ಮನು ಸರ್ವತ್ರ ಅನ್ವಯನಾಗಿಯೂ ಇರುವನು. ಈ ಮಾತು ಗ್ರಂಥಾಂತರದಲ್ಲಿ "ಅಭಾನೇ ಸ್ಥೂಲದೇಹಸ್ಯ ಸ್ವಪ್ನೇಯದ್ಭಾನಮಾತ್ಮನಃ" ಇತ್ಯಾದಿ ವಾಕ್ಯಗಳಿಂದ ಪ್ರಸಿದ್ಧಪಡಿಸಿರುವದು.

ಅ—ಇಲ್ಲಿನ ಪರ್ಯಂತವೂ ದೇಹಾದಿಗಳಿಂ ಭಿನ್ನವಾದ ತತ್ವವಿಚಾರವಂ ಪೇಳಿ ಅದರಿಂದ ತಾದಾತ್ಮ್ಯಭ್ರಾಂತಿಯಂ ಪರಿಹರಿಸಿದರು. ಈಗ ಭೇದಭ್ರಾಂತಿಯ ನಿವೃತ್ತಿಗೋಸುಗ ಬ್ರಹ್ಮಾಭಿನ್ನತತ್ವದ ನಿರ್ಣಯವಂ ಮಾಡುತ್ತಾರೆ;—

## || ೧೬ || ಈಶ್ವರನ ಶರೀರಗಳು, ಕೋಶಗಳು.

ಜೀವನಿಗೆ ವ್ಯಷ್ಟಿ ಮೂರುಶರೀರಗಳು, ಪಂಚ ಕೋಶಗಳು ಇರುವಂತೆ ಈಶ್ವರನಿಗೂ ಸಮಷ್ಟಿ ಮೂರು ಶರೀರಗಳು, ಪಂಚ ಕೋಶಗಳು ಶಾಸ್ತ್ರಕಾರರು ಪೇಳಿರುವರು.

೧—ವಿರಾಟ್,

೨—ಸೂತ್ರಾತ್ಮಾ,

೩—ಅವ್ಯಾಕೃತ, ಇವು ಮೂರು ಈಶ್ವರನ ಶರೀರಗಳು, ಆ ಈಶ್ವರನಿಗೆ ಬ್ರಹ್ಮಾಂಡ ಅನ್ನಮಯಕೋಶವು. ಹಿರಣ್ಯಗರ್ಭನಲ್ಲಿರುವ ಜ್ಞಾನ, ಕ್ರಿಯಾ,

ಬಲರೂಪವಾದ ತ್ರಿವಿಧಶಕ್ತಿಗಳು, ತ್ರಿವಿಧ ಕೋಶವಾಗಿ ಸೂಕ್ಷ್ಮ ಶರೀರದಲ್ಲಿ ರುವವು. ಬಳಿಕ ಮಾಯಾ ಆನಂದಮಯಕೋಶವಾಗಿರುವದು.

೧—ಹಿಂದೆ ಜೀವನ ಕೋಶಗಳಲ್ಲಿ ಆತ್ಮ ಬುದ್ಧಿಯಿಂದ ವಾದಿಗಳು ಕಲಹವಂ ಮಾಡಿದಂತೆ, ಈಶ್ವರನ ಕೋಶಗಳಲ್ಲಿಯೂ ಪರಮಾತ್ಮ ಬುದ್ಧಿಯಂ ಮಾಡಿ ಕಲಹವಂ ಮಾಡುವರು.

ಒಬ್ಬನು ಅಂತರ್ಯಾಮಿಯೆಂದೂ, ಒಬ್ಬನು ನಿತ್ಯ ಜ್ಞಾನ ಇಚ್ಛಾಪ್ರಯತ್ನ ಉಳ್ಳವನೆಂದೂ, ಒಬ್ಬನು ಹಿರಣ್ಯಗರ್ಭನೆಂದೂ, ಒಬ್ಬನು ವಿರಾಟೆಂದೂ, ಒಬ್ಬನು ಪ್ರಜಾಪತಿಯೆಂದೂ, ಮತ್ತೊಬ್ಬನು ವಿಷ್ಣುವೆಂದೂ, ಇನ್ನೊಬ್ಬನು ತ್ರಿನೇತ್ರನೆಂದೂ, ಬೇರೊಬ್ಬನು ಗಣೇಶನೆಂದೂ ಇತ್ಯಾದಿಯಾಗಿ ಈಶ್ವರನ ಸ್ವರೂಪವನ್ನು ಪೇಳುವರು. ಅದೆಂತೆನೆ—"**ಅಂತರ್ಯಾಮಿಣಮಾರಭ್ಯ ಸ್ಥಾವರಾಂತೇಶವಾದಿನಃ**" ಎಂಬುವದರಿಂದ, ಅಂತರ್ಯಾಮಿ ಮೊದಲುಗೊಂಡು, ಸ್ಥಾವರಪರ್ಯಂತವಾಗಿ ಈಶ್ವರವಾದಿಗಳು ಉಂಟೆಂದು ತಿಳಿಯಬೇಕು.

## ॥ ೧೭ ॥ ಜೀವೇಶ್ವರರ ಅಭೇದ.

ಮತ್ತು ವ್ಯಷ್ಟಿ ಶರೀರ ಕೋಶಗಳಿಗಿಂತ ಜೀವಸಾಕ್ಷಿಯು ಬೇರೆ ಇರುವಂತೆ ಸಮಷ್ಟಿ ಶರೀರ ಕೋಶಗಳಿಗಿಂತ ಈಶ್ವರ ಸಾಕ್ಷಿಯೂ ಬೇರೆ ಇರುವದು. ಆದಕಾರಣ ಮುಂಜು ಇಷೀಕನ್ಯಾಯದಿಂದ ವ್ಯಷ್ಟಿಸಮಷ್ಟಿ ಉಪಾಧಿಗಳಿಂ ಚೇತನವನ್ನು ವಿವೇಚಸಗೈದು ಬೇರೆಯಾಗಿ ತಿಳಿಯಬೇಕು. ಮತ್ತು ಆ ಚೇತನಗಳಿಗೆ ಸದಾ ಅಭೇದವೆಂದರಿಯಬೇಕು. ಯಾಕೆಂದರೆ;—ಜೀವೇಶ್ವರರಿಗೆ ಉಪಾಧಿಯಿಂ ಭೇದವು ತೋಱುವದಲ್ಲದೆ ಪರಮಾರ್ಥವಾಗಿಲ್ಲ: ಅದನ್ನು

**ಶ್ಲೋ॥ ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ।**
**ಕಾರ್ಯ ಕಾರಣತಾಂ ಹಿತ್ವಾ ಪೂರ್ಣಬೋಧೋವಶಿಷ್ಯತೆ॥**

ಈ ರಹಸ್ಯೋಪನಿಷಚ್ಛ್ರುತಿಯಲ್ಲಿ ಪೇಳಿರುವದು ಏನೆಂದರೆ;—

೧—ಕಾರ್ಯೋಪಾಧಿಜೀವನು,

೨—ಕಾರಣೋಪಾಧಿ ಈಶ್ವರನು, ಕಾರ್ಯ ಕಾರಣಗಳೆರಡನ್ನು ಬಿಟ್ಟರೆ; ಪೂರ್ಣಬೋಧಸ್ವರೂಪವೇ ಅವಶೇಷವಾಗಿರುವದು. ಹ್ಯಾಗೆ ಘಟಮಠವೆಂಬ ಉಪಾಧಿಯಿಂದ ಘಟಾಕಾಶ, ಮಠಾಕಾಶವೆಂದು ಎರಡು ಪೇಳಲ್ಪಡುವದೋ,

ಘಟವುಠದ ದೃಷ್ಟಿಯಂ ಭಿಟ್ಟರೆ, ಆಕಾಶ ಸದಾ ಒಂದೇ ಇರುವದೋ, ಹಾಗೆ ಅಲ್ಪಮಹತ್ತೆಂಬ ಉಪಾಧಿದೃಷ್ಟಿಯಿದ ಜೀವ, ಈಶ್ವರನೆಂದು ಎರಡು ಪೇಳಲ್ಪಡುವದು. ಆ ಎರಡು ಉಪಾಧಿಯ ದೃಷ್ಟಿಗಳಂ ಬಿಟ್ಟರೆ, ಶುದ್ಧ ಚೇತನ ಸದಾ ಒಂದೆಯಾಗಿರುವದು. ಈ ಯುಕ್ತಿಯಿಂದ ಜೀವೇಶ್ವರರಿಗೆ ಅಭೇದವು ಪೇಳಲ್ಪಟ್ಟಿತು. ಅದನ್ನೇ ಈಗ ವೇದಗಳ ಮಹಾವಾಕ್ಯಗಳಿಂದ ನಿರೂಪಿಸುವರು.

|| ೧೮ || **ಮಹಾವಾಕ್ಯವಿಚಾರ:**—ನಾಲ್ಕು ವೇದಗಳಲ್ಲಿ ನಾಲ್ಕು ಮಹಾ ವಾಕ್ಯಗಳುಂಟು ;—→ [illegible] वाक्य ऐतरेयोपनिषद 3-1-1

(೧) ಪ್ರಜ್ಞಾನಮಾನಂದಂಬ್ರಹ್ಮ— ಇದು ಋಗ್ವೇದದ ವಾಕ್ಯವು.

(೨) ಅಹಂಬ್ರಹ್ಮಾಸ್ಮಿ—ಇದು ಯಜುರ್ವೇದದ ವಾಕ್ಯವು. अनुभव वाक्य 1-4-10. बृ. उ.

6-8-15 (೩) ತತ್ತ್ವಮಸಿ—ಇದು ಸಾಮವೇದದ ವಾಕ್ಯವು. उपदेश वाक्य - छां. उ.

(೪) ಅಯಮಾತ್ಮಾಬ್ರಹ್ಮ—ಇದು ಅಥರ್ವಣವೇದದ ವಾಕ್ಯವಾಗಿರುವದು. ಆ ಒಂದೊಂದು ವಾಕ್ಯದಲ್ಲಿ ಮೂರು ಮೂರು ಪದಗಳಿರುವವು. अनुसंधान वाक्य. मां. उ. (2)

೧—ಪ್ರಜ್ಞಾನಂ, ೨—ಆನಂದಂ, ೩—ಬ್ರಹ್ಮ, ಇವು ಮೂರು ಪದಗಳು ಪ್ರಥಮ ವಾಕ್ಯದ್ದಾಗಿರುವವು.

ದ್ವಿತೀಯ ವಾಕ್ಯದಲ್ಲಿ:—

೧—ಅಹಂ, ೨—ಬ್ರಹ್ಮ, ೩—ಅಸ್ಮಿ, ಈ ಮೂರು ಪದಗಳಿರುವವು.

ಹಾಗೆಯೇ ತೃತೀಯ ವಾಕ್ಯದಲ್ಲಿ: —

೧—ತತ್, ೨—ತ್ವಂ, ೩—ಅಸಿ, ಈ ಮೂರು ಪದಗಳಿರುವವು.

ಇನ್ನು ಚತುರ್ಥವಾಕ್ಯದಲ್ಲಿ:—

೧—ಅಯಂ, ೨—ಆತ್ಮಾ ೩—ಬ್ರಹ್ಮ, ಈ ಮೂರು ಪದಗಳಿರುವವು.

(೧) ಪ್ರಥಮ ವಾಕ್ಯದ ಮೂರು ಪದಗಳಲ್ಲಿ ಪ್ರಜ್ಞಾನ ಪದಕ್ಕೆ ವಾಚ್ಯಾರ್ಥ ಜೀವನಾಗಿರುವನು. ಬ್ರಹ್ಮಪದಕ್ಕೆ ವಾಚ್ಯಾರ್ಥ ಈಶ್ವರನೆ. ಶುದ್ಧ ಬ್ರಹ್ಮವಲ್ಲ; ಯಾಕೆಂದರೆ;—ಶುದ್ಧವು ಯಾವ ವಚನಕ್ಕೂ ವಾಚ್ಯಾರ್ಥವಾಗುವದಿಲ್ಲ; ಮತ್ತು ಆನಂದಪದವು ಜೀವನ ವಿಶೇಷಣವಾಗಿರುವದು. ಆದ್ದರಿಂದ ಆನಂದ ರೂಪವಾದ ಪ್ರಜ್ಞಾನವು ಬ್ರಹ್ಮವಾಗಿದೆ. ಇದು ವಾಕ್ಯದ ಅರ್ಥವು. ಬಳಿಕ

(೨) ಅಹಂಬ್ರಹ್ಮಾಸ್ಮಿ— ಈ ದ್ವಿತೀಯವಾಕ್ಯದ ಮೂರು ಪದಗಳಲ್ಲಿ ಅಹಂಪದದ ವಾಚ್ಯ ಜೀವನು, ಬ್ರಹ್ಮಪದದ ವಾಚ್ಯ ಈಶ್ವರನು. ಅಸ್ಮಿಪದವು

ಅಭೇದಸೂಚಕವಾಗಿರುವದು. ಅದಕ್ಕೆ ವಾಚ್ಯವಾಗಲೀ ಅಥವಾ ಲಕ್ಷ್ಯವಾಗಲೀ ಅರ್ಥಸಂಭವಿಸುವದಿಲ್ಲ; ಆದ್ದರಿಂದ ನಾನು ಬ್ರಹ್ಮವಾಗಿರುವೆನು. ಇದು ವಾಕ್ಯದ ಅರ್ಥವು. ಹೀಗೆಯೇ

(೩) ತತ್ತ್ವಮಸಿ— ಈ ತೃತೀಯ ವಾಕ್ಯದ ಮೂರು ಪದಗಳಲ್ಲಿ ತತ್ಪದದ ವಾಚ್ಯ ಈಶ್ವರನು, ತ್ವಂ ಪದದ ವಾಚ್ಯ ಜೀವನು, ಅಸಿಪದವು ಅಭೇದ ಸೂಚನಾರ್ಥವಾಗಿರುವದು. ಅಥವಾ ಅಸಿಪದಕ್ಕೆ ಯಾವ ಅರ್ಥವೂ ಇಲ್ಲ; ಇನ್ನು ಅಸಿಪದಕ್ಕೆ ಯಾರೋ, ಕೇವಲ ಶುದ್ಧ ಬ್ರಹ್ಮವೆಂದು ಅರ್ಥವಂ ಪೇಳಿದ್ದಾರೆ; ಅದು ಸಂಭವಿಸುವದಿಲ್ಲ; ಆ ಈಶ್ವರನು ನೀನಿದ್ದೀಯೆ. ಇದು ವಾಕ್ಯಾರ್ಥವು. ಇನ್ನು—

(೪) ಅಯಮಾತ್ಮಾಬ್ರಹ್ಮ—ಈ ಚತುರ್ಥವಾಕ್ಯದ ಮೂರು ಪದಗಳಲ್ಲಿ ಆತ್ಮಪದದ ವಾಚ್ಯ ಜೀವನು. ಬ್ರಹ್ಮಪದದ ವಾಚ್ಯ ಈಶ್ವರನು. ಅಯಂಪದವು ಜೀವನ ಲಕ್ಷ್ಯರೂಪದ ಅಪರೋಕ್ಷ ಬೋಧಕವಾಗಿರುವದು. ಈ ಆತ್ಮಾ ಬ್ರಹ್ಮವು. ಇದು ವಾಕ್ಯಾರ್ಥವು. ಈ ನಾಲ್ಕು ಮಹಾವಾಕ್ಯಗಳಲ್ಲಿ ಜೀವ ಈಶ್ವರರಿಗೆ ಅಭೇದವಂ ಪೇಳಿರುವದು. ಆ ನಾಲ್ಕು ವಾಕ್ಯಗಳಲ್ಲಿ 'ತತ್ತ್ವಮಸಿ' ಎಂಬುವದು ಉಪದೇಶವಾಕ್ಯವು. ಅದನ್ನು ಉದ್ದಾಲಕ ಋಷಿಯು ತನ್ನ ಪುತ್ರನಾದ ಶ್ವೇತಕೇತುವಂ ಕುರಿತು ಛಾಂದೋಗ್ಯೋಪನಿಷತ್ತಿನ ಷಷ್ಠಪ್ರಪಾಠಕ [ಆರನೆ ಅಧ್ಯಾಯ] ದಲ್ಲಿ ಜಗತ್ತಿನ ಕಾರಣ ಪರಮಾತ್ಮನೆಂದು ತೋರಿಸಿ, ಪುನಃ 'ತತ್ತ್ವಮಸಿ' ಅಂದನು. ಇದಕ್ಕೆ ಆ ಪರಮಾತ್ಮನು ನೀನಾಗಿದ್ದೀಯೆ ಎಂದರ್ಥ. ಹೀಗೆ ಈಶ್ವರಜೀವನಿಗೆ ಏಕತ್ವವನ್ನುಪದೇಶಿಸಿದನು. ಆದರೂ ಆ ಏಕತ್ವ ತತ್ ಮತ್ತು ತ್ವಂಪದದ ವಾಚ್ಯಾರ್ಥದಲ್ಲಿ ಸಂಭವಿಸುವದಿಲ್ಲ; ಆದಕಾರಣ ಲಕ್ಷಣೆಯಿಂದ ಏಕತ್ವವಂ ಪೇಳಿರುವನು. ಈ ಅರ್ಥವಂ ತಿಳಿಯಪಡಿಸಲೋಸುಗ, ತತ್, ತ್ವಂಪದಗಳ ವಾಚ್ಯರಾದ ಈಶ್ವರ, ಜೀವನಸ್ವರೂಪವನ್ನು ಪೇಳುವರು.

## ‖ ೧೯ ‖ ಈಶ್ವರ ಮತ್ತು ಜೀವನಸ್ವರೂಪ.

ಶುದ್ಧಸತ್ವಪ್ರಧಾನವಾದ ಮಾಯೆಯಲ್ಲಿ, ಚೇತನದ ಆಭಾಸವೂ, ಮಾಯೆಯ ಅಧಿಷ್ಠಾನ ಚೇತನವೂ ಸಹ ಸೇರಿ, ಈಶ್ವರನೆನಿಸಿಕೊಳ್ಳುವದು. [೧]. ಮಲಿನಸತ್ವಪ್ರಧಾನವಾದ ಅವಿದ್ಯೆಯಲ್ಲಿ ಚೇತನದ ಆಭಾಸವೂ, ಅವಿದ್ಯೆಯ ಅಧಿಷ್ಠಾನಚೇತನವೂ ಸಹ ಸೇರಿ, ಜೀವನೆನಿಸಿಕೊಳ್ಳುವದು. [೨].

ಹಾಗೂ ಅವಚ್ಛೇದವಾದದಲ್ಲಿ ಮಾಯಾವಿಶಿಷ್ಟ ಈಶ್ವರನು, ಅವಿದ್ಯಾ ವಿಶಿಷ್ಟ ಜೀವನೆಂದು ಹೇಳುವರು :— ವಾಚಸ್ಪತಿ ಮಿಶ್ರ

ಇನ್ನು ಪ್ರತಿಬಿಂಬವಾದದಲ್ಲಿ ಅಜ್ಞಾನದೊಳಗಣ ಪ್ರತಿಬಿಂಬಜೀವನು, ಬಿಂಬ ಈಶ್ವರನೆಂದು ಹೇಳುವರು. ಇತ್ಯಾದಿ ಈಶ್ವರಜೀವನ ಸ್ವರೂಪ ನಿರ್ಣಯದಲ್ಲಿ ಬಹುಳವಾಗಿ ವಾದವಿರುವದು. ಆದಾಗ್ಯೂ ಪೂಜ್ಯಪಾದರಾದ ಶ್ರೀ ಭಗವತ್ಪಾದರು, ಮತ್ತು ವಿದ್ಯಾರಣ್ಯಸ್ವಾಮಿಗಳು ಗ್ರಂಥಗಳಲ್ಲಿ ಆಭಾಸವಾದವನ್ನೇ ಬರೆದಿರುವರು. ಆದಕಾರಣ ಮೊದಲು ಹೇಳಿದ ಈಶ್ವರ, ಜೀವನಸ್ವರೂಪವನ್ನೇ ತಿಳಿಯತಕ್ಕದ್ದು.

ಅ—ಆ ಈಶ್ವರ ಮತ್ತು ಜೀವನಧರ್ಮವನ್ನು ಈಗ ಹೇಳುವರು :—

## ॥ ೨೦ ॥ ಈಶ್ವರ, ಜೀವನ ಧರ್ಮ.

(೧) ಆ ಈಶ್ವರನು ಸರ್ವಜ್ಞನು, ಸರ್ವಶಕ್ತನು, ವಿಭುವು, ಸರ್ವನಿಯಂತೃನು, ಸ್ವತಂತ್ರನು, ಪರೋಕ್ಷನು, ಮಾಯಾಸ್ವಾಧೀನವುಳ್ಳವನು, ಬಂಧಮೋಕ್ಷ ಭ್ರಾಂತಿರಹಿತನು, ಜಗತ್ಕರ್ತನು, ಮತ್ತು ಜೀವರಿಗೆ ಕರ್ಮಫಲಗಳ ದಾತನು, ಇತ್ಯಾದಿ ಧರ್ಮವುಳ್ಳವನು ‘ ಈಶ್ವರ ’ ನೆನ್ನಲ್ಪಡುವನು.

(೨) ಜೀವನು ಅಲ್ಪಜ್ಞನು, ಅಲ್ಪಶಕ್ತನು, ಪರಿಚ್ಛಿನ್ನನು, ನಿಯಮ್ಯನು, ಪರತಂತ್ರನು, ಪ್ರತ್ಯಕ್ಷನು, ಅವಿದ್ಯಾಮೋಹಿತನು, ಬಂಧ ಮೋಕ್ಷ ಭ್ರಾಂತಿಸಹಿತನು, ಶುಭಾಶುಭಕರ್ಮಕರ್ತನು ಮತ್ತು ಅದರ ಫಲಭೋಕ್ತನು. ಇತ್ಯಾದಿ ಧರ್ಮವುಳ್ಳವನು, ‘ ಜೀವ ’ ನೆನ್ನಲ್ಪಡುವನು.

ಅವರಿಬ್ಬರಿಗೆ ವಾಚ್ಯಾರ್ಥದಲ್ಲಿ ಏಕತ್ವವಾಗುವದಿಲ್ಲ; ಆದ್ದರಿಂದ ಮಹಾವಾಕ್ಯದ ಪದಗಳಲ್ಲಿ ಲಕ್ಷಣೆಯ ಅಂಗೀಕಾರವಿರುವದು.

**॥೨೧॥ ಮಹಾವಾಕ್ಯದ ಪದಗಳ ಲಕ್ಷಣೆಯನ್ನು ಬೋಧಿಸುವದಕ್ಕಾಗಿ ಪದದ ಶಕ್ತಿಯಂ ತೋರಿಸುವರು:—** ಪದದ ವೃತ್ತಿ ಎರಡು ಬಗೆಯಾಗಿರುವದು. ಒಂದು ಶಕ್ತಿ ವೃತ್ತಿ, ಮತ್ತೊಂದು ಲಕ್ಷಣಾವೃತ್ತಿಯೆಂದು. (ಯಾವ ಪದದಲ್ಲಿ ಯಾವ ಅರ್ಥವಂ ಬೋಧಿಸುವ ಸಾಮರ್ಥ್ಯವುಂಟೋ, ಅದು ಪದದ ಶಕ್ತಿ ಯೆನಿಸುವದು.) ಈ ವಿಷಯದಲ್ಲಿ ಕೆಲವರು ಈಶ್ವರನ ಇಚ್ಛಾರೂಪವನ್ನೂ, ಕೆಲವರು ಯೋಗತಾರೂಪವನ್ನೂ. ಕೆಲವರು ಭೇದಾಭೇದ ರೂಪ

ನೈಯಾಯಿಕ

ವೈಯಾಕರಣ    ಭಾಟ್ಟಮತವು (ಕುಮಾರಿಲ ಭಟ್ಟ)

ತಾದಾತ್ಮ್ಯವನ್ನೂ ಶಕ್ತಿಯೆಂದು ಗ್ರಹಿಸಿದ್ದಾರೆ ಆ ಸರ್ವ ಮತವೂ ವಿರುದ್ಧ ವಾದದ್ದು.

**॥ ೨೨ ॥ ಈಗ ಲಕ್ಷಣೆಯ ಬೀಜವನ್ನೂ, ಸ್ವರೂಪವನ್ನೂ ಸಹ ಹೇಳುವರು:—**(ವಕ್ತೃವಿನ ತಾತ್ಪರ್ಯದ ಅನುಪಪತ್ತಿಯು ಲಕ್ಷಣೆಗೆ ಬೀಜವೆನಿಸುವದು)(೧). (ಮತ್ತು ಶಕ್ಯ ಸಂಬಂಧವು ಲಕ್ಷಣೆಗೆ ಸ್ವರೂಪವೆನಿಸುವದು)(೨). ತಾತ್ಪರ್ಯವೇನಂದರೆ;—ಶಕ್ತಿ ವೃತ್ತಿಯಿಂದ ಯಾವ ಪದಾರ್ಥದ ಜ್ಞಾನವಾಗುವದೋ, ಅದು ಶಕ್ಯವೆನ್ನಲ್ಪಡುವದು. ಲಕ್ಷಣೆಯಿಂದ ಯಾವದರ ಜ್ಞಾನವಾಗುವದೋ, ಅದು ಲಕ್ಷ್ಯವೆನ್ನಲ್ಪಡುವದು. ಆ ಶಕ್ಯ, ಲಕ್ಷ್ಯವೆರಡರ ಸಂಬಂಧಕ್ಕೆ ಲಕ್ಷಣೆಯೆಂದು ಹೆಸರು ಆ ಲಕ್ಷಣೆಯು,

(೧) ಸೇ ಜಹಲ್ಲಕ್ಷಣಾ,

(೨) ಸೇ ಅಜಹಲ್ಲಕ್ಷಣಾ,

(೩) ಸೇ ಜಹದಜಹಲ್ಲಕ್ಷಣಾ, ಎಂದು ಮೂರು ಪ್ರಕಾರವಾಗಿರುವದು.

**(೧) ಜಹಲ್ಲಕ್ಷಣಾ:**—ಎಲ್ಲಿ ಸರ್ವ ವಾಕ್ಯಾರ್ಥಗಳ ತ್ಯಾಗದಿಂದ ಶಕ್ಯಸಂಬಂಧಿಗೆ ವಾಕ್ಯದಿಂದ ಬೋಧೆಯಾಗುವದೋ, ಅಲ್ಲಿ ಜಹಲ್ಲಕ್ಷಣೆ ಇರುವದು. ಎಂತೆಂದರೆ:—« **ಗಂಗಾಯಾಂ ಘೋಷಃ** " ಈ ವಾಕ್ಯದಲ್ಲಿ « ಗಂಗಾ » ಎಂದರೆ ದೇವನದಿಯ ಪ್ರವಾಹಕ್ಕೆ ಹೆಸರು; ಅದರಲ್ಲಿ ಗೋವಳರ ದೊಡ್ಡಿಯ ಸ್ಥಿತಿ ಸಂಭವಿಸುವದಿಲ್ಲ; ಆದ್ದರಿಂದ « ಶಕ್ಯ » ಅಂದರೆ, ವಾಚ್ಯಾರ್ಥವೆಲ್ಲವನ್ನು «ಜಹತ್" ಅಂದರೆ, ತ್ಯಾಗಮಾಡುವದ್ದರಿಂದ, ಅದರ ತೀರದಲ್ಲಿ ದೊಡ್ಡಿ ಇದೆ. ಇದು ಜಹಲ್ಲಕ್ಷಣೆಯಿಂದ ಬೋಧೆಯಾಗುವದು. ಹ್ಯಾಗೆಂದರೆ,—ಶಕ್ಯವು ಗಂಗಾ, ಮತ್ತು ಲಕ್ಷ್ಯವು ತೀರ, ಅವೆರಡಕ್ಕೂ ಸಂಬಂಧವಿರುವುದು. [ಜಹಲ್ಲಕ್ಷಣೆಗೆ ಒಂದು ಉದಾಹರಣೆ—ನೋಡುವದಕ್ಕೆ ಊರೇ ಒಂದಿತ್ತು, ಎಂಬಲ್ಲಿ ; ಊರನ್ನು ಬಿಟ್ಟು ಜನಗಳು ಬಂದಿದ್ದರೆಂದು ಜನಗಳಲ್ಲಿ ಲಕ್ಷ್ಯವಾಗುವದು].

**(೨) ಅಜಹಲ್ಲಕ್ಷಣಾ:**—ಎಲ್ಲಿ ಶಕ್ಯಾರ್ಥವು ಬಿಡದೆ ಶಕ್ಯಸಂಬಂಧಿಯ ಬೋಧೆಯಾಗುವದೋ, ಅಲ್ಲಿ ಅಜಹಲ್ಲಕ್ಷಣೆ ಇರುವದು. ಎಂತೆಂದರೆ;— « **ಶೋಣೋಧಾವತಿ** " ಇಲ್ಲಿ ಶೋಣವೆಂದರೆ ಕೆಂಪುಬಣ್ಣಕ್ಕೆ ಹೆಸರು. ಆ ಕೆಂಪು ಒಂದರಲ್ಲೇ ಧಾವನ ಸಂಭವಿಸುವದಿಲ್ಲ; ಆದ್ದರಿಂದ ಶೋಣಪದದ ಶಕ್ಯಾರ್ಥವನ್ನು « ಅಜಹತ್ " ಅಂದರೆ; ಬಿಡದೆ ಅದರ ಸಂಬಂಧಿಯಾದ ಅಶ್ವವು

ಧಾವನಮಾಡುವದು. ಇದು ಅಜಹಲ್ಲಕ್ಷಣೆಯಿಂದ ಬೋಧೆಯಾಗುವದು. ಇಲ್ಲಿ "ಕಾಕೇಭ್ಯೋದಧಿರಕ್ಷತಾಂ" ಇತ್ಯಾದಿ ಇನ್ನೂ ಬೇರೆ ಉದಾಹರಣೆಯನ್ನು ತಿಳಿದುಕೊಳ್ಳತಕ್ಕದ್ದು. [ಅಜಹಲ್ಲಕ್ಷಣೆಗೆ ಒಂದು ಉದಾಹರಣೆ—ಯುದ್ಧಕ್ಕೆ ಈಟಿಗಳು ನುಗ್ಗಿದ್ದವು. ಎಂಬಲ್ಲಿ ಈಟಿಗಳನ್ನೂ ತದ್ಧಾರಕರಾದ ಪುರುಷರನ್ನೂ ಗ್ರಹಿಸಿಕೊಳ್ಳಬೇಕು].

೧—ಈ ಎರಡು ಲಕ್ಷಣೆಯೂ ಮಹಾವಾಕ್ಯದಲ್ಲಿ ಸಂಭವಿಸುವದಿಲ್ಲ; ಯಾಕಂದರೆ:—ಜಹಲ್ಲಕ್ಷಣೆಯನ್ನಂಗೀಕರಿಸಿದರೆ, ತತ್ಪದದ ವಾಚ್ಯ ಈಶ್ವರ, ತ್ವಂಪದದ ವಾಚ್ಯ ಜೀವ, ಅವೆರಡಕ್ಕೂ ತ್ಯಾಗವಾದೀತು; ಇನ್ನು ಅವೆರಡರಲ್ಲೇ ಚೇತನ ಪ್ರವಿಷ್ಟವಾಗಿರುವದು. ಇದರಿಂದ ಬೇರೆ ಲಕ್ಷ್ಯವ್ಯಾವದೂ ಸಂಭವಿಸುವದಿಲ್ಲ; ಆದಕಾರಣ ಇಲ್ಲಿ ಜಹಲ್ಲಕ್ಷಣೆಯ ಅಂಗೀಕಾರವಿಲ್ಲ. ಬಳಿಕ

೨—ಅಜಹಲ್ಲಕ್ಷಣೆಯೂ ಇಲ್ಲಿ ಸಂಭವಿಸುವದಿಲ್ಲ; ಯಾಕಂದರೆ—ಅಜಹಲ್ಲಕ್ಷಣೆಯಲ್ಲಿ ವಾಚ್ಯದ ತ್ಯಾಗವಿಲ್ಲದ್ದರಿಂದ ಈಶ್ವರಜೀವರಲ್ಲಿ ವಿರೋಧ ತೊಲಗುವದಿಲ್ಲ. ಆದ್ದರಿಂದ ಪರಿಶೇಷವಾದ ಮೂರನೆ 'ಜಹದಜಹತ್' ಅಂದರೆ, ಭಾಗತ್ಯಾಗಲಕ್ಷಣೆಯನ್ನೇ ಮಹಾವಾಕ್ಯದಲ್ಲಿ ಅಂಗೀಕರಿಸಿರುವದು.

### (೩) ಭಾಗತ್ಯಾಗಲಕ್ಷಣಾ:—(ಜಹದಜಹಲ್ಲಕ್ಷಣಾ).

ಶ್ಲೋ|| ಏಕಾತ್ಮಕತ್ವಾಜ್ಜಹತೀ ನಸಂಭವೇ
ತ್ತಥಾಜಹಲ್ಲಕ್ಷಣತಾವಿರೋಧತಃ ||
ಸೋಽಯಂ ಪದಾರ್ಥಾವಿವಭಾಗಲಕ್ಷಣಾ
ಯುಜ್ಯೇತ ತತ್ತ್ವಂ ಪದಯೋರದೋಷತಃ ||

ಇದರ ಅರ್ಥ—ಪರಮಾತ್ಮ ಜೀವಾತ್ಮರಿಗೆ ಏಕಾತ್ಮಕತ್ವವಿರುವದರಿಂದ ಅರ್ಥಾತ್, ವಾಚ್ಯದಿಂ ಭಿನ್ನವಾದ ಲಕ್ಷ್ಯದ ಅಭಾವದಿಂದ ಜಹಲ್ಲಕ್ಷಣಾ ಸಂಭವಿಸುವದಿಲ್ಲ. ಹಾಗೆಯೇ, ವಾಚ್ಯದಲ್ಲಿ ವಿರೋಧವಿಳುವದ್ದರಿಂದ ಅಜಹಲ್ಲಕ್ಷಣೆಯೂ ಸಂಭವಿಸುವದಿಲ್ಲ. ಮತ್ತೇನೆಂದರೆ, 'ಅದೇ ಈ ಪದಾರ್ಥವು' ಎಂಬಂತೆ ದೋಷಾಭಾವದಿಂದ 'ಭಾಗಲಕ್ಷಣೆ' ಯೇ ಸಂಭವಿಸುವದು. ಅಭಿಪ್ರಾಯವೇನೆಂದರೆ—

ಒಬ್ಬಾನೊಬ್ಬನು ಕಾಶ್ಮೀರ ದೇಶದ ರಾಜನಾಗಿದ್ದು ಪುನಃ ಅವನು ಕಾಶಿಯಲ್ಲಿ ಹೋಗಿ, ಭಿಕ್ಷುವಾಗಿದ್ದರೆ, ಅವನನ್ನು ಯಾರೋ ಒಬ್ಬನು ನೋಡಿ, ತಿಳಿ

ಪದವನ್ನು ಇವನು ಯಾರೆಂದು ಕೇಳಲು ಅವನು “ ಸೋಽಯಂದೇವದತ್ತಃ ” ಎಂದನು. ಇಲ್ಲಿ ಸಃ—ಅಯಂ ಇವೆರಡು ಪದಕ್ಕೆ ವಾಚ್ಯವಾದ ಪರೋಕ್ಷದೇಶವೂ, ಅತೀತಕಾಲವೂ ಇವುಗಳಿಂದೊಡಗೂಡಿದ ರಾಜನಿಗೂ, ಮತ್ತು ಅಪರೋಕ್ಷದೇಶವೂ, ವರ್ತಮಾನಕಾಲವೂ ಇವುಗಳಿಂದೊಡಗೂಡಿದ ಭಿಕ್ಷುವಿಗೂ, ಏಕತ್ವವೆಂತೂ ಆಗುವದಿಲ್ಲ; ಆದಾಗ್ಯೂ ಪರೋಕ್ಷತ್ವ, ಅಪರೋಕ್ಷತ್ವಾದಿ ವಿರೋಧಾಂಶವಂ ಬಿಟ್ಟು, ಅವಿರೋಧಾಂಶವಾದ ದೇವತ್ತನ ಶರೀರವನ್ನು ವಿಭಾಗಲಕ್ಷಣೆಯಿಂದ ಅಂಗೀಕರಿಸಿದರೆ ಹ್ಯಾಗೆ ವಿರೋಧವಿಲ್ಲವೋ—

ಹಾಗೆ ತತ್ಪದದ ವಾಚ್ಯದಲ್ಲೂ, ತ್ವಂಪದದ ವಾಚ್ಯದಲ್ಲೂ, ಕಾಣ್ಬರುವ ವಿರೋಧೀ ಧರ್ಮವಾದ, ಸಾಭಾಸವಮಾಯೆಯೂ, ಮತ್ತು ಅವಿದ್ಯೆಯೂ ಸಹ ಬಿಟ್ಟು ಬಿಟ್ಟು, ವಿಭಾಗ ಲಕ್ಷಣೆಯಿಂದ ಚೇತನಮಾತ್ರವನ್ನಂಗೀಕರಿಸಿದರೆ; ವಿರೋಧವಿಲ್ಲ; ಹಾಗಲ್ಲದೆ ಮಹಾವಾಕ್ಯದ ಒಂದು ಪದದಲ್ಲಿ ಲಕ್ಷಣೆಯನ್ನಂಗೀಕರಿಸಿ ಉಳಿದ ಪದದಲ್ಲಿ ಅಂಗೀಕರಿಸದೆ ಇದ್ದರೆ, ಪುರುಷಾರ್ಥ ಸಿದ್ಧಿಯಾಗುವದಿಲ್ಲ; ಅದ್ದರಿಂದ ಎರಡು ಪದಗಳಲ್ಲೂ ಅಂಗೀಕರಿಸಿದರೆ, ಸಿದ್ಧಿಯಾಗುವದು. ಮತ್ತು ಮಹಾವಾಕ್ಯದಲ್ಲಿ ಸಾಮಾನಾಧಿಕರಣ್ಯಾದಿ ತ್ರಿವಿಧ ಸಂಬಂಧವುಂಟು; ಅದೆಂತೆಂದರೆ;—

## ||೨೪|| ಸಂಬಂಧತ್ರಯ ವರ್ಣನೆ.

ಶ್ಲೋ|| “ ಸಾಮಾನಾಧಿಕರಣ್ಯಂ ತದನು ವಿಶೇಷಣ ವಿಶೇಷ್ಯತಾ
ಚೇತಿ | ಅಥಲಕ್ಷ್ಯಲಕ್ಷಕತ್ವಂ ಭವತಿ ಪದಾರ್ಥಾನಾಂಚ
ಸಂಬಂಧ ಇತಿ ”

ಇದರ ಅರ್ಥವೇನೆಂದರೆ;—ತತ್ವಂ ಪದಗಳಿಗೆ ಸಾಮಾನಾಧಿಕರಣ್ಯಭಾವ ಸಂಬಂಧವಿರುವದು. ಅದರ ಬಳಿಕ, ಪದಗಳ ಅರ್ಥಗಳಿಗೆ ವಿಶೇಷಣ ವಿಶೇಷ್ಯಭಾವ ಸಂಬಂಧವಿರುವದು. ಅದರ ಬಳಿಕ ವಿರೋಧಾಂಶತ್ಯಾಗ ಪೂರ್ವಕ ವರ್ತನದಿಂದ ಪದಪದಾರ್ಥಗಳಿಗೆ ಲಕ್ಷ್ಯಲಕ್ಷಣಭಾವ ಸಂಬಂಧವಿರುವದು.

(೧) ಭಿನ್ನ ಪ್ರವೃತ್ತಿ ನಿಮಿತ್ತ ಉಳ್ಳಪದಗಳಿಗೆ ಏಕಾರ್ಥನಿಷ್ಠತ್ವವು ಸಾಮಾನಾಧಿಕರಣ್ಯವೆನ್ನಲ್ಪಡುವದು. ಅಥವಾ, ಸಮಾನ ವಿಭಕ್ತಿಯುಳ್ಳ ಪದಗಳಿಗೆ ತಾತ್ಪರ್ಯದಿಂದ ಏಕ ಅರ್ಥದಲ್ಲಿ ಪರಿಅವಸಾನವಾಗುವದಕ್ಕೆ ಸಾಮಾನಾಧಿಕರಣ್ಯವೆಂದು ಹೆಸರು. (೨) ಇನ್ನು ಪರಸ್ಪರ ಭೇದವ್ಯಾವರ್ತಕತೆಯಿಂದ ಪದಗಳ

ಅರ್ಥಕ್ಕೆ ಇರುವ ಸಂಬಂಧವು ವಿಶೇಷಣವಿಶೇಷ್ಯಭಾವ ಸಂಬಂಧವೆನ್ನಲ್ಪಡುವದು. ಅದು ತತ್ತ್ವಂ-ತ್ವಂತತ್-ಅಹಂಬ್ರಹ್ಮ-ಬ್ರಹ್ಮ ಅಹಂ-ಪ್ರಜ್ಞಾನಂಬ್ರಹ್ಮ-ಬ್ರಹ್ಮ ಪ್ರಜ್ಞಾನಂ-ಮತ್ತು-ಆತ್ಮಾಬ್ರಹ್ಮ-ಬ್ರಹ್ಮಆತ್ಮಾ-ಈರೀತಿಯಾಗಿ ಪರೋಕ್ಷ ಪರಿಚ್ಛಿನ್ನತ್ವದ ವ್ಯಾವೃತ್ತಿಯಿಂದ ಓತಪ್ರೋತವು, ಮಹಾವಾಕ್ಯಗಳಲ್ಲಿ ಉಂಟಾಗುವದು. (೩) ವಿರೋಧಾಂಶತ್ಯಾಗವಾಗಿ ಲಕ್ಷಣೆಯಿಂದ ಲಕ್ಷ್ಯದಲ್ಲಿ ಸಂಬಧಪಡುವದಕ್ಕೆ ಲಕ್ಷ್ಯಲಕ್ಷಣಭಾವ ಸಂಬಂಧವೆನ್ನುವರು. ಆ ಲಕ್ಷಣದಿಂದ ಅಖಂಡಾರ್ಥಜ್ಞಾನವಾಗುವದು. ಅದೇ ವಿದ್ವಾಂಸುಗಳಿಂದ ಸಮ್ಮತಿಸಲ್ಪಟ್ಟಿರುವದು. ಎಂತೆಂದರೆ;—

ಶ್ಲೋ|| ಸಂಸರ್ಗೋವಾ ವಿಶಿಷ್ಟೋವಾ ವಾಕ್ಯಾರ್ಥೋನಾತ್ರ
ಸಮ್ಮತಃ || ಅಖಂಡೈಕರಸತ್ವೇನ ವಾಕ್ಯಾರ್ಥೋ
ವಿದುಷಾಂ ಮತಃ ||

ಎಂದು ಪೇಳಿರುವದು. ಇದರ ಅರ್ಥವೇನಂದರೆ;—ಸಂಸರ್ಗವಾಗಲೀ ಅಥವಾ ವಿಶಿಷ್ಟವಾಗಲೀ ವಾಕ್ಯದ ಅರ್ಥವು ಇಲ್ಲಿ ಸಮ್ಮತವಿಲ್ಲ; ಮತ್ತೇನಂದರೆ; ಅಖಂಡ ಏಕರಸತ್ವದಿಂದಲೇ ವಾಕ್ಯಾರ್ಥವನ್ನು ವಿದ್ವಾಂಸುಗಳು ಅಂಗೀಕರಿಸಿರುವರು.

ಶಂಕಾ:—ಮಹಾವಾಕ್ಯದಿಂದ ಅಖಂಡಾರ್ಥದ ಜ್ಞಾನ ಉಂಟಾಗುವದಿಲ್ಲ; ಯಾಕಂದರೆ—ಮಹಾವಾಕ್ಯದಲ್ಲಿ ಲಕ್ಷಣೆಯನ್ನಂಗೀಕರಿಸಿದರೆ, ಅಸಂಗತ್ವಕ್ಕೆ ಹಾನಿಯಾಗುವದು; ಅಂಗೀಕರಿಸದೆ ಹೋದರೆ, ಲಕ್ಷ್ಯದ ಜ್ಞಾನ ಸಂಭವಿಸುವದಿಲ್ಲ;

ಸಮಾಧಾನ:—ಚೇತನಕ್ಕೆ ಉಪಾಧಿಯೊಡನೆ ಮುಖ್ಯಸಂಬಂಧವಿಲ್ಲದಿದ್ದಾಗ್ಯೂ ಕಲ್ಪಿತತಾದಾತ್ಮ್ಯ ಸಂಬಂಧವು ಸ್ವಪ್ನಪದಾರ್ಥಗಳೊಡನೆ ಸ್ವಪ್ನದ್ರಷ್ಟನಂತೆ ಸಂಭವಿಸುವದು. ಆದಕಾರಣ ಪರಮಾರ್ಥವಾಗಿ, ಅಸಂಗತ್ವಕ್ಕೂ ಹಾನಿಯಿಲ್ಲ; ಮತ್ತು ಲಕ್ಷಣೆಯ ಸಂಭವದಿಂದ ಲಕ್ಷ್ಯದ ಜ್ಞಾನವೂ ಸಂಭವಿಸುವದು.

ಅ|| ಇಲ್ಲಿಯವರಿವಿಗೂ ಬ್ರಹ್ಮಾಭಿನ್ನತತ್ವದ ವಿಚಾರವಂ ಪೇಳಿ, ಅದರಿಂದ ಭೇದಭ್ರಾಂತಿಗೆ ಪರಿಹಾರವಂ ತೋರಿಸಿದರು.

ಈ ಪ್ರಕಾರವಾಗಿ ಗುರುಮುಖದಿಂದ ಪರಮತತ್ವವನ್ನು ಜಿಜ್ಞಾಸುವು ಕೇಳಿ, ಅದನ್ನು ಪುನಃಪುನಃ ವಿಚಾರಿಸಿ, ಆ ತತ್ವವನ್ನು ನಿದಿಧ್ಯಾಸನಗೈದನು.

ಯಾತಕೆಂದರೆ:—ನಿದಿಧ್ಯಾಸನವಿನಃ ಅವಿದ್ಯೆಯ ಸೂಕ್ಷ್ಮಸಂಸ್ಕಾರರೂಪವಾದ ವಿಪರೀತಭಾವನೆಯು ನಿವೃತ್ತಿಯಾಗುವದಿಲ್ಲ. ಅದೆಂತೆಂದರೆ;—"ನಿದಿಧ್ಯಾಸನಶೂನ್ಯಸ್ಯ ನಾಸ್ತ್ಯವಿದ್ಯಾಪರಿಕ್ಷಯಃ" ಎಂಬುವದರಿಂದ ವಿಜಾತೀಯ ವೃತ್ತಿಗಳ ತಿರಸ್ಕಾರಪೂರ್ವಕ ಸಜಾತೀಯವೃತ್ತಿಯ ಪ್ರವಾಹವೇ, ನಿದಿಧ್ಯಾಸನವೆನಿಸಿಕೊಳ್ಳುವದು. ಪ್ರಮಾಣ—ಸಂಶಯ—ವಿಕಲ್ಪಾದಿ ವೃತ್ತಿಗಳಿಗೆ ವಿಜಾತೀಯ ವೃತ್ತಿಯೆಂದು ಹೆಸರು. ಮತ್ತು ಬ್ರಹ್ಮಾಕಾರವೃತ್ತಿಯ ಆ ವೃತ್ತಿಗೆ ಸಜಾತೀಯ ವೃತ್ತಿಯ ಪ್ರವಾಹವೆಂದು ಹೆಸರು. ಹೀಗೆ ವಿಚಾರದಿಂದಲೂ, ನಿದಿಧ್ಯಾಸನದಿಂದಲೂ, ತತ್ವಸಾಕ್ಷಾತ್ಕಾರವಂ ಪಡೆದು ಪೂರ್ವದೊಳ್ ಪೇಳಿದ ಶಿಷ್ಯನು ಕೃತಾರ್ಥನಾದನು.

(೪) ಶ್ರವಣ—ಮನನ-ನಿದಿಧ್ಯಾಸನಗಳ ವಿಶೇಷಸ್ವರೂಪವನ್ನು ಮುಂದೆ ನಿರೂಪಿಸೇವು.

ಇನ್ನು ನಿದಿಧ್ಯಾಸನವಂ ಮಾಡುತ್ತಿರುವ ವಿದ್ವಾಂಸ ಯಾವತತ್ವವಂ ಪೊಂದುವನೋ, ಆ ನಿತ್ಯಪರಬ್ರಹ್ಮಸ್ವರೂಪವು ನಾನೇಯಾಗಿರುವೆನು. ಇದು ಎರಡನೆ ಶ್ಲೋಕದ ಅರ್ಥ. ||೨||

ಅ|| ಹಿಂದೆ ಎರಡನೇ ಶ್ಲೋಕದಲ್ಲಿ ತತ್ವಜ್ಞಾನದ ಸಾಧನ ವಿಚಾರವನ್ನು ಸಾಂಗವಾಗಿ ನಿರೂಪಿಸಿದರು. ಈಗ ಈ ಮುಂದಣ ಮೂರನೇ ಶ್ಲೋಕದಲ್ಲಿ ಜ್ಞೇಯಬ್ರಹ್ಮದ ಸ್ವರೂಪವನ್ನೂ ಅದರ ಅವಗಮಕ ವೃತ್ತಿಯನ್ನೂ ಸಹಾ ತೋರಿಸುವರು.

## || ೩೪ || ಜ್ಞೇಯಬ್ರಹ್ಮಸ್ವರೂಪ ವಿಚಾರ.

—|| ಯದಾನಂದೇತಿ ||—

ಮೂ—ಯದಾನಂದರೂಪಂ ಪ್ರಕಾಶಸ್ವರೂಪಂ
ನಿರಸ್ತಪ್ರಪಂಚಂ ಪರಿಚ್ಛೇದಶೂನ್ಯಂ ||
ಅಹಂಬ್ರಹ್ಮವೃತ್ತ್ಯೇಕಗಮ್ಯಂ ತುರೀಯಂ
ಪರಂಬ್ರಹ್ಮನಿತ್ಯಂ ತದೇವಾಹಮಸ್ಮಿ || ೩ ||

ಯಾವದು ಆನಂದರೂಪವೋ, ಪ್ರಕಾಶಸ್ವರೂಪವೋ, ನಿರಸ್ತ ಪ್ರಪಂಚವುಳ್ಳದ್ದೋ, ಪರಿಚ್ಛೇದದಿಂ ಶೂನ್ಯವಾಗಿರುವದೋ, ಮತ್ತು ಅಹಂ ಬ್ರಹ್ಮವೆಂಬ

ಏಕವೃತ್ತಿಯಿಂದ ಗಮ್ಯವಾಗತಕ್ಕದ್ದೋ, ಇನ್ನು ತುರೀಯವೆನಿಸಿಕೊಳ್ಳುವದೋ, ಆ ನಿತ್ಯಪರಬ್ರಹ್ಮವು ನಾನಾಗಿರುವೆನು. ಇದು ಪದದ ಅರ್ಥ:—

ಟೀಕಾ:—ಯಾವ ಬ್ರಹ್ಮವು ಆನಂದರೂಪವಾಗಿರುವದೋ, ಅಂದರೆ, ನಿರತಿಶಯ ಸುಖರೂಪವಾಗಿರುವದು, ಎಂದರ್ಥ.

## [೧] ಬ್ರಹ್ಮವು ಆನಂದ ಸ್ವರೂಪ.

ಶಂಕಾ:—ವಿಷಯಗಳಲ್ಲಿಯೇ ಪ್ರತ್ಯಕ್ಷವಾಗಿ ಸುಖವು ತೋರುತ್ತಿರುವದು. ಮತ್ತು ಬ್ರಹ್ಮವು ಆನಂದರೂಪವಾಗಿವೆಯೆಂದರೆ—ಇದರಲ್ಲಿ ಯಾವ ಪ್ರಮಾಣವೂ ಇಲ್ಲ?

ಸಮಾಧಾನ:—ಬ್ರಹ್ಮವೇ ಸುಖರೂಪವು. ವಿಷಯಗಳಲ್ಲಿ ಸುಖವಿಲ್ಲ; ಅದು ಜೀವನ್ಮುಕ್ತನಾದ ಜ್ಞಾನಿಗೆ ಸದಾ ಅನುಭೂತವಾಗಿರುವದು. ಮತ್ತು "ಯೋವೈ ಭೂಮಾ ತತ್ಸುಖಂ ನಾಲ್ಪೇಸುಖಮಸ್ತಿ (೧) ಆನಂದೋ ಬ್ರಹ್ಮೇತಿವ್ಯಜಾನಾತ್ (೨) ಆನಂದಂ ಬ್ರಹ್ಮಣೋವಿದ್ವಾನ್ ನಬಿಭೇತಿ ಕದಾಚನ (೩) ಏಷಹ್ಯೇವಾನಂದಯಾತಿ (೪) ಏಷೋಽಸ್ಯ ಪರಮ ಆನಂದಃ ರಸಂಹ್ಯೇವಾಯಂ ಲಬ್ಧ್ವಾನಂದೀಭವತಿ (೫) ಸ್ಮೃತಿ—ಯಂಲಬ್ಧ್ವಾಚಾಪರಂ ಲಾಭಂ ಮನ್ಯತೇನಾಧಿಕಂತತಃ (೬)" ಇತ್ಯಾದಿ ಶೃತಿಸ್ಮೃತಿಗಳು ಇದರಲ್ಲಿ ಪ್ರಮಾಣವಾಗಿರುವವು. ಇವುಗಳ ಅರ್ಥವೇನೆಂದರೆ;—

೧—"ಯೋಭೂಮಾ" ಅಂದರೆ, ಅಪರಿಚ್ಛಿನ್ನರೂಪವಾದ ಬ್ರಹ್ಮವೇ 'ವೈ' ಅಂದರೆ, ನಿಶ್ಚಯವಾಗಿ ಸುಖರೂಪವಾಗಿರುವದು. ಮತ್ತು 'ಅಲ್ಪೇ' ಅಂದರೆ; ಪರಿಚ್ಛಿನ್ನವಾದ ವಿಷಯಗಳಲ್ಲಿ 'ನಸುಖಂ' ಅಂದರೆ—ಸುಖವಿಲ್ಲ.

೨—ಆನಂದರೂಪವೇ ಬ್ರಹ್ಮ, ಹೀಗೆ ತಿಳಿಯತಕ್ಕದ್ದು.

೩—ಆನಂದರೂಪ ಬ್ರಹ್ಮವಂ ತಿಳಿದಂಥಾವನು ಯಾವದೊಂದು ಕಾಲದಲ್ಲಿಯೂ ಭಯಪಡುವದಿಲ್ಲ.

೪—ಈ ಪರಮಾತ್ಮನು ಜಗತ್ತಿಗೆ ಆನಂದವಂ ಕೊಡತಕ್ಕವನು.

೫—ಇದೇನೆ ವಿದ್ವಾನುವಿಗೆ ಪರಮ ಆನಂದವಾಗಿದೆ. ಮತ್ತು ಈ ವಿದ್ವಾನ್ ರಸರೂಪ ಬ್ರಹ್ಮವನ್ನೇ ಪಡೆದು ಆನಂದಿಸುತ್ತಿರುವನು. ಇದು ಶೃತಿಗಳ ಅರ್ಥವು.

೭—ಸ್ಮೃತಿಯ ಅರ್ಥವೇನಂದರೆ;—ಯೋಗಿಯು ಯಾವ ಬ್ರಹ್ಮಾನಂದವೆನಿಪ ಪರಮ ಲಾಭವಂ ಪೊಂದಿ, ಆದರಿಂದಧಿಕವಾದ ಮತ್ತೊಂದು ಲಾಭವಂ ಗ್ರಹಿಸನೋ, ಎಂದರ್ಥ.

ಶಂಕಾ ;—ಆದರೆ, ಆ ಬ್ರಹ್ಮಾನಂದವು ಸ್ವರ್ಗಸುಖದಂತೆ ಪರೋಕ್ಷವಾಗಿದ್ದೀತು ?

ಸಮಾಧಾನ :—ಬ್ರಹ್ಮವು ಸರ್ವರಿಗೂ ಆತ್ಮವಾಗಿರುವದ್ದರಿಂದ ನಿತ್ಯ ಅಪರೋಕ್ಷವಾಗಿದೆ. ಆದನ್ನು "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ" ಈ ಶೃತಿಯು ಸಾಕ್ಷಾದಪರೋಕ್ಷಬ್ರಹ್ಮವೆಂದು ಪ್ರಸಿದ್ಧಿಪಡಿಸಿರುವದು. ಆದ್ದರಿಂದ ಸುಖಪರೋಕ್ಷವಲ್ಲ ;

ಶಂಕಾ ;—ನಿತ್ಯಅಪರೋಕ್ಷ ಪ್ರತ್ಯಗಭಿನ್ನಬ್ರಹ್ಮವು ಸುಖರೂಪವಾಗಿದ್ದರೆ; ವಿಷಯಗಳಲ್ಲಿ ಪ್ರೇಮವೂ, ಮತ್ತು ಇಚ್ಛೆಯೂ ಆಗದೆ ಇರಬೇಕು.

ಸಮಾಧಾನ :—ವಿಷಯಗಳಲ್ಲಿ ಆಗುವ ಪ್ರೀತಿಯು ಆತ್ಮನಿಗೋಸುಗವೇ ಆಗುವದು. ವಿಷಯಗಳಲ್ಲಿ ಸ್ವತಃ ಪ್ರೇಮವಿಲ್ಲ ; ಆದ್ದರಿಂದ ಪರಮಪ್ರೇಮಕ್ಕೆ ಆಸ್ಪದವಾದವನು ಆತ್ಮನೆ. ಈ ಮಾತು ಯಾಜ್ಞ್ಯವಲ್ಕ್ಯ ಋಷಿಯು ಮೈತ್ರೇಯಿಯಂ ಕುರಿತು ಬೃಹದಾರಣ್ಯಕದೊಳ್ ನಾಲ್ಕನೆ ಅಧ್ಯಾಯದ ಚತುರ್ಥ ಬ್ರಾಹ್ಮಣದಲ್ಲಿ:—

ಬೃ. ೬. ೪-೫-೬ "ನವಾ ಅರೇಪತ್ಯುಃ ಕಾಮಾಯ ಪತಿಃಪ್ರಿಯೋಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋಭವತಿ" ಈ ವಾಕ್ಯ ಮೊದಲುಗೊಂಡು "ನವಾ ಅರೇಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತುಕಾಮಾಯ ಸರ್ವಂ ಪ್ರಿಯಂ ಭವತಿ" ಈ ವಾಕ್ಯದವರಿವಿಗೂ ಪೇಳಿರುವನು.

ಇದರ ಅರ್ಥವೇನಂದರೆ;—ಓಮೈತ್ರೇಯಿಯಾ ! 'ವೈ' ನಿಶ್ಚವಾಗಿ ಪತಿಯ ಕಾಮನೆಗೋಸುಗ ಪತಿಯು ಪ್ರಿಯವಾಗಿಲ್ಲ. ಮತ್ತೇನೆಂದರೆ, ತನ್ನ ಕಾಮನೆಗೋಸುಗ ಪತಿ ಪ್ರಿಯನಾಗಿರುವನು. ಹಾಗೆಯೇ ಜಾಯೆಯ ಕಾಮನೆಗೋಸುಗ, ಜಾಯಾ ಪ್ರಿಯವಾಗಿಲ್ಲ ; ಪುತ್ರನ ಕಾಮನೆಗೋಸುಗ ಪುತ್ರನು ಪ್ರಿಯವಾಗಿಲ್ಲ. ವಿತ್ತದ ಕಾಮನೆಗೋಸುಗ ವಿತ್ತವು ಪ್ರಿಯವಾಗಿಲ್ಲ. ಬ್ರಾಹ್ಮಣನ ಕಾಮನೆಗೋಸುಗ ಬ್ರಾಹ್ಮಣ ಪ್ರಿಯವಾಗಿಲ್ಲ; ಕ್ಷತ್ರಿಯನ ಕಾಮನೆಗೋಸುಗ

ಕ್ಷತ್ರಿಯ ಪ್ರಿಯವಾಗಿಲ್ಲ, ಲೋಕದ ಕಾಮನೆಗೋಸುಗ ಲೋಕವು ಪ್ರಿಯವಾಗಿಲ್ಲ. ದೇವನ ಕಾಮನೆಗೋಸುಗ ದೇವನು ಪ್ರಿಯವಾಗಿಲ್ಲ. ಭೂತಗಳ ಕಾಮನೆಗೋಸುಗ ಭೂತ ಪ್ರಿಯವಾಗಿಲ್ಲ; ಹೀಗೆ ಪೇಳಿ, ಅಂತ್ಯದಲ್ಲಿ ಸರ್ವದರ ಕಾಮನೆಗೋಸುಗ ಸರ್ವವೂ ಪ್ರಿಯವಾಗಿಲ್ಲ; ಮತ್ತೇನೆಂದರೆ;—ಆತ್ಮನ ಕಾಮನೆಗೋಸುಗವೇ ಸರ್ವವೂ ಪ್ರಿಯವಾಗಿರುವದು, ಎಂದು ಪೇಳಿರುವನು. ಆದ್ದರಿಂದ ಬಾಹ್ಯವಿಷಯಗಳಲ್ಲಿ ಸ್ವತಃ ಪ್ರಿಯತ್ವವಿಲ್ಲ; ಅಂದರೆ, ಯಾವ ಆತ್ಮನಿಗೋಸುಗ ಬಾಹ್ಯಪದಾರ್ಥಗಳು ಪ್ರಿಯವಾಗಿ ತೋರುವವೋ, ಆ ಆತ್ಮನೇ ಪರಮಪ್ರಿಯನಾಗಿರುವನು.

**ಶಂಕಾ**:—ಬಾಹ್ಯವಾದ ಪುತ್ರ ಧನಾದಿಗಳು ಸ್ವತಃ ಪ್ರಿಯವಲ್ಲದಿದ್ದರೂ, ದೇಹೇಂದ್ರಿಯಗಳು ಸ್ವತಃ ಪ್ರಿಯವಾಗಿದ್ದೀತು?

**ಸಮಾಧಾನ**:—ಹ್ಯಾಗೆ ವಿತ್ತಾದಿಗಳು ಸ್ವತಃ ಪ್ರಿಯವಲ್ಲವೋ, ಹಾಗೆ ದೇಹಾದಿಗಳೂ ಪ್ರಿಯವಲ್ಲ; ಮುಖ್ಯವಾಗಿ ಎಲ್ಲಕ್ಕಿಂತಲೂ, ಅಂತರನಾದ ಆತ್ಮನೇ ಪರಮ ಪ್ರಿಯನಾಗಿರುವನು. ಈ ವಿಷಯ

**ವಾ॥ ವಿತ್ತಾತ್ಪುತ್ರಃ ಪ್ರಿಯಃ ಪುತ್ರಾತ್ಪಿಂಡಃ ಪಿಂಡಾತ್ತಥೇಂದ್ರಿಯಂ ಇಂದ್ರಿಯಾಚ್ಚ ಪ್ರಿಯಃ ಪ್ರಾಣಃ ಪ್ರಾಣಾದಾತ್ಮಾ ಪ್ರಿಯಃಪರಃ ॥**

ಈ ವಾಕ್ಯಗಳಲ್ಲಿ ಪೇಳಿರುವದು. ಅರ್ಥವೇನಂದರೆ;—ವಿತ್ತದಿಂಪ್ರಿಯಪುತ್ರನು, ಪುತ್ರನಿಂ ಪ್ರಿಯಶರೀರವು, ಶರೀರಕ್ಕಿಂತ ಪ್ರಿಯ ಇಂದ್ರಿಯಗಳು, ಇಂದ್ರಿಯಗಳಿಗಿಂತ ಪ್ರಿಯ ಪ್ರಾಣವು, ಆ ಪ್ರಾಣಕ್ಕಿಂತ ಪ್ರಿಯ ಆತ್ಮನು. ಮತ್ತು

**ಶ್ರು॥ ಪ್ರೇಯಃಪುತ್ರಾತ್ ಪ್ರೇಯೋವಿತ್ತಾತ್ ಪ್ರೇಯೋನ್ಯಸ್ಮಾತ್ ಸಾರ್ವಸ್ಮಾದಂತರತರಂ ಯದಯಮಾತ್ಮಾ ॥**

ಈ ಶ್ರುತಿಯೂ ಕೂಡ, ಪುತ್ರ, ವಿತ್ತ ಮತ್ತು ಸರ್ವದೇಹಾದಿಗಳಿಗಿಂತ ಅಂತರತರನಾದ ಆತ್ಮನೇ ಪರಮಪ್ರಿಯನೆಂದು ಪೇಳಿರುವದು. ಎಂತೆಂದರೆ;—

(೧) ಮನುಷ್ಯನಿಗೆ ವ್ಯಾವಹಾರಿಕದಲ್ಲಿ ಎಲ್ಲಾ ಪದಾರ್ಥಗಳಿಗಿಂತ ದ್ರವ್ಯವು ಪ್ರಿಯವಾಗಿದೆ. ದ್ರವ್ಯಕ್ಕೋಸುಗ ಪುರುಷನು ದೇಶದಿಂ ದೇಶಾಂತರಕ್ಕೆ ಪೋಗಿ, ಅನೇಕ ನೀಚಕಾರ್ಯಗಳಂ ಮಾಡುವನು.

(೨) ಪುತ್ರನು ದುಷ್ಕಾರ್ಯದಿಂದ ರಾಜ (ಕಾರಾ) ಗೃಹದಲ್ಲಿ ಬಂಧಕ್ಕೆ ಸಿಕ್ಕಲು, ಆಗ ತಂದೆಯು ತಾನು ಬಹು ಪ್ರಯತ್ನದಿಂ ಸಂಪಾದಿಸಿದ ಧನವನ್ನಿತ್ತು ಬಿಡಿಸಿಕೊಳ್ಳುವನು. ಇದರಿಂದ ಹಣಕ್ಕಿಂತ ಪುತ್ರನು ಪ್ರಿಯನು.

(೩) ಯಾವಾಗಲಾದರು ದುರ್ಭಿಕ್ಷ [ಕ್ಷಾಮ] ಕಾಲ ಪ್ರಾಪ್ತವಾದರೆ, ಆಗ ಪುತ್ರನನ್ನಾದರೂ ಮಾರಿಬಿಟ್ಟು, ಶರೀರವಂ ಕಾಪಾಡಿಕೊಳ್ಳುವನು. ಇದರಿಂದ ಶರೀರಪ್ರಿಯವು.

(೪) ಯಾವನಾದರು ತನ್ನನ್ನು ಹೊಡೆಯುವದಕ್ಕೆ ಬಂದಾಗ್ಗೆ, ಇಂದ್ರಿಯಗಳನ್ನು ತಪ್ಪಿಸಿಕೊಂಡು, ನನ್ನ ಮೈಮೇಲೆ ಹೊಡಿ, ಕಣ್ಣು, ಕಿವಿ, ಮೂಗು ಮುಖಗಳಮೇಲೆ ಹೊಡೆಯಬೇಡವೆಂದು ಹೇಳುವನು. ಆದಕಾರಣ, ಶರೀರಕ್ಕಿಂತ ಇಂದ್ರಿಯಗಳು ಪ್ರಿಯವಾಗಿರುವವು.

(೫) ಯಾರೋ ಒಬ್ಬನು ಕೆಟ್ಟ ಕೆಲಸವಂ ಮಾಡಿದ್ದರಿಂದ ರಾಜನು ಇವನ ಪ್ರಾಣವನ್ನು ತೆಗಿ, ಯೆಂದು ಸೇವಕರಿಗೆ ಅಪ್ಪಣೆಯಂ ಮಾಡಲು, ಆಗ ಅವನು ನನ್ನ ಧನ, ಪುತ್ರ, ಪತ್ನಿ ಮನೆ ಮಠಗಳೆಲ್ಲವನ್ನು ನನ್ನ ಅಪರಾಧಕ್ಕೆ ತೆಗದುಕೊ, ಪ್ರಾಣಮಾತ್ರ ತೆಗೆಯಬ್ಯಾಡ, ಎನ್ನುವನು. ಹಾಗಾದರೂ ರಾಜನ ಅಪ್ಪಣೆ ಪ್ರಾಣ ತೆಗೆಯುವದರಲ್ಲೇ ಕಠಿನವಾಗಿದ್ದರೆ; ಪುನಃ ಅವನು ನನ್ನ ಕಿವಿಯನ್ನು ಕತ್ತರಿಸಿಕೊ, ನನ್ನ ಮೂಗನ್ನು ಕೊಯಿದುಕೊ, ನನ್ನ ಕೈಕಾಲುಗಳನ್ನಾದರೂ ಕಡಿದುಕೊ, ಮುಖ್ಯವಾಗಿ ಪ್ರಾಣಮಾತ್ರ ತೆಗೆಯಬ್ಯಾಡ ಎನ್ನುವನು. ಆದ್ದರಿಂದ ಇಂದ್ರಿಯಗಳಿಗಿಂತ ಪ್ರಾಣ ಪ್ರಿಯವಾಗಿರುವದು.

(೬) ಯಾವಾಗಲಾದರೂ ಅಧಿಕವಾದ ವ್ಯಾಧಿಯಿಂದ, ನೋವು ಸಂಕಟಗಳಾಗುತ್ತಿದ್ದರೆ, ಆಗ ನನ್ನ ಪ್ರಾಣಹೋದರೆ ಸುಖಿಯಾದೇನು, ಎಂಬನು. ಇದರಿಂದ ಪ್ರಾಣಕ್ಕಿಂತಲೂ ಆತ್ಮನು ಪ್ರಿಯನು. ಆದಕಾರಣ ಆತ್ಮನಿಂ ಭಿನ್ನವಾದ ಯಾವ ಪದಾರ್ಥವೂ ಪ್ರೇಮಕ್ಕೆ ವಿಷಯವಲ್ಲ. ಮತ್ತೇನೇಂದರೆ;— ಬ್ರಹ್ಮಸ್ವರೂಪನಾದಾತ್ಮನೇ ಪರಮಪ್ರೇಮಕ್ಕೆ ಆಸ್ಪದನಾಗಿರುವನು. ಹೀಗೆ ತಿಳಿದು ವಿಷಯವಾದ ಪದಾರ್ಥಗಳನ್ನು ಪೇಕ್ಷಿಸಬೇಕೆಂಬುದು ಪೂರ್ವೋಕ್ತಶೃತಿಗಳ ಅಭಿಪ್ರಾಯ—ಮತ್ತು

(೧)—ಪೂರ್ವದಲ್ಲಿ ಆತ್ಮನು ಸುಖರೂಪನಾಗಿದ್ದರೆ—ವಿಷಯಗಳಲ್ಲಿ ಇಚ್ಛೆ ಆಗದೆ ಇರಬೇಕೆಂದು ಮಾಡಿದ ||೩|| ಮೂರನೇ ಶಂಕೆಗೆ ಉತ್ತರವೇನಂ

ದರೆ;—ಆತ್ಮಜ್ಞಾನರಹಿತರಾದ ಮೂಢರಿಗೆ ವಿಷಯಗಳಲ್ಲಿ ಇಚ್ಛೆಯಾಗುವದು. ಬಳಿಕ ಆ ವಿಷಯಗಳಲ್ಲಿ ಸುಖದ ತೋರುವಿಕೆಯು ಭ್ರಾಂತಿಯಿಂದಾಗುವದು. ಇನ್ನು ಅದರ ನಿಮಿತ್ತವಾಗಿ ಅನೇಕ ಪ್ರಯತ್ನವಂ ಮಾಡುತ್ತಲೂ, ಪುನಃ ಅದಕ್ಕಾಗಿಯೇ ಸದಾ ಭ್ರಮೆಗೊಂಡು ಅಲೆದಾಡುತ್ತಲೂ ಇರುವರು. ಮತ್ತು ಜ್ಞಾನವಂತನಿಗೆ ಶರೀರಯಾತ್ರೆಯ ನಿಮಿತ್ತ ಯಾವಾಗಲಾದರೂ ಪ್ರವೃತ್ತಿ ಪ್ರಾರಬ್ಧ ಕರ್ಮದಿಂದಾಗುವದು. ಆದರೂ ಆ ಪ್ರವೃತ್ತಿ ಸುಖಬುದ್ಧಿಯಿಂದಲ್ಲ. ಮತ್ತೇನೆಂದರೆ;—ವ್ಯಷ್ಟಿಗೃಹೀತದಂತೆ ಪ್ರತಿಬಂಧದ ನಿವಾರಣೆಯ ನಿಮಿತ್ತದಿಂಗುವದು. ಎಂತೆಂದರೆ;—ಕ್ಷುಧಾನಿವೃತ್ತಿಗೋಸುಗ ಭೋಜನದಲ್ಲಿ ಪ್ರವೃತ್ತಿಯಾಗುವಂತೆ, ತಿಳಿದುಕೊಳ್ಳತಕ್ಕದ್ದು. ಆದ್ದರಿಂದ ಜ್ಞಾನಿಯ ವೃತ್ತಿ ಗಂಗಾಗೋವಿನಂತಿರುವದು. ಅಂದರೆ, ಪ್ರಥಮಪ್ರಸೂತವಾದ ಗೋವು, ಪರಪ್ರೇರಿತವಾಗಿ ಕಾಡಿನಲ್ಲಿ ಹೋದರೂ ಅಲ್ಲಿಯೂ ಕರುವಿನ ಚಿಂತನೆಯಂ ಮಾಡುತ್ತಾ ಇದ್ದು, ಸದ್ಯ ಕರುವಿನ ಸಮೀಪಕ್ಕೆ ಹ್ಯಾಗೆ ಬರುವದೋ, ಹಾಗೆ ಜ್ಞಾನಿಯ ವೃತ್ತಿಯೂ ಕೂಡ, ಭೋಜನಾದಿ ಕಾಲಗಳಲ್ಲಿ ತತ್ತ್ವ ಚಿಂತನೆಯಂ ಮಾಡುತ್ತಿದ್ದು, ವ್ಯವಹಾರ ಸಿದ್ಧಿಯಾಗಲು ಸಂಗಡಲೇ ಪ್ರತ್ಯಕ್‌ಪ್ರವಣವಾಗುವದು.

(೨)—ಮೂಢನ ಚಿತ್ತವು ಉಷ್ಟ್ರ (ಒಂಟೆ) ದಂತೆ ಸದಾ ಅಲೆಯುತ್ತಿರುವುದು. ಅಂದರೆ-ಉಷ್ಟ್ರವು ವನದಿಂ ವನಾಂತರದಲ್ಲಿ ಕಂಟಕವೃಕ್ಷಗಳೊಳ್ ಭ್ರಮಿಸುವಂತೆ ಮೂಢನು ವಿಷಯದಿಂ ವಿಷಯಾಂತರದಲ್ಲಿ ಭ್ರಮಿಸುತ್ತಿರುವನು. ಆ ವಿಷಯಗಳಲ್ಲಿ ಸುಖವಿಲ್ಲ. ಯಾವಾಗ ವಿವೇಕಶೂನ್ಯನಿಗೆ ವಾಂಛಿತ ಪದಾರ್ಥ ಪ್ರಾಪ್ತಿಯಾಗುವದೋ, ಆಗ ಇಚ್ಛೆಯ ಅಭಾವದಿಂದ ಕ್ಷಣಮಾತ್ರ ಚಿತ್ತಶಾಂತವಾಗುವದು. ಆಕಾಲದೊಳ್ ಅಂತರದಲ್ಲಿ ಉದಯವಾದ ಸಾತ್ವಿಕವೃತ್ತಿಯಲ್ಲಿ ಆತ್ಮಾನಂದದ ಪ್ರತಿಬಿಂಬವಾಗುವದು. ಅದರ ಆಸ್ವಾದದಿಂದ ಜ್ಞಾನಹೀನನಿಗೆ ವಿಷಯದಲ್ಲಿ ಸುಖದ ಭ್ರಮೆಯಾಗುವದು. ಪುನಃ ಮತ್ತೊಂದು ವಿಷಯದ ಇಚ್ಛೆ ಉದಯವಾಗಲು ಆ ಆನಂದದ ಪ್ರತಿಬಿಂಬವು ವೃತ್ತಿಯಲ್ಲಿ ಇರುವದಿಲ್ಲ; ಆದ್ದರಿಂದ ವಿಷಯಗಳಲ್ಲಿ ಸುಖವಿಲ್ಲ. ಹಾಗೆ ಏನಾದರೂ ವಿಷಯದಲ್ಲಿ ಸುಖವಿರುವದಾದರೆ, ಸಮಾಧಿಯಲ್ಲಿಯೂ, ಸುಷುಪ್ತಿಯಲ್ಲಿಯೂ, ಸುಖಾನುಭವವಾಗದೆ ಇರಬೇಕು. ಯಾಕೆಂದರೆ, ಅಲ್ಲಿ ವಿಷಯವ್ಯಾಪಾರವೂ ಇಲ್ಲದೇನೇ ಸುಖದ ಅನುಭವವಾಗುವದು. ಸಮಾಧಿಸುಖವು ಜೀವನ್ಮುಕ್ತರ ಅನುಭವಸಿದ್ಧವಾಗಿರುವದು. ಮತ್ತು ಶೃತಿಯೂ ಪೇಳಿರುವದು.

ಶ್ರು—ಸಮಾಧಿನಿರ್ಧೂತ ಮಲಸ್ಯ ಚೇತಸೋ
ನಿವೇಶಿತಸ್ಯಾತ್ಮನಿ ಯತ್ಸುಖಂ ಭವೇತ್ ||
ನಶಕ್ಯತೇ ವರ್ಣಯಿತುಂ ಗಿರಾತದಾ
ಸ್ವಯಂ ತದಂತಃಕರಣೇನ ಗೃಹ್ಯತೇ ||

ಇದರ ಅರ್ಥವೇನೆಂದರೆ;—ಸಮಾಧಿಯಿಂದ ತೊಳೆಯಲ್ಪಟ್ಟ ಮಲರಹಿತವಾದ ಚಿತ್ತವನ್ನು ಆತ್ಮನಲ್ಲಿ ನಿವೇಶಗೊಳಿಸಿದ್ದರಿಂದ ಆ ಸಾಧಕನಿಗೆ ಆಗ ಯಾವ ಸುಖವಾಗುವದೋ, ಅದನ್ನು ವಾಣಿಯಿಂದ ವರ್ಣಿಸುವದಕ್ಕೆ ಯಾರೂ ಶಕ್ತರಲ್ಲ; ಅದು ಸ್ವಯಂ ಅವನ ಅಂತಃಕರಣದಿಂದಲೇ ಗ್ರಹಿಸಲ್ಪಡುವದು ಎಂದರ್ಥ.—ಮತ್ತು

(೩)—ಸುಷುಪ್ತಿಸುಖವು ಸರ್ವ ಜನಗಳಿಗೆ ಅನುಭವ ಸಿದ್ಧವಾಗಿರುವದು. ಶ್ರುತಿಯೂ ಕೂಡ, ಶಕುನಿ-ಶ್ಯೇನಪಕ್ಷಿ-ಮಹಾಕುಮಾರ-ಮಹಾರಾಜ-ಮತ್ತು ಮಹಾಬ್ರಾಹ್ಮಣನ ದೃಷ್ಟಾಂತಗಳಿಂದ ಸುಷುಪ್ತಿಯ ಸುಖವನ್ನು ವರ್ಣಿಸಿರುವದು. ಮತ್ತು

(೪)—ವಿಷಯಗಳಲ್ಲಿ ಸುಖವಿದ್ದರೆ, ಭರ್ತೃಹರಿ-ಮುಚುಕುಂದಾದಿಗಳು ರಾಜ್ಯವಿಭೂತಿಯ ತ್ಯಾಗವಂಮಾಡುತ್ತಿರಲಿಲ್ಲ; ಮತ್ತು "ನ ಚೇಂದ್ರಸ್ಯ ಸುಖಂ ಕಿಂಚಿತ್ ನಸುಖಂ ಚಕ್ರವರ್ತಿನಃ" ಇತ್ಯಾದಿ ಶಾಸ್ತ್ರವೂ ಕೂಡ ನಿಷೇಧ ಮಾಡುತ್ತಿರಲಿಲ್ಲ, ಆದಕಾರಣ ವಿಷಯಗಳಲ್ಲಿ ಸುಖವಿಲ್ಲ—ಮತ್ತು

(೫)—ಕದಾಚಿತ್ ಯಾವನಾದರೂ ವಿಷಯಗಳಿಂದ ಸುಖಾನುಭವವಾಗುವದು ಎಂದು, ಆಗ್ರಹವಂ ಮಾಡಿದರೆ, ಅವನನ್ನು ನಾವು ಕೇಳುವೆವು:—

ಏನು ? ವೈಷಯಿಕ ಸುಖವು ವಿಷಯಗಳ ಧರ್ಮವೋ ೧, ಅಲ್ಲದೆ ಕರಣಗಳ ಧರ್ಮವೋ ೨, ಅಥವಾ ಕರ್ಮದ ಧರ್ಮವೋ ೩, ಅಥವಾ ಭೋಕ್ತನ ಧರ್ಮವೋ ೪, ಇನ್ನು ದೇಶದ ಧರ್ಮವೋ ೫, ಅಥವಾ ಕಾಲದ ಧರ್ಮವೋ ೬, ಅಥವಾ ಅಜ್ಞಾನದ ಧರ್ಮವಾಗಿದೆಯೋ ೭, ಅಥವಾ ಜ್ಞಾನದ ಧರ್ಮವಾಗಿದೆಯೋ ೮, ಅದರಲ್ಲಿ—

೧—ವಿಷಯಗಳ ಧರ್ಮವೆಂದರೆ, ಯಾವ ವಿಷಯದಿಂದ ಒಬ್ಬನಿಗೆ ಸುಖವಾಗುವದೋ, ಆ ವಿಷಯದಿಂದ ಸರ್ವರಿಗೂ ಸುಖವಾಗಬೇಕು. ಮತ್ತು ವಿಷಯ ಸನ್ನಿಧಿಯಲ್ಲಿದ್ದರೆ, ಸರ್ವಕಾಲವೂ ಸುಖವಿರಬೇಕು ? ಅದು ಇರುವದಿಲ್ಲ. ಅನ್ಯಪದಾರ್ಥದ ಇಚ್ಛೆಯಾಗಲು ಆಕ್ಷಣವೇ ಸುಖಕ್ಕೆ ಅದರ್ಶನವು ಕಾಣ್ಬರುವದು.

೨—ಕರಣದ ಧರ್ಮವೆಂದರೆ;—ವಿಷಯ ವ್ಯವಧಾನವಾಗಲು ಸುಖವಿರಬೇಕು? ಅದು ಕಾಣಿಸಿಕ್ಕೊಳ್ಳುವದಿಲ್ಲ;

೩—ಕರ್ಮದ ಧರ್ಮವೆಂದರೆ;—ಕರ್ಮಾನುಷ್ಠಾನಕಾಲದಲ್ಲಿ ಸುಖವಿರಬೇಕು?

೪—ಭೋಕ್ತನ ಧರ್ಮವೆಂದರೆ;—ವಿಕ್ಷೇಪವಾಗದೆ ಇರಬೇಕು. ಅದು ಸದಾ ಕಾಣ್ಬರುತ್ತಿರುವದು.

೫—ದೇಶದ ಧರ್ಮವೆಂದರೆ;—ಎಲ್ಲಾ ದೇಶದಲ್ಲೂ ಸುಖವಿರುವದ್ದರಿಂದ ಸ್ವರ್ಗಗಮನೇಚ್ಛೆ ಇಲ್ಲದಿರಬೇಕು? ಯಾವಾಗ ಸ್ವರ್ಗದಲ್ಲಿಯೂ ಸುಖವುಂಟೆಂದರೆ, ಅಲ್ಲಿಯೂ ಶಾಸ್ತ್ರಗಳಿಂದ "ಇಂದ್ರಲೋಕೇ ಮಹದ್ದುಃಖಂ" ಎಂದು ಕೇಳ್ಬರುತ್ತಿರುವದು.

೬—ಕಾಲದ ಧರ್ಮವೆಂದರೆ;—ಶೀತಾತಪಗಳಂತೆ, ಎಲ್ಲಾ ಕಡೆಯಲ್ಲೂ ಎಲ್ಲರಿಗೂ ಸುಖವಾಗಬೇಕು?

೭—ಅಜ್ಞಾನದ ಧರ್ಮವೆಂದರೆ;—ಭೋಗ್ಯತ್ವ ಜ್ಞಾನವಿಲ್ಲದೆ ಸುಖವಾಗಬೇಕು? ಅದು ಕಾಣಲ್ಪಡುವದಿಲ್ಲ.

೮—ಜ್ಞಾನದ ಧರ್ಮವೆಂದು ಪೇಳಿದರೆ;—ವಿಷಯಗಳ ಜ್ಞಾನದಿಂದ ವಿರಕ್ತನಿಗೂ ಸುಖವಾಗಬೇಕು? ಅದು ಆಗುವದಿಲ್ಲ; ಆದರೆ ಅದರಲ್ಲಿ ದ್ವೇಷವುಂಟಾಗುವದು. ಈ ಕಾರಣಗಳಿಂದ ವಿಷಯಗಳಲ್ಲಿ ಸುಖವಿಲ್ಲ. ಮತ್ತೇನಂದರೆ;—ಯಾವ ಬ್ರಹ್ಮಾನಂದದ ಲೇಶದಿಂದ ಎಲ್ಲಾ ವಿಶ್ವವು ಆನಂದ ಉಳ್ಳದ್ದಾಗಿರುವದೋ, ಆ ಬ್ರಹ್ಮವೇ ಆನಂದರೂಪವಾಗಿರುವದು.

ಶಂಕಾ;—ಆ ಬ್ರಹ್ಮವು ಆನಂದರೂಪವಾಗಿದ್ದರೂ ಆಗಲೂ ಸ್ವರೂಪದಿಂ ಜಡವಾಗಿದ್ದೀತು? ಎಂದರೆ, ಇದಕ್ಕೆ ಆಚಾರ್ಯರು ಸಮಾಧಾನವಂ ಪೇಳುತಾರೆ.

## [೨]:—ಬ್ರಹ್ಮವು ಪ್ರಕಾಶಸ್ವರೂಪ.

ಸಮಾಧಾನ:—(ಪ್ರಕಾಶಸ್ವರೂಪಮಿತಿ) ಆ ಬ್ರಹ್ಮವು ಪ್ರಕಾಶಸ್ವರೂಪವಾಗಿರುವದು. ಆ ಪ್ರಕಾಶವಾದರೂ ಅಗ್ನ್ಯಾದಿಗಳಂತೆ ದೀಪ್ತಿರೂಪವಲ್ಲ; ಮತ್ತೇನೆಂದರೆ;—ಜ್ಞಪ್ತಿರೂಪವಾಗಿರುವದು, ಇನ್ನು ಸೂರ್ಯಾದಿ ಸರ್ವ ಜ್ಯೋತಿಗಳಿಗೂ ಜ್ಯೋತಿರೂಪವಾಗಿರುವದು. ಅದನ್ನು "ಜ್ಯೋತಿ

ಷಾಮುಪಿತಜ್ಯೋತಿಃ" ಈ ವಾಕ್ಯದಿಂದ ಭಗವಂತನು ತ್ರಯೋದಶಾಧ್ಯಾಯದಲ್ಲಿ ಪ್ರಸಿದ್ಧವಾಗಿ ಪೇಳಿರುವನು. ಮತ್ತು ಆ ಪರಮಾತ್ಮನು ತಾನು ಸ್ವಯಂಪ್ರಕಾಶ ಸ್ವರೂಪನಾಗಿರುವನು. ಆದ್ದರಿಂದ ಸೂರ್ಯಾದಿ ಜ್ಯೋತಿಗಳು ಅವನಂ ಪ್ರಕಾಶಪಡಿಸುವದರಲ್ಲಿ ಸಮರ್ಥವಲ್ಲ; ಇದಕ್ಕೆ "ನತತ್ರ ಸೂರ್ಯೋಭಾತಿ ನಚಂದ್ರತಾರಕಂ ನೇಮಾ ವಿದ್ಯುತೋಭಾಂತಿ ಕುತೋಯಮಗ್ನಿಃ" ಎಂಬ ಶ್ರುತಿ ಇರುವದು. ಇದಕ್ಕೆ ಆ ಸ್ವಯಂ ಜ್ಯೋತಿ ಎನಿಪ ಪರಮಾತ್ಮದೇವನಲ್ಲಿ ಸೂರ್ಯನು ಪ್ರಕಾಶಿಸುವದಿಲ್ಲ; ಚಂದ್ರ ತಾರಕಗಳು ಪ್ರಕಾಶಿಸುವದಿಲ್ಲ; ಈ ಮಿಂಚೂ ಪ್ರಕಾಶಿಸುವದಿಲ್ಲ. ಮತ್ತು ಈ ಅಗ್ನಿಯಾದರೂ ಎಲ್ಲಿಂದ ಪ್ರಕಾಶಿಸೀತು? ಎಂದರ್ಥ. ಇನ್ನು ಸ್ಮೃತಿಯೂ ಕೂಡ "ನತದ್ಭಾಸಯತೇಸೂರ್ಯೋ ನಶಶಾಂಕೋ ನಪಾವಕಃ" ಎಂದು ಪೇಳಿರುವದು. ಇದರ ಅರ್ಥವೇನೆಂದರೆ;—ಅಲ್ಲಿ (ಆ ಬ್ರಹ್ಮದಲ್ಲಿ) ಸೂರ್ಯನು ಪ್ರಕಾಶಿಸುವದಿಲ್ಲ; ಚಂದ್ರಮನಿಲ್ಲ. ಅಗ್ನಿಯೂ ಪ್ರಕಾಶಿಸುವದಿಲ್ಲ ಮತ್ತು ಆ ಪರಮಾತ್ಮನು ಯಾವ ಇಂದ್ರಿಯಕ್ಕೂ ವಿಷಯನಲ್ಲ, ಯಾವ ಪ್ರಮಾಣಕ್ಕೂ ವಿಷಯನಲ್ಲ. ಇದಕ್ಕೆ "ನತತ್ರಚಕ್ಷುರ್ಗಚ್ಛತಿ ನವಾಗಚ್ಛತಿ ನೋಮನಃ" ಯೆಂಬ ಶ್ರುತಿ ಇರುವದು. ಇದರ ಅರ್ಥವು ಸ್ಪಷ್ಟವೇ ಇದೆ. ಮತ್ತು "ಯತೋ ಮಾನಾನಿ ಸಿಧ್ಯಂತಿ" ಈ ಶಾಸ್ತ್ರವಾಕ್ಯದಲ್ಲಿ (ಯತೋ) ಅಂದರೆ;—ಯಾವಚೇತನ ಆತ್ಮನಿಂದ (ಮಾನಾನಿ) ಅಂದರೆ, ಪ್ರತ್ಯಕ್ಷ-ಅನುಮಾನಾದಿ ಪ್ರಮಾಣಗಳು ಸಿದ್ಧವಾಗುವವೋ. ಹೀಗೆ ಪೇಳಿದ್ದರಿಂದ ಪ್ರಮಾಣಗಳಿಗೂ ಪ್ರಕಾಶಕನಾದಕಾರಣ ಆ ಪರಮಾತ್ಮನು ಪ್ರಮಾಣಗಳಿಗೆ ವಿಷಯನಲ್ಲವೆಂಬುದು ಸಿದ್ಧ. ಮತ್ತು ಆ ಸ್ವಪ್ರಕಾಶರೂಪನಾದ ಪರಮಾತ್ಮನೆಂಬ ದೇವನು ಸರ್ವ ಭೂತಗಳ ಹೃದಯದಲ್ಲಿ ಸಾಕ್ಷೀರೂಪನಾಗಿ ಎಲ್ಲಾ ತ್ರಿಪುಟಿಗಳನ್ನು ಕ್ರಮವಿಲ್ಲದೆ ಸೂರ್ಯನಂತೆ ಪ್ರಕಾಶಪಡಿಸುವನು; ಇನ್ನು ಅಖಂಡಜ್ಞಾನರೂಪನಾಗಿರುವನು. ಆ ಜ್ಞಾನವು ಆತ್ಮನಿಗೆ ಗುಣವಾಗಲೀ ಅಥವಾ ಧರ್ಮವಾಗಲೀ ಅಲ್ಲ. ಈ ಮಾತು

**ಶ್ಲೋ॥ ಜ್ಞಾನಂ ನಚಾತ್ಮನೋಧರ್ಮೋ ನಗುಣೋ ವಾ ಕಥಂಚನ ಜ್ಞಾನಸ್ವರೂಪ ಏವಾತ್ಮಾ ನಿತ್ಯಃ ಸರ್ವಗತಃಶಿವಃ ॥**

ಈ ವಾಕ್ಯದಲ್ಲಿ ಪೇಳಿರುವದು. ಅರ್ಥವೇನೆಂದರೆ;—ಜ್ಞಾನವು ಆತ್ಮನ ಧರ್ಮವಾಗಿ ಅಥವಾ ಗುಣವಾಗಿ ಯಾವ ಪ್ರಕಾರದಿಂದಲೂ ಸಂಭವಿಸುವದಿಲ್ಲ. ಮತ್ತೇನೆಂದರೆ;—ಜ್ಞಾನಸ್ವರೂಪನೇ ಆತ್ಮಾ. ಅವನು ನಿತ್ಯನಾಗಿ, ಸರ್ವಗತನಾಗಿ, ಶಿವರೂಪನಾಗಿರುವನು.

ಮತ್ತು ಕ್ಷಣಿಕ ವಿಜ್ಞಾನವಾದಿಯು ಬುದ್ಧಿಯನ್ನು ಸ್ವಪ್ರಕಾಶವೆಂದು ಗ್ರಹಿಸಿರುವನು. ತಾರ್ಕಿಕನು ಆ ಬುದ್ಧಿಯನ್ನು ಜ್ಞಾನರೂಪನಾದ ಆತ್ಮನಿಗೆ ಗುಣವೆಂದು ಪೇಳಿರುವನು. ಅದೆಲ್ಲಾ ಸರ್ವಥಾ ವಿರುದ್ಧವಾಗಿರುವದು. ಇನ್ನು ಸ್ವಪ್ರಕಾಶರೂಪದಿಂ ಪ್ರತ್ಯಗಭಿನ್ನಬ್ರಹ್ಮವೇ ಇರುವದು. ಇದರಿಂದ ಏನು ಸಿದ್ಧವಾಯಿತೆಂದರೆ:—ಬ್ರಹ್ಮವು ಪ್ರಕಾಶಸ್ವರೂಪವೆಂಬುದು ಸಿದ್ಧವಾಯಿತು.

ಶಂಕಾ;—ಬ್ರಹ್ಮವು ಆನಂದರೂಪವಾಗಿ ಮತ್ತು ಪ್ರಕಾಶರೂಪವಾಗಿ ಇದ್ದರೂ ಆಗಲೂ ಸಪ್ರಪಂಚವಾದೀತು? ಹೀಗೆ ಶಂಕಿಸಿದರೆ, ಆಚಾರ್ಯರು ಪೇಳುತ್ತಾರೆ.

## [೩]:—ಬ್ರಹ್ಮವು ನಿಷ್ಪ್ರಪಂಚ ಸತ್ಯಸ್ವರೂಪ.

ಸಮಾಧಾನ:—(ನಿರಸ್ತಪ್ರಪಂಚಮಿತಿ) 'ನಿರಸ್ತ' ಅಂದರೆ, ನಿವೃತ್ತಿಸಲ್ಪಟ್ಟ ಪ್ರಪಂಚವುಳ್ಳದ್ದು. ತಾತ್ಪರ್ಯವೇನಂದರೆ;—ಭೂತಭೌತಿಕವೆನಿಪ ಸರ್ವಜಗತ್ತಿನಲ್ಲಿ ವ್ಯಾಪಕವಾಗಿದ್ದರೂ ಸರ್ವದರಿಂದ ನಿರ್ಲೇಪವಾಗಿರುವದು. ಹ್ಯಾಗೆಂದರೆ—ಸೂರ್ಯನು ಸರ್ವವನ್ನು ಪ್ರಕಾಶಪಡಿಸುತ್ತಾ ಇದ್ದಾಗ್ಯೂ ಸದಾ ಎಲ್ಲದರಿಂದ ನಿರ್ಲೇಪನಾಗಿರುವನೋ, ಮತ್ತು ಆಕಾಶವು ಸರ್ವಗತವಾಗಿದ್ದಾಗ್ಯೂ ಹ್ಯಾಗೆ ಸರ್ವದರಿಂದ ನಿರ್ಲೇಪವಾಗಿರುವದೋ, ಹಾಗೆ ಸರ್ವ ಭೂತಗಳಂ ಪ್ರಕಾಶಪಡಿಸುತ್ತಾ ಸರ್ವಾಂತರಸ್ಥಿತವಾಗಿ ಸರ್ವಾತ್ಮರೂಪದಿಂದಿರುವ ಬ್ರಹ್ಮವು ಸದಾ ನಿರ್ಲೇಪವಾಗಿರುವದು. ಇದಕ್ಕೆ

ಶೃತಿ॥ ಸೂರ್ಯೋಯಥಾ ಸರ್ವ ಲೋಕಸ್ಯ ಚಕ್ಷು । ಕಠ-ಉ-
ರ್ನಲಿಪ್ಯತೇ ಚಾಕ್ಷುಷೈ ರ್ಬಾಹ್ಯದೋಷೈಃ ॥ ೨-೨-११
ಏಕಸ್ತಥಾ ಸರ್ವಭೂತಾಂತರಾತ್ಮಾ ।
ನಲಿಪ್ಯತೇ ಲೋಕದುಃಖೇನಬಾಹ್ಯಃ ॥ ೧ ॥

ಮತ್ತು ಸ್ಮೃತಿಯೂ ಇರುವದು—

ಗೀತೆ 13-33

ಸ್ಮೃತಿ॥ ಯಥಾಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪ
ಲಿಪ್ಯತೇ ಸರ್ವತ್ರಾವಸ್ಥಿತೋದೇಹೇ ತಥಾತ್ಮಾ
ನೋಪಲಿಪ್ಯತೇ ॥

೧.—ಶೃತಿಯ ಅರ್ಥ—ಹ್ಯಾಗೆ ಸರ್ವಜನಗಳ ನೇತ್ರಗಳನ್ನು ಪ್ರಕಾಶ ಪಡಿಸುವಂಥಾ ಮತ್ತು ನೇತ್ರದಲ್ಲಿ ಇರುವ ಸೂರ್ಯನು ನೇತ್ರ ಸಂಬಂಧಿಯಾದ ಬಾಹ್ಯದೋಷಗಳಿಂದ ಲೇಪಿಸಲ್ಪಡದಿರುವನೋ, ಹಾಗೆ ಸರ್ವಭೂತಾಂತರದಲ್ಲಿ ರುವ ಏಕಾತ್ಮನು ಬಾಹ್ಯಲೋಕಗಳ ದುಃಖದಿಂದ ಲೇಪಿಸಲ್ಪಡುವದಿಲ್ಲ.

೨—ಸ್ಮೃತಿಯ ಅರ್ಥ—ಹ್ಯಾಗೆ ಪಂಕಾದಿ ಸರ್ವಸ್ಥಲಗಳಲ್ಲಿದ್ದರೂ ಆಕಾಶವು ಸೂಕ್ಷ್ಮವಾಗಿಯೂ, ಅಸಂಗವಾಗಿಯೂ, ಇರುವದ್ದರಿಂದ ಆ ಪಂಕಾದಿಗಳಿಂದ ಲೇಪಿಸಲ್ಪಡದಿರುವದೋ, ಹಾಗೆ ಸರ್ವತ್ರ ಉತ್ತಮಾಧಮ ಶರೀರಗಳಲ್ಲಿ ಇರುತ್ತಿದ್ದರೂ ಆತ್ಮನು ಆ ಶರೀರಾದಿ ಸಂಬಂಧವುಳ್ಳ ಗುಣದೋಷಗಳಿಂದ ಲೇಪಿಸಲ್ಪಡುವದಿಲ್ಲ.

**ಅಥವಾ**-(ನಿರಸ್ತಪ್ರಪಂಚ) ಅಂದರೆ:—ಅಧಿಷ್ಠಾನ ಬ್ರಹ್ಮದಲ್ಲಿ ಪ್ರಪಂಚವು ನಿತ್ಯನಿವೃತ್ತಿಯೇ ಆಗಿದೆ: ಹ್ಯಾಂತೆಂದರೆ:—ಭೂತ ಭೌತಿಕವಾದ ಸ್ಥಾವರ ಜಂಗಮವೆನಿಪ, ನಾಮರೂಪ ಕ್ರಿಯಾತ್ಮಕವೆಂದು ಪೇಳಲ್ಪಡುವ ಜಗತ್ ಎಷ್ಟುಂಟೋ, ಮತ್ತು ಅದರ ಗುಣದೋಷಗಳು ಎಷ್ಟುಂಟೋ, ಆ ಸರ್ವವೂ ಬ್ರಹ್ಮದಲ್ಲಿ ಶುಕ್ತಿರಜತದಂತೆ ಕಲ್ಪಿತವಾಗಿರುವದು. ಕಲ್ಪಿತ ವಸ್ತುವು ಅಧಿಷ್ಠಾನಕ್ಕೆ ವಿಕಾರಪಡಿಸುವದಿಲ್ಲ, ಹ್ಯಾಗೆಂದರೆ—ರಜ್ಜುವಿನಲ್ಲಿ ಕಲ್ಪಿತವಾದ ಸರ್ಪವು ರಜ್ಜುವಿಗೆ ವಿಷವುಳ್ಳದ್ದನ್ನಾಗಿ ಮಾಡದಿರುವಂತೆಯೂ, ಮೃಗ ತೃಷ್ಣಾಜಲವು ಭೂಮಿಯನ್ನು ನೆನಯಿಸದಿರುವಂತೆಯೂ ಮಿಥ್ಯಾಪ್ರಪಂಚವು ಸತ್ಯಸ್ವರೂಪವಾದ ಬ್ರಹ್ಮಕ್ಕೆ ಮಾಲಿನ್ಯವನ್ನುಂಟುಮಾಡುವದಿಲ್ಲ; ಆ ಜಗತ್ತಿನ ಮಿಥ್ಯಾತ್ವವನ್ನು "ನೇಹನಾನಾಸ್ತಿಕಿಂಚನ-ವಾಚಾರಂಭಣಂ ವಿಕಾರೋ ನಾಮಧೇಯಂ" ಇತ್ಯಾದಿ ಶೃತಿಗಳು ಪ್ರಸಿದ್ಧಪಡಿಸಿರುವವು. ಹಾಗೆಯೇ "ಅಯಂ ಪ್ರಪಂಚೋ ಮಿಥ್ಯೈವ ಸತ್ಯಂ ಬ್ರಹ್ಮಾಹಮದ್ವಯಂ" ಇತ್ಯಾದಿ ಶಾಸ್ತ್ರಗಳಲ್ಲಿಯೂ ಪೇಳಿರುವದು. ಆದ್ದರಿಂದ ಇಲ್ಲಿ ಏನು ಸಿದ್ಧವಾಯಿತೆಂದರೆ;—ಬ್ರಹ್ಮವು ನಿಷ್ಪ್ರಪಂಚ ಸತ್ಯಸ್ವರೂಪವೆಂಬುದು ಸಿದ್ಧವಾಯಿತು.

ಬೃ 4-4-19   ಛಾಂ 6-1-6

—: ಪುನಃ ಆ ಬ್ರಹ್ಮವು ಎಂತಿರುವದೆಂದರೆ :—

[೪] ಬ್ರಹ್ಮವು ಪರಿಚ್ಛೇದತ್ರಯ ಶೂನ್ಯ. ವೈ. ಸಂ. ಪ. ೩-೩೫

(ಪರಿಚ್ಛೇದ ಶೂನ್ಯಮಿತಿ) ಪರಿಚ್ಛೇದ ಶೂನ್ಯ, ಅಂದರೆ;—

೧—ದೇಶದಿಂದಾದ ಪರಿಚ್ಛೇದ,

೨—ಕಾಲದಿಂದಾದ ಪರಿಚ್ಛೇದ,

೩—ವಸ್ತುವಿನಿಂದಾದ ಪರಿಚ್ಛೇದ; ಇವುಗಳಿಂ ರಹಿತವಾಗಿರುವದು. ಆ ತ್ರಿವಿಧ ಪರಿಚ್ಛೇದಗಳ ಲಕ್ಷಣವು ಯಾವುದೆಂದರೆ;—

[೧] ಅತ್ಯಂತಾಭಾವ ಪ್ರತಿಯೋಗಿತ್ವಂ ದೇಶಪರಿಚ್ಛೇದತ್ವಂ.

[೨] ಪ್ರಾಗಭಾವ ಪ್ರಧ್ವಂಸಾಭಾವ ಪ್ರತಿಯೋಗಿತ್ವಂ ಕಾಲಪರಿಚ್ಛೇದತ್ವಂ,

[೩] ಅನ್ಯೋನ್ಯಾಭಾವ ಪ್ರತಿಯೋಗಿತ್ವಂ ವಸ್ತುಪರಿಚ್ಛೇದತ್ವಂ,

ಈ ಮೂರು ಪರಿಚ್ಛೇದಗಳು ಜಡಪದಾರ್ಥಗಳಲ್ಲಿರುವವು. ಎಂತೆಂದರೆ;—

(೧) ಯಾವದಾದರು ಒಂದು ದೇಶದಲ್ಲಿ ಘಟವಿದ್ದರೆ, ಅದರಿಂದನ್ಯವಾದ ಮತ್ತೊಂದು ದೇಶದಲ್ಲಿ ಘಟದ ಅತ್ಯಂತಾಭಾವವಿರುವದು. ಆ ಅತ್ಯಂತಾಭಾವದ ಪ್ರತಿಯೋಗಿತ್ವವು ಘಟದಲ್ಲಿರುವದು. ಆದ್ದರಿಂದ ಆ ಘಟವು ದೇಶಪರಿಚ್ಛೇದ ಉಳ್ಳದ್ದಾಗಿದೆ.

(೨) ಉತ್ಪತ್ತಿಯಿಂ ಪೂರ್ವ ಘಟದ ಅಭಾವವಿರುವದು. ಇನ್ನು ದಂಡದಿಂ ಭಂಜನವಂ ಮಾಡಲು, ಅನಂತರ ಘಟಕ್ಕೆ ಅಭಾವವಾಗುವದು. ಆ ಪ್ರಾಗಭಾವ, ಪ್ರಧ್ವಂಸಾಭಾವದ ಪ್ರತಿಯೋಗಿತ್ವವು ವರ್ತಮಾನ ಘಟದಲ್ಲಿರುವದು. ಆದ್ದರಿಂದ ಆ ಘಟವು ಕಾಲಪರಿಚ್ಛೇದ ಉಳ್ಳದಾಗಿದೆ.

(೩) ಘಟಕ್ಕೆ ಪಟದಲ್ಲಿ ಅಭಾವವೂ, ಹಾಗೆಯೇ ಪಟಕ್ಕೆ ಘಟದಲ್ಲಿ ಅಭಾವವೂ ವುಂಟು. ಅದರಲ್ಲಿ ಘಟಾಭಾವದ ಪ್ರತಿಯೋಗಿತ್ವವು ಘಟದಲ್ಲಿಯೂ, ಪಟಾಭಾವದ ಪ್ರತಿಯೋಗಿತ್ವವು ಪಟದಲ್ಲಿಯೂ ಇರುವದು. ಯಾಕೆಂದರೆ, (ಅಭಾವಕ್ಕೆ ಅಭಾವವಾದದ್ದು ಅಭಾವದ ಪ್ರತಿಯೋಗಿ ಎನ್ನಲ್ಪಡುವದು.) ಆದಕಾರಣ ಪಟದಲ್ಲಿ ಘಟದ ಅಭಾವಕ್ಕೆ ಪ್ರತಿಯೋಗಿ ಘಟವಾಗಿರುವದ್ದರಿಂದ ಆ ಘಟವು ವಸ್ತುಪರಿಚ್ಛೇದ ಉದ್ದಾಳ್ಳಗಿದೆ.

ಅಭಾವ ಮುಗಿದಿ

ಇದರಂತೆ ದೇಹಾದಿ ಜಡಪದಾರ್ಥವೆಲ್ಲವೂ ತ್ರಿವಿಧ ಪರಿಚ್ಛೇದ ಉಳ್ಳದ್ದಾಗಿರುವವು. ಇನ್ನು ಬ್ರಹ್ಮವಾದರೋ, ಆ ತ್ರಿವಿಧ ಪರಿಚ್ಛೇದವಿಲ್ಲದ್ದಾಗಿರುವದು. ಅದೆಂತೆಂದರೆ—

॥ ೧ ॥ ವ್ಯಾಪಕವಾದ್ದರಿಂದ ದೇಶಕೃತ ಪರಿಚ್ಛೇದವಿಲ್ಲ.

॥ ೨ ॥ ನಿತ್ಯವಾದ್ದರಿಂದ ಕಾಲಕೃತ ಪರಿಚ್ಛೇದವಿಲ್ಲ.

॥ ೩ ॥ ಸರ್ವಾತ್ಮವಾದ್ದರಿಂದ ವಸ್ತುಕೃತ ಪರಿಚ್ಛೇದವೂ ಇಲ್ಲ. ಈ ಮಾತು "ಆಕಾಶವತ್ಸರ್ವಗತಶ್ಚನಿತ್ಯಃ-ಸರ್ವಂ ಖಲ್ವಿದಂ ಬ್ರಹ್ಮ" ಛಾಂ 3-14-1 ಇತ್ಯಾದಿ ಶೃತಿಗಳಲ್ಲಿ ಬ್ರಹ್ಮಕ್ಕೆ ವ್ಯಾಪಕತ್ವ, ನಿತ್ಯತ್ವ, ಮತ್ತು ಸರ್ವಾತ್ಮತ್ವವನ್ನು ಪ್ರಸಿದ್ಧವಾಗಿ ಪೇಳಿರುವವು. ಆದ್ದರಿಂದ ಬ್ರಹ್ಮವು ತ್ರಿವಿಧಪರಿಚ್ಛೇದ ರಹಿತವಾಗಿರುವದು. ಅದನ್ನು ಪೇಳುವರು.

ಶ್ಲೋ॥ ಇತಿ ತ್ರಿಧಾ ಪರಿಚ್ಛೇದೋ ಬ್ರಹ್ಮಣ್ಯಾತ್ಮಸ್ವರೂಪಕೇ ।
ನವಿದ್ಯತೇ ಯತಸ್ತಸ್ಮಾದ್ಬ್ರಹ್ಮಾಹಮಿತಿರೀರಿತಃ ॥

ಅರ್ಥ—ಆತ್ಮಸ್ವರೂಪವಾದ ಬ್ರಹ್ಮದಲ್ಲಿ ಮೂರುಬಗೆಯಾದ ಪರಿಚ್ಛೇದಗಳಿಲ್ಲ; ಆದ್ದರಿಂದ ಬ್ರಹ್ಮ ನಾನಾಗಿರುವೆನು. ಹೀಗೆ ನಿರ್ದೇಶಿಸಲ್ಪಟ್ಟಿರುವದು.

೧—ಹ್ಯಾಗೂ ಒಂದು ದೇಶಪರಿಚ್ಛೇದದ ನಿರಾಕರಣೆಯಿಂದಲೇ ಮೂರು ಪರಿಚ್ಛೇದಗಳ ಅಭಾವವೂ ಸಿದ್ಧವಾಗುವದು. ಆದರೂ ಇತರ ಮತಗಳ ಪರಿಹಾರ ನಿಮಿತ್ತವಾಗಿ ಮೂರು ಪರಿಚ್ಛೇದಗಳ ಅಭಾವವನ್ನು ಬೇರೆ ಬೇರೆಯಾಗಿ ವರ್ಣಿಸಿರುವರು. ಮತ್ತು ಪರಮಾರ್ಥದೃಷ್ಟಿಯಿಂ ನೋಡಿದರೆ, ದೇಶಕಾಲಾದಿಗಳೆಲ್ಲವೂ ಬ್ರಹ್ಮದಲ್ಲಿ ಕಲ್ಪಿತವಾಗಿರುವದು. ಆದಕಾರಣ ಪರಿಚ್ಛೇದಗಳು ಸರ್ವಥಾ ಅಭಾವವಾಗಿವೆ.

೨—ಹೀಗೆ ಪೂರ್ವಾರ್ಧದಲ್ಲಿ ಆನಂದ, ಪ್ರಕಾಶ, ನಿಷ್ಪ್ರಪಂಚ ಮತ್ತು ಪರಿಚ್ಛೇದ ಶೂನ್ಯವೆಂದು ಪೇಳಿದ್ದರಿಂದ ಸತ್-ಚಿತ್-ಆನಂದರೂಪವಾದ ಜ್ಞೇಯ ಬ್ರಹ್ಮಕ್ಕೆ ಸ್ವರೂಪವು ಪೇಳಲ್ಪಟ್ಟಿತು. ಅದರ ಸಾಕ್ಷಾತ್ಕಾರವಾಗಲು ಜಿಜ್ಞಾಸುವು ಕೃತಾರ್ಥನಾಗುವನು. ಬಳಿಕ ಆ ಬ್ರಹ್ಮವನ್ನು ಯಾವ ವೃತ್ತಿಯಿಂದ ತಿಳಿಯಲಾಗುವದು? ಹೀಗೆ ಜಿಜ್ಞಾಸೆಯಾದರೆ ಆಚಾರ್ಯರು ಪೇಳುತ್ತಾರೆ.

[೫] ಬ್ರಹ್ಮವು, ಅಹಂಬ್ರಹ್ಮವೆಂಬ ಒಂದು ವೃತ್ತಿಯಿಂದ ಗಮ್ಯ.
(ಅಹಂಬ್ರಹ್ಮವೃತ್ತ್ಯೈಕಗಮ್ಯಮಿತಿ) "ಅಹಂಬ್ರಹ್ಮವೃತ್ತ್ಯೈಕ"

ಅಂದರೆ, ತತ್ವಮಸ್ಯಾದಿ ಮಹಾವಾಕ್ಯರೂಪವಾದ ಪ್ರಮಾಣದಿಂ ಪುಟ್ಟಿದ 'ಅಹಂಬ್ರಹ್ಮಾಸ್ಮಿ' ಈ ಒಂದು ಚರಮವೃತ್ತಿಯಿಂದ ಬ್ರಹ್ಮದ ಸಾಕ್ಷಾತ್ಕಾರ ಲಕ್ಷಣವೆಂಬ ಅಪರೋಕ್ಷಜ್ಞಾನವಾಗುವದು. ಈ ಪ್ರತ್ಯಗಭಿನ್ನ ಬ್ರಹ್ಮಗೋಚರವಾದ ವೈದಿಕಶಾಬ್ದಿಯು ಪ್ರತ್ಯಕ್ಷಪ್ರಮಾ ಎನಿಸುವದು. ಅದಕ್ಕೆ ಪರಾವಿದ್ಯಾ ಎಂತಲೂ, ಚರಮವೃತ್ತಿ ಎಂತಲೂ, ಪೇಳುವರು. ಆ ವಿದ್ಯವು ವೇದದಲ್ಲಿ

(೧)—ಪರಾ,

(೨)—ಅಪರಾ, ಯೆಂಬ ಭೇದದಿಂದ ಎರಡು ಪ್ರಕಾರವಾಗಿ ಪೇಳಿರುವದು. ಅಲ್ಲಿ

(17)

ಶ್ರು॥ ದ್ವೇ ವಿದ್ಯೇವೇದಿತವ್ಯ ಇತಿಹಸ್ಮ ಯದ್ಬ್ರಹ್ಮವಿದೋ ವದಂತಿ ಪರಾಚೈವಾಪರಾಚ ॥ ತತ್ರಾಪರಾಋುಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ ॥ ಅಥ ಪರಾಯಯಾ ತದಕ್ಷರಮಧಿಗಮ್ಯತೇ ಇತಿ ॥

ಇದರ ಅರ್ಥವೇನಂದರೆ;— ಎರಡು ವಿದ್ಯೆಗಳು ತಿಳಿಯುವದಕ್ಕೆ ಯೋಗ್ಯವಾಗಿರುವವು. ಹೀಗೆ ಪ್ರಸಿದ್ಧವಾಗಿ ಯಾವ ವೇದವಿತ್ತಮನಾದ ಬ್ರಹ್ಮವೇತ್ತನುಂಟೋ, ಅವನು ಪೇಳುವನು.

ಒಂದು ಪರಾ,

ಮತ್ತೊಂದು ಅಪರಾ, ಅದರಲ್ಲಿ ಋುಗ್ವೇದಾದಿ ನಾಲ್ಕು ವೇದಗಳು, ಶಿಕ್ಷಾದಿ ಷಡಂಗಗಳು, ಇವು ಅಪರಾವಿದ್ಯೆ ಎನಿಸುವದು (೧).

ಬಳಿಕ ಯಾವದರಿಂದ ಅಕ್ಷರ ಬ್ರಹ್ಮವಂ ಪೊಂದಲಾಗುವದೋ, ಅದು ಪರಾವಿದ್ಯಾ ಎನಿಸುವದು (೨).

॥ ವಿವಿಧವಾಸನಾ ಸಮೂಲಂ ದ್ಯತಿ ಖಂಡಯತಿ ವಾ ವಿಶೇಷೇಣ ಬ್ರಹ್ಮಾತ್ಮಾದದ್ಯಾತ್ ವಾ ದ್ಯೋತಯೇತ್ ಸಾವಿದ್ಯಾ ॥

ಇತ್ಯಾದಿ ವ್ಯುತ್ಪತ್ತಿ ಇರುವದು. ಆ ಪರಾ ವಿದ್ಯೆಗೆ ಮುಖ್ಯವಾದ ಅಂಗ ಶ್ರವಣಾದಿಗಳಾಗಿರುವವು. ಎಂತೆಂದರೆ;—

## (೧) ಶ್ರವಣ ಲಕ್ಷಣ.

"ಶ್ರವಣಂ ಮನನಂ ಧ್ಯಾನಂ ವಿದ್ಯಾಯಾಃ ಸಾಧನಂ ತ್ರಯಮಿತಿ" ಅವುಗಳಲ್ಲಿ ಶ್ರವಣವು ಅಂಗೀ ಅಂಗಭೇದದಿಂದ ಎರಡು ಪ್ರಕಾರವಾಗಿರುವದು.

(೧) ಗುರುಮುಖದಿಂದ ಮಹಾವಾಕ್ಯವು ಶ್ರೋತ್ರಸಂಬಂಧವಾಗಲು ಅಂಗೀಶ್ರವಣವೆನಿಸುವದು.

(೨) ವೇದಾಂತದ ತಾತ್ಪರ್ಯನಿಶ್ಚಯರೂಪವು ಅಂಗಶ್ರವಣವೆನಿಸುವದು.

ವೇದಾಂತದ ತಾತ್ಪರ್ಯವು ಉಪಕ್ರಮೋಪಸಂಹಾರಾದಿ ಷಟ್‌ಲಿಂಗಗಳಿಂದ ತಿಳಿಯಲಾಗುವದು. ಅದೆಂತೆಂದರೆ;—

ಶ್ಲೋ॥ ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ । ಅರ್ಥವಾದೋಪಪತ್ತೀಚ ಲಿಂಗಂ ತಾತ್ಪರ್ಯನಿರ್ಣಯೇ ॥

ಅರ್ಥ—(೧) ಉಪಕ್ರಮೋಪಸಂಹಾರದ ಐಕ್ಯರೂಪತ್ವ,
(೨) ಅಭ್ಯಾಸ,
(೩) ಅಪೂರ್ವತಾ,
(೪) ಫಲ,
(೫) ಅರ್ಥವಾದ,
(೬) ಉಪಪತ್ತಿ, ಇವು ಆರು ಲಿಂಗತಾತ್ಪರ್ಯನಿರ್ಣಯದಲ್ಲಿರುವವು.

ಅದರಲ್ಲಿ—

॥ ೧ ॥ ಯಾವ ಅರ್ಥವು ಆದಿಯಲ್ಲಿ ಪ್ರತಿಪಾದಿಸಲ್ಪಟ್ಟು ಅದನ್ನೇ ಅಂತ್ಯದಲ್ಲಿ ಪ್ರತಿಪಾದನೆ ಮಾಡಲ್ಪಟ್ಟರೆ, ಅದು ಉಪಕ್ರಮೋಪಸಂಹಾರೈಕ್ಯರೂಪವೆನಿಸುವದು. ಎಂತೆಂದರೆ;—ಛಾಂದೋಗ್ಯದ ಷಷ್ಠಪ್ರಪಾಠಕದಲ್ಲಿ "ಸದೇವಸೌಮ್ಯ" ಹೀಗೆ ಉಪಕ್ರಮಿಸಿ "ಐತದಾತ್ಮ್ಯಮಿದಂ ಸರ್ವಂ" ಹೀಗೆ ಉಪಸಂಹಾರವಂ ಮಾಡಿರುವರು. ಛಾಂ. ೬- 6-8-7.

ಛಾಂ. ೬. 6-2-1

॥ ೨ ॥ ಉಪದೇಶದ ಅಸಕೃದಾವೃತ್ತಿ ಅಭ್ಯಾಸವೆನ್ನಲ್ಪಡುವದು. ಎಂತೆಂದರೆ;—ಅಲ್ಲಿಯೇ "ತತ್ತ್ವಮಸಿ, ತತ್ತ್ವಮಸಿ" ಎಂದು ಒಂಭತ್ತು (೯) ಬಾರಿ ಉಪದೇಶಗೈದಿರುವರು. ಛಾಂ. ೬. 6-8-7.

॥ ೩ ॥ ಪ್ರಮಾಣಾಂತರ ಅನಧಿಗಮತ್ವ ಅಪೂರ್ವತೆ ಎನಿಸುವದು, ಎಂತೆಂದರೆ;—"ತಂ ತ್ವೌಪನಿಷದಂ" ಇದು ಉಪನಿಷದ್ಗಮ್ಯವೆಂದು ಪೇಳಿದ್ದರಿಂದ ಅದ್ವಯವಸ್ತುವು ಪ್ರಮಾಣಾಂತರಗಳಿಗೆ ಅವಿಷಯವೆಂದು ಪೇಳಿರುವರು.

॥ ೪ ॥ ಅನರ್ಥನಿವೃತ್ತಿಯ ದ್ವಾರಾ ಪರಮಸುಖದ ಪ್ರಾಪ್ತಿಯು ಫಲವೆನಿಸಿಕೊಳ್ಳುವದು. ಎಂತೆಂದರೆ;—ಅಲ್ಲಿಯೇ "ತರತಿಶೋಕಮಾತ್ಮವಿತ್" ಇದು ಜ್ಞಾನದಿಂದ ಸಮೂಲ ಶೋಕದ ನಿವೃತ್ತಿಯೇ ಫಲವೆಂದು ಪೇಳಿರುವದು.

॥ ೫ ॥ ವಿರೋಧದ ನಿಂದೆಯೂ, ವಾಂಛಿತದ ಕಥನವೂ ಅರ್ಥವಾದವೆನ್ನಲ್ಪಡುವದು ಎಂತೆಂದರೆ;—ಅಲ್ಲಿಯೇ "ಮೃತ್ಯೋಸ್ಸಮೃತ್ಯುಮಾಪ್ನೋತಿ" ಹೀಗೆ ನಾನಾ ದರ್ಶಿಗಳನ್ನು ನಿಂದಿಸಿ, "ಯೇನಾ ಶ್ರುತಂ ಶ್ರುತಂ" ಇತ್ಯಾದಿ ವಾಂಛಿತಾರ್ಥವನ್ನು ಸ್ತುತಿಸಿರುವದು.

॥ ೬ ॥ ಅರ್ಥಕ್ಕೆ ಅನುಕೂಲವಾದ ದೃಷ್ಟಾಂತಗಳನ್ನು ಉಪಪತ್ತಿ ಎನ್ನುವರು. ಎಂತೆಂದರೆ;—"ವಾಚಾರಂಭಣಂ ವಿಕಾರೋ ನಾಮಧೇಯಂ" ಇತ್ಯಾದಿ ಪ್ರಪಂಚದ ಮಿಥ್ಯಾತ್ವಕ್ಕೆ ದೃಷ್ಟಾಂತವಂ ಪೇಳಿರುವದು.

ಹ್ಯಾಗೆ ಛಾಂದೋಗ್ಯದ ಷಡ್ಲಿಂಗಗಳಿಂದ ಅದ್ವೈತಬ್ರಹ್ಮವಂ ತಿಳಿಯಲಾಗುವದೋ, ಹಾಗೆ ಎಲ್ಲಾ ಉಪನಿಷತ್ತುಗಳಿಗೂ, ತಿಳಿದುಕೊಳ್ಳತಕ್ಕದ್ದು. ಇದೇ ಶ್ರವಣದ ಸ್ವರೂಪವು. ಅದನ್ನು ಪೇಳುವರು.

ಶ್ಲೋ॥ ವೇದಾಂತಾನಾಮಶೇಷಾಣಾಮಾದಿ ಮಧ್ಯಾವಸಾನತಃ ॥
ಬ್ರಹ್ಮಾತ್ಮನ್ಯೇವ ತಾತ್ಪರ್ಯ ಮಿತಿಧೀಃ ಶ್ರವಣಂಭವೇತ್ ॥

ಅರ್ಥ—ಎಲ್ಲಾ ಉಪನಿಷತ್ತುಗಳಿಗೂ ಆದಿ, ಮಧ್ಯ, ಅಂತಗಳಿಂದ ಬ್ರಹ್ಮಾತ್ಮರ ಏಕತ್ವದಲ್ಲಿಯೇ ತಾತ್ಪರ್ಯವುಂಟು; ಹೀಗೆ ನಿಶ್ಚೈಸುವದೇ ಶ್ರವಣವೆನಿಸುವದು. ಮತ್ತು "ವೇದಾರ್ಥ ಪರಮಾದ್ವೈತಂ-ವೇದಾ ಬ್ರಹ್ಮಾತ್ಮವಿಷಯಾಃ" ಇತ್ಯಾದಿ ವಾಕ್ಯಗಳಿಂದಲೂ, ವೇದಕ್ಕೆ ಅದ್ವೈತದಲ್ಲಿಯೇ ತಾತ್ಪರ್ಯ ನಿಶ್ಚಯವಿರುವದು. ಇನ್ನು ಅಜ್ಞಾತ ಅಬಾಧಿತ ಫಲವುಳ್ಳ ಅರ್ಥದಲ್ಲಿಯೇ ಶ್ರುತಿ ಪ್ರಮಾಣವೆನಿಸುವದು. ಈ ರೀತಿಯಾದ ತಾತ್ಪರ್ಯ ನಿಶ್ಚಯವೆನಿಪ ಶ್ರವಣದಿಂದ, ವೇದವು ಅದ್ವೈತವಂ ಪ್ರತಿಪಾದಿಸುವದೋ, ಅಥವಾ ಬೇರೆ ಅರ್ಥವಂ ಪ್ರತಿಪಾದಿಸುವದೋ? ಇಂತೆಂಬ ಪ್ರಮಾಣಗತ [ಮೋಕ್ಷ

ಶಾಸ್ತ್ರದೊಳಗಣ] ಸಂಶಯದ ನಿವೃತ್ತಿ ಆಗುವದು. ಈ ಶ್ರವಣವು ಶಾರೀರಕದ ಸಮನ್ವಯಾಖ್ಯ ಪ್ರಥಮಾಧ್ಯಾಯದಲ್ಲಿ ಪೇಳಿರುವದು.

ಅ:—ಈಗ ಮನನಸ್ವರೂಪವಂ ಪೇಳುವರು.

## (೨) ಮನನ ಲಕ್ಷಣ.

ಶ್ರವಣದಿಂ ಸಂಭಾವಿತವಾದ ತತ್ವವನ್ನು ಯುಕ್ತಿಯಿಂದ ಅನುಸಂಧಾನವಂ ಗೈಯ್ಯುವದು ಮನನವೆನ್ನಲ್ಪಡುವದು. ಅದೆಂತೆಂದರೆ ;—

"ಯುಕ್ತ್ಯಾಸಂಭಾವಿತತ್ವಾನುಸಂಧಾನಂ ಮನನಂ ತು ತತ್" ಮತ್ತು "ಮನನಂ ತು ಸ್ವಯುಕ್ತಿಭಿಃ" ಇವುಗಳ ಅರ್ಥವು ಸ್ಪಷ್ಟವೇ ಇಧೆ.

೧—ಶೃತಿ ಅನುಕೂಲಯುಕ್ತಿ ಯಾವದೆಂದರೆ;—ಶೃತಿಯಲ್ಲಿ ಬ್ರಹ್ಮಾತ್ಮರಿಗೆ ಏಕತ್ವವಂ ಪೇಳಿರುವದು. ಇದರ ಮೇಲೆ ಭೇದವನ್ನಂಗೀಕರಿಸಿದರೆ, ಶೃತಿಗೆ ವಿರೋಧವಾದೀತು ? ಅದು ಇಷ್ಟವಿಲ್ಲ ; ಹೀಗೆ ತರ್ಕದಿಂದ ಭೇದಶಂಕೆಗೆ ಪರಿಹಾರವಂ ಮಾಡಬೇಕು. [ಅನಿಷ್ಟಾಪಾದನೆಗೆ ತರ್ಕವೆಂದೆನ್ನುವರು.] ಮತ್ತು ಆತ್ಮನನ್ನು ಬ್ರಹ್ಮದಿಂ ಭಿನ್ನವೆಂದು ಗ್ರಹಿಸಿದರೆ;—ಆತ್ಮನಿಗೆ ಘಟದಂತೆ ಪರಿಚ್ಛಿನ್ನತ್ವವು ಪ್ರಾಪ್ತಿಯಾದೀತು ? ಹಾಗೆಯೇ ಬ್ರಹ್ಮವನ್ನು ಆತ್ಮನಿಂ ಭಿನ್ನವೆಂದು ಗ್ರಹಿಸಿದರೆ; ಬ್ರಹ್ಮಕ್ಕೆ ದೇಹಾದಿ ಪದಾರ್ಥಗಳಂತೆ ಅನಾತ್ಮತ್ವವು ಪ್ರಾಪ್ತಿಯಾದೀತು ? ಇದೂ ಅನಿಷ್ಟವೆ.

೨—ಪ್ರಯೋಗಯುಕ್ತಿ ಯಾವುದೆಂದರೆ ;—

"ಜೀವೋ ಬ್ರಹ್ಮಾಭಿನ್ನಃ ಚೇತನತ್ವಾತ್ ಯತ್ರಯತ್ರ ಚೇತನತ್ವಂ ತತ್ರತತ್ರ ಬ್ರಹ್ಮಾಭಿನ್ನತ್ವಂ ಯಥಾ ಬ್ರಹ್ಮಣಿ" ಇತ್ಯಾದಿ ‖ ಹೀಗೆ ಸತ್, ಚೇತನ, ಆನಂದಗಳಿಗೂ, ಆತ್ಮನಿಗೂ ಪರಸ್ಪರ ಭೇದವಿಲ್ಲ; ಎಂತೆಂದರೆ ;—

ಶ್ಲೋ‖ ಸದಾನಂದಪ್ರಕಾಶೇಭ್ಯೋ ನಾತ್ಮಾಭಿನ್ನಃ ಕಥಂಚನ |
ತಥಾತ್ವೇಽಸದನಾನಂದಾ ಜ್ಞಾನಾನಿಸ್ಯುಸ್ತವಾತ್ಮನಃ ‖

ಇದರ ಅರ್ಥ;—ಸತ್, ಆನಂದ, ಪ್ರಕಾಶಗಳಿಗಿಂತ ಆತ್ಮನು ಯಾವ ರೀತಿಯಿಂದಲೂ ಭಿನ್ನನಾಗುವದಿಲ್ಲ; ಅನ್ಯಥಾ ಆದರೆ; [ಹಾಗೆ ಭಿನ್ನಪಟ್ಟರೆ] ಎಲೈವಾದಿಯೇ ! ನಿನ್ನ ಆತ್ಮನಿಗೆ ಅಸತ್, ಅನಾನಂದ ಅಜ್ಞಾನವೆಂಬಿವು ಪ್ರಾಪ್ತಿಯಾದೀತು ? ಇತ್ಯಾದಿ ಯುಕ್ತಿಗಳಿಂದ ಅದ್ವಯ ಬ್ರಹ್ಮದ ಚಿಂತನೆಯ ಪೆಸರು

ಬ ಪ್ತ ಕ ನ್ನ ಲ್ಲ ಯ ತ

ಮನನವೆನಿಸುವದು. ಇದು ಶಾರೀರಕದ ಅವಿರೋಧಾಖ್ಯ ದ್ವಿತೀಯಾಧ್ಯಾಯದಲ್ಲಿ ಹೇಳಿರುವದು.

ಮತ್ತು ಸಾಧನಫಲ ಸಂಜ್ಞೆಯುಳ್ಳ ತೃತೀಯ, ಚತುರ್ಥ ಈ ಎರಡು ಅಧ್ಯಾಯದಲ್ಲಿ ಸಾಧನ ಮತ್ತು ಫಲ ಇವುಗಳ ನಿರ್ಣಯವಿರುವದು. ಅದರ ವಿಚಾರದಿಂದ ಸಾಧನದಲ್ಲಿಯೂ, ಫಲದಲ್ಲಿಯೂ ಇರುವ ಸಂಶಯಗಳ ನಿವೃತ್ತಿಯಾಗುವದು.

ಇನ್ನು ಶಾರೀರಕ (ಬ್ರಹ್ಮಸೂತ್ರ) ದ ಪ್ರತಿ ಒಂದು ಅಧ್ಯಾಯದಲ್ಲಿ ನಾಲ್ಕು ನಾಲ್ಕು ಪಾದಗಳಿವೆ. ಆ ಪಾದಗಳ ಸಂಜ್ಞೆ ಮತ್ತು ಸೂತ್ರದ ಸಂಖ್ಯೆಯಾವವೆಂದರೆ ;—

### ಪ್ರಥಮಾಧ್ಯಾಯದಲ್ಲಿ :—

(೧) ಸ್ಪಷ್ಟಸಂಜ್ಞಕಪಾದದಲ್ಲಿ ಸೂ—೩೧. ಇರುವದು
(೨) ಅಸ್ಪಷ್ಟಪಾದದಲ್ಲಿ ಸೂ—೩೨.
(೩) ಜ್ಞೇಯಪಾದದಲ್ಲಿ ಸೂ—೪೩.
(೪) ಚಿಂತಾಪಾದದಲ್ಲಿ ಸೂ—೨೮.

### ದ್ವಿತೀಯಾಧ್ಯಾಯದಲ್ಲಿ :—

(೧) ಸ್ಮೃತಿಪಾದದಲ್ಲಿ ಸೂ—೩೭.
(೨) ತರ್ಕಪಾದದಲ್ಲಿ ಸೂ—೪೫.
(೩) ಭೂತಪಾದದಲ್ಲಿ ಸೂ—೫೩.
(೪) ಲಿಂಗಪಾದದಲ್ಲಿ ಸೂ—೨೨.

### ತೃತೀಯೋಧ್ಯಾಯದಲ್ಲಿ :—

(೧) ವೈರಾಗ್ಯಪಾದದಲ್ಲಿ ಸೂ—೨೭.
(೨) ತತ್ವವಿವೇಕ ಪಾದದಲ್ಲಿ ಸೂ—೪೧.
(೩) ಗುಣೋಪಸಂಹಾರ ಪಾದದಲ್ಲಿ ಸೂ—೬೬.
(೪) ಸಾಧನ ಪಾದದಲ್ಲಿ ಸೂ—೫೨.

### ಚತುರ್ಥೋಧ್ಯಾಯದಲ್ಲಿ :—

(೧) ಜೀವನ್ಮುಕ್ತಿ ಪಾದದಲ್ಲಿ ಸೂ—೧೯.
(೨) ಉತ್ಕ್ರಾಂತಿ ಪಾದದಲ್ಲಿ ಸೂ—೨೧.
(೩) ಬ್ರಹ್ಮಪ್ರಾಪ್ತಿ ಪಾದದಲ್ಲಿ ಸೂ—೧೬.
(೪) ಬ್ರಹ್ಮಲೋಕ ಪಾದದಲ್ಲಿ ಸೂ—೨೨.

ಆ ಹದಿನಾರು ಪಾದಗಳಲ್ಲಿ ಯಥಾಸಂಜ್ಞಕ ಪದಾರ್ಥಗಳಂ ನಿರೂಪಿಸಿ ರುವರು. ಎಲ್ಲಾ ಮೂಲ ಸೂತ್ರಗಳು ಶ್ರೀಮದ್ವ್ಯಾಸ ಭಗವಂತನಿಂದ ಮಾಡ ಲ್ಪಟ್ಟಿರುವದು. ಅದಕ್ಕೆ ಪೂಜ್ಯಪಾದಪದ್ಮರಾದ ಶ್ರೀ ಶಂಕರಾಚಾರ್ಯರು ಭಾಷ್ಯವಂ ಮಾಡಿರುವರು. ಸೂತ್ರ ಮತ್ತು ಭಾಷ್ಯದ ಲಕ್ಷಣವು ಶಾಸ್ತ್ರಗಳಲ್ಲಿ,

ಶ್ಲೋ॥ ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ |
ಅಸ್ತೋಭ್ಯಮನವದ್ಯಂಚ ಸೂತ್ರಂ ಸೂತ್ರವಿದೋವಿ
ದುಃ ॥ ೧ ॥ ಸೂತ್ರಾರ್ಥೋವರ್ಣ್ಯತೇಯತ್ರ ವಾಕ್ಯೈ
ಸೂತ್ರಾನುಕಾರಿಭಿಃ | ಸ್ವಪದಾನಿಚ ವರ್ಣ್ಯಂತೇ ಭಾ
ಷ್ಯಂ ಭಾಷ್ಯ ವಿದೋವಿದುಃ ॥ ೨ ॥

ಹೀಗೆ ಪೇಳಿರುವದು.

ಅರ್ಥ—ಯಾವದರಲ್ಲಿ ಅಲ್ಪಾಕ್ಷರವೂ, ಅಸಂಶಯವೂ, ಸರ್ವತ್ರ ಸಾ ರಾರ್ಥವೂ, ಅನಿರುದ್ಧವೂ ಮತ್ತು ನಿರ್ದೋಷವೂ ಇರುವದೋ, ಅದನ್ನು ಸೂತ್ರ ಜ್ಞಾತರು ಸೂತ್ರವೆಂದು ಪೇಳುವರು (೧).

ಬಳಿಕ ಯಾವದರಲ್ಲಿ ಸೂತ್ರಾನುಕಾರಿ ಸಮಾನವಾಕ್ಯಗಳಿಂದ ಸೂತ್ರಾ ರ್ಥವರ್ಣನೆ ಮಾಡಲ್ಪಡುವದೋ, ಹಾಗೆಯೇ ತನ್ನ ಪದಗಳಿಗೆ ಸಪರ್ಯಾಯ ವರ್ಣನೆಗೈಯ್ಯಲ್ಪಡುವದೋ ಅದನ್ನು ಭಾಷ್ಯವೇತ್ತರು ಭಾಷ್ಯವೆಂದರಿಯುವರು,

ಆ ಶಾರೀರಕ ಭಾಷ್ಯದಮೇಲೆ ಅನೇಕ ವ್ಯಾಖ್ಯಾನಗಳಿರುವವು. ಆ ಶಾರೀರಕದ ನಾಲ್ಕು ಅಧ್ಯಾಯಗಳ ವಿಚಾರದಿಂದ,

೧—ಈಶ್ವರಗತ ಸಂಶಯವೂ,
೨—ಜೀವಗತ ಸಂಶಯವೂ,
೩—ಸಾಧನಗತ ಸಂಶಯವೂ
೪—ಫಲಗತ ಸಂಶಯವೂ, ಈ ಚತುರ್ವಿಧ ಪ್ರಮೇಯದ ಸಂಶಯವು ಪರಿಹಾರವಾಗುವದು. ಆ ಚತುರ್ವಿಧ ಸಂಶಯದ ಸ್ವರೂಪವೂ, ಅದರ ನಿವೃ ತ್ತಿಯ ವಿಚಾರವೂ ಸಹ ಶಾಸ್ತ್ರ*ಗಳಲ್ಲಿ ಪ್ರಸಿದ್ಧವಾಗಿ ಪೇಳಿರುವವು. ವಿಸ್ತಾರ ಭಯದಿಂದ ಇಲ್ಲಿ ಬರೆಯಲಿಲ್ಲ; ಹೀಗೆ ಫಲಸಹಿತವಾದ ಮನನದ ಲಕ್ಷಣವು ಪೇಳಲ್ಪಟ್ಟಿತು.

* ನಮ್ಮಿಂದ ಬರೆಯಲ್ಪಟ್ಟ ಗೀತಾ ಗೂಢಾರ್ಥದೀಪಿಕೆಯ ೧೮ ನೇ ಅಧ್ಯಾಯದ ೧೦ ನೇ ಶ್ಲೋಕದ ವ್ಯಾಖ್ಯಾನದ ಟಿಪ್ಪಣಿಯಲ್ಲಿ ಈ ಪ್ರಮಾಣ, ಪ್ರಮೇಯಗತ ಸಂಶಯಗಳ ಸ್ವರೂಪವು ಬಹು ವಿಸ್ತಾರವಾಗಿ ಬರೆಯಲ್ಪಟ್ಟಿದೆ.

ಅ—ಈಗ ನಿದಿಧ್ಯಾಸನದ ಲಕ್ಷಣವಂ ಪೇಳುವರು.

## (೩) ನಿದಿಧ್ಯಾಸ ಲಕ್ಷಣ:—

ವಿಜಾತೀಯ ವೃತ್ತಿಯ ತಿರಸ್ಕಾರ ಪೂರ್ವಕ ಸಜಾತೀಯ ವೃತ್ತಿಯ ಪ್ರವಾಹವು ನಿದಿಧ್ಯಾಸನವೆನ್ನಲ್ಪಡುವುದು: ಪ್ರಮಾಣ-ಸಂಶಯ-ವಿಕಲ್ಪ-ನಿದ್ರಾ-ಸ್ಮೃತಿ ಈ ವೃತ್ತಿಗಳೆಲ್ಲವು ಇಲ್ಲಿ ವಿಜಾತೀಯವೆನಿಸುವವು. ಇವುಗಳ ಅನಾದರದಿಂದ ತೈಲಧಾರೆಯಂತೆ ನಿರಂತರ ಬ್ರಹ್ಮಾಕಾರವಾಗಿ, ವೃತ್ತಿಗೆ ಪ್ರವಾಹವನ್ನುಂಟುಮಾಡಲು ಅದನ್ನು ಪ್ರತ್ಯಯ ಸಂತತಿಯೆಂತಲೂ, ಏಕತಾನತ್ವವೆಂತಲೂ, ಪೇಳುವರು. ಆ ನಿದಿಧ್ಯಾಸನದಿಂದ ವಿಪರ್ಯಯವಾಸನೆ ನಾಶವಾಗುವದು. ಈ ಪೂರ್ವೋಕ್ತ ಶ್ರವಣಾದಿ ಮೂರು ಸಾಧನಗಳಿಂದ ಪ್ರತಿಬಂಧವಿಲ್ಲದೆ ಉಂಟಾದ ವಿದ್ಯಾರೂಪವೆನಿಪ್ಪ ಚರಮವೃತ್ತಿಯಿಂದ ಬ್ರಹ್ಮವಂ ಪೊಂದಲಾಗುವದು. ಈ ವಿಷಯ "**ದೃಶ್ಯತೇತ್ವಗ್ರ್ಯಯಾಬುದ್ಧ್ಯಾ—ಮನಸೈವಾನುದ್ರಷ್ಟವ್ಯಂ**" ಇತ್ಯಾದಿ ಶೃತಿಗಳಲ್ಲಿ ಸಂಸ್ಕೃತಬುದ್ಧಿವೃತ್ತಿಯಿಂದ, ಅಥವಾ, ಮನೋವೃತ್ತಿಯಿಂದ ಬ್ರಹ್ಮವು ದೃಷ್ಟವ್ಯವೆಂದು ಸ್ಪಷ್ಟವಾಗಿ ಪೇಳಿರುವದು. ಸಂಸ್ಕೃತಬುದ್ಧಿ ಎಂಬುವದರಿಂದ, ಶಾಸ್ತ್ರೋಕ್ತವಾದ ಪತಳತ್ವವೂ, ಪ್ರತ್ಯಕ್ತ್ವವೂ, ಸಂಸ್ಕಾರ ಶ್ರೇಷ್ಠತ್ವವೂ, ಮತ್ತು ನಿರ್ಮಲತೆಯೂ, ಈ ನಾಲ್ಕು ಬ್ರಹ್ಮಾಕಾರವೃತ್ತಿಗೆ ಗುಣವೆಂದು ತಿಳಿಯತಕ್ಕದ್ದು.

**ಶಂಕಾ**:-ಬ್ರಹ್ಮವು ವೃತ್ತಿಗೆ ವಿಷಯವೆಂದು ಅಂಗೀಕರಿಸಿದರೆ, ಬ್ರಹ್ಮಕ್ಕೆ ದೃಶ್ಯತ್ವ ಪ್ರಾಪ್ತಿಯಾದೀತು ?

**ಸಮಾಧಾನ**:—ವೃತ್ತಿಗೆ ಆವರಣಭಂಗತ್ವರೂಪವೂ, ಚೇತನದಲ್ಲಿ ಫಲವೂ ಇರುವದರಿಂದ ವೃತ್ತಿಗೆ ವೇದ್ಯವೆಂದು ಪೇಳಿರುವದು ಎಂತೆಂದರೆ;— "**ವೃತ್ತಿವ್ಯಾಪ್ತಿಮಪೇಕ್ಷ್ಯೈವ ವೇದ್ಯತ್ವಂ ಪ್ರಾಹುರಾತ್ಮನಃ**" ಇದರ ಅರ್ಥ ಸ್ಪಷ್ಟವಾಗಿದೆ. ಅಭಿಪ್ರಾಯವೇನಂದರೆ ;—ವೃತ್ತಿ ಎರಡು ವಿಧವಾಗಿರುವದು.

ಒಂದು ವೃತ್ತಿವ್ಯಾಪ್ತಿ.

ಮತ್ತೊಂದು ಫಲವ್ಯಾಪ್ತಿ. ಹೊರಗಣ ಘಟಾದಿ ಜಡಪದಾರ್ಥದ ಜ್ಞಾನದಲ್ಲಿ ಫಲವ್ಯಾಪ್ತಿಗೆ ಉಪಯೋಗವುಂಟು. ಹ್ಯಾಗೆಂದರೆ ;—ವೃತ್ತಿಯಿಂದ ಆವರಣ ಭಂಗವಾದರೂ, ಆ ವೃತ್ತಿಯಲ್ಲಿರುವ ಫಲ, ಅಂದರೆ ಚಿದಾಭಾಸ; ಅದಿಲ್ಲದೆ ಘಟಾದಿಗಳ ಪ್ರಕಾಶವಾಗುವದಿಲ್ಲ; ಎಂತೆಂದರೆ—ಒಂದಾನೊಂದು ಕಬ್ಬಿಣದ

ಗುಂಡು ಮಣ್ಣಿನ ಪಾತ್ರೆಯಿಂದ ಮುಚ್ಚಿರುವಾಗ, ಅದರ ಆವರಣ ರೂಪವಾದ ಪಾತ್ರೆಯನ್ನು ದಂಡದಿಂದ ಭಂಜಿಸಿದರೂ ದೀಪವಿಲ್ಲದೆ ಗುಂಡಿನ ಪ್ರಕಾಶವಾಗುವದಿಲ್ಲ; ಮತ್ತೇನಂದರೆ;—ದೀಪದಿಂದಲೇ ಪ್ರಕಾಶವಾಗುವದು. ಹಾಗೆ ವೃತ್ತಿಯಿಂದ ಘಟಾದಿಗಳ ಆವರಣ ಭಂಗವಾಗಿ, ಆಭಾಸದಿಂದ ಘಟಾದಿಗಳ ಪ್ರಕಾಶವಾಗುವದು. ಮತ್ತು ಬ್ರಹ್ಮಜ್ಞಾನದಲ್ಲಿ ಫಲರೂಪವಾದ ಆಭಾಸದ ಉಪಯೋಗವಿಲ್ಲ; ಯಾಕೆಂದರೆ;—ಒಂದಾನೊಂದು ರತ್ನವು ಮೃತ್ಪಾತ್ರೆಯಿಂ ಮುಚ್ಚಲ್ಪಟ್ಟು ಇರಲು, ಅಲ್ಲಿ ದಂಡದಿಂದ ಪಾತ್ರೆಯನ್ನು ಧ್ವಂಸಮಾಡಿದರೆ, ಮಣಿಯು ತಾನೆ ಪ್ರಕಾಶಿಸುವದು. ಅದರ ಪ್ರಕಾಶದಲ್ಲಿ ದೀಪಕದ ಅಪೇಕ್ಷೆ ಇರುವದಿಲ್ಲ. ಇದರಂತೆ ಮಹಾವಾಕ್ಯವಿಚಾರದಿಂ ಪುಟ್ಟಿದ ವೃತ್ತಿಯಿಂದ ಅಥವಾ ವೃತ್ತಿ ಆರೂಢ ಚೇತನದಿಂದ ಅಜ್ಞಾನದಿಂದಾದ ಆವರಣವು ಭಂಗವಾಗಲು, ಬ್ರಹ್ಮವು ಸ್ವಯಂಪ್ರಕಾಶರೂಪದಿಂ ವೃತ್ತಿಯಲ್ಲಿ ಭಾನವಾಗುವದು. ಅಲ್ಲಿ ಆಭಾಸದ ಉಪಯೋಗವಿಲ್ಲ; ಅವೆಂತೆನೆ—

ಶ್ಲೋ॥ ಬ್ರಹ್ಮಣ್ಯಜ್ಞಾನನಾಶಾಯ ವೃತ್ತಿವ್ಯಾಪ್ತಿರಪೇಕ್ಷಿತಾ ।
ಸ್ವಯಂ ಪ್ರಕಾಶರೂಪತ್ವಾ ನ್ನಾಭಾಸ ಉಪಯುಜ್ಯತೇ ॥

ಇದರ ಅರ್ಥ—ಬ್ರಹ್ಮದಲ್ಲಿ ಅಜ್ಞಾನ ನಾಶಕ್ಕೋಸುಗ ವೃತ್ತಿವ್ಯಾಪ್ತಿಯ ಅಪೇಕ್ಷೆ ಇರುವದು. ಮತ್ತು ಬ್ರಹ್ಮವಾದರೋ ಸ್ವಯಂಪ್ರಕಾಶರೂಪವಾಗಿರುವದ್ದರಿಂದ ಅದರಲ್ಲಿ ಆಭಾಸದ ಉಪಯೋಗವಿಲ್ಲ. ಆದ್ದರಿಂದ ಬ್ರಹ್ಮಕ್ಕೆ ದೃಶ್ಯತ್ವಪ್ರಾಪ್ತಿಯಾಗುವದಿಲ್ಲ.

ಆದರೆ ಆ ಅಹಂಬ್ರಹ್ಮವೆಂಬ ವೃತ್ತಿಯಿಂದ ಗಮ್ಯವಾಗುವ ವಸ್ತುವು ಯಂಥಾದ್ದು ? ಹೀಗೆ ತಿಳಿಯಲಪೇಕ್ಷೆಯುಂಟಾದರೆ;—ಪೇಳುತ್ತಾರೆ.

## [೬] ಬ್ರಹ್ಮವು ತುರೀಯ ಸ್ವರೂಪ:—

(ತುರೀಯಮಿತಿ)—ಜಾಗ್ರದಾದಿ ಮೂರು ಅವಸ್ಥೆಗಳಲ್ಲಿ, ಅಥವಾ ವಿಶ್ವಾದಿತ್ರಯಗಳಲ್ಲಿ, ಅಥವಾ ವಿರಾಟಾದಿ ಮೂರರಲ್ಲಿ ಯಾವದು ಅನುಸ್ಯೂತವಾದ ಚೇತನಮಾತ್ರವಿರುವದೋ, ಅದಕ್ಕೆ ತುರೀಯವೆಂದು ಪೆಸರು. ಎಂತೆಂದರೆ;—

ಶ್ಲೋ॥ ಸತ್ವಾಜ್ಜಾಗರಣಂ ವಿದ್ಯಾ 'ದ್ರಜಸಾ ಸ್ವಪ್ನಮಾದಿಶೇತ್ ।
ಪ್ರಸ್ವಾಪಂ ತಮಸಾಜಂತೋಃ ಸ್ತುರೀಯಂ ತ್ರಿಷು ಸಂತತಂ॥೧॥

ಹಾಗೆಯೇ— ಯದಿ ಜಾಗರಿತ ಪ್ರಭೃತಿ ತ್ರಿತಯಂ
ಪರಿಕಲ್ಪಿತಮಾತ್ಮನಿ ಮೂಢಧಿಯಾ ||
ಅಭಿಧಾನಮಿದಂ ತದಪೇಕ್ಷ್ಯಭವೇ
ತ್ಪರಮಾತ್ಮ ಪದಸ್ಯ ತುರೀಯಮಿತಿ || ೨ ||

ಮತ್ತು— ವಿರಾಟ್‌ಹಿರಣ್ಯಗರ್ಭಶ್ಚ ಕಾರಣಂ ಚೇತ್ಯುಪಾಧಯಃ ||
ಈಶಸ್ಯಯತ್ತ್ರಿಭಿರ್ಹೀನಂ ತುರೀಯಂ ತತ್ಪದಂ ವಿದುಃ ||೩||

ಇವುಗಳ ಅರ್ಥವೇನೆಂದರೆ;—(೧) ಪ್ರಾಣಿಗಳಿಗೆ ಸತ್ವದಿಂ ಜಾಗ್ರತ್, ರಜದಿಂ ಸ್ವಪ್ನ, ತಮದಿಂದ ಸುಷುಪ್ತಿ ಆಗುವದು. ಅವುಗಳಲ್ಲಿ ನಿರಂತರ ವ್ಯಾಪಕವಾದ್ದನ್ನು ತುರೀಯವೆಂದರಿಯತಕ್ಕದ್ದು.

(೨) ಯಾವಾಗ ಮೂಢಬುದ್ಧಿಯಿಂದ ಆತ್ಮನಲ್ಲಿ ಜಾಗ್ರದಾದಿ ಮೂರು ಕಲ್ಪಿಸಲ್ಪಡುವದೋ, ಆಗ ಅವುಗಳ ಅಪೇಕ್ಷೆಯಿಂ ಪರಮಾತ್ಮಪದಕ್ಕೆ ತುರೀಯವೆಂಬ ನಾಮವಾಗುವದು.

(೩) ವಿರಾಟ್, ಹಿರಣ್ಯಗರ್ಭ, ಮತ್ತು ಅವ್ಯಾಕೃತ, ಇವು ಮೂರು ಈಶ್ವರನಿಗೆ ಉಪಾಧಿಗಳಾಗಿರುವವು. ಅವುಗಳಿಂ ರಹಿತವಾದ ಯಾವ ಚೇತನಮಾತ್ರವುಂಟೋ, ಅದನ್ನು ತುರೀಯ ಪದವೆಂದು ವಿದ್ವಾಂಸನು ತಿಳಿಯುವನು.

ತಾತ್ಪರ್ಯವೇನಂದರೆ;—ತತ್ಪದ ಮತ್ತು ತ್ವಂ ಪದದ ಲಕ್ಷ್ಯಾರ್ಥಕ್ಕೆ ತುರೀಯವೆಂದು ಪೆಸರು. ಆ ವೃತ್ತಿಗಮ್ಯವಾದ ಯಾವ ತುರೀಯವು ಆನಂದ ರೂಪವಾಗಿ, ಪ್ರಕಾಶರೂಪವಾಗಿ, ನಿಷ್ಪ್ರಪಂಚವಾಗಿ, ಅಪರಿಚ್ಛೇದ್ಯವಾಗಿ, ನಿತ್ಯ ಪರಂಬ್ರಹ್ಮವೆನ್ನಲ್ಪಡುವದೋ, ಅದೇ ನಾನಾಗಿರುವೆನು. ಇದು ಮೂರನೇ ಶ್ಲೋಕದ ಅರ್ಥವು || ೩ ||

ಇತಿ ಶ್ರೀ ಸುಬೋಧನೋಪದೇಶ ಟೀಕಾಯಾಂ ಬೋಧಾಖ್ಯ
ಪ್ರಥಮೋಪದೇಶಃ || ೧ ||.

—: ಶ್ರೀ ಶ್ರೀ ಶಿವೋಹಂ ಶ್ರೀ ಶ್ರೀ :—

ಆ—ಹಿಂದೆ ಮೂರನೇ ಶ್ಲೋಕದಲ್ಲಿ ಜ್ಞೆಯವಸ್ತುವಂ ಪ್ರತಿಪಾದಿಸಿದರು. ಅಲ್ಲಿ ಜ್ಞೇಯತತ್ವದ ಜ್ಞಾನವಾದರೂ, ವಿಶ್ವವು ಇದ್ದುಕೊಂಡಿರುವದ್ದರಿಂದ, ಅನರ್ಥದ ನಿವೃತ್ತಿ ಸಂಭವಿಸುವದಿಲ್ಲ; ಹೀಗೆ ಶಂಕೆಯಾದರೆ, ಜಗತ್ತಿಗೆ ಜ್ಞಾನನಿವರ್ತ್ಯತ್ವದಿಂದ ಮಿಥ್ಯಾತ್ವವಂ ತೋರಿಸುತ್ತಾ ಈಗ ಪರಮಾರ್ಥ ತತ್ವವನ್ನು ಮುಂದಣ ನಾಲ್ಕನೇ ಶ್ಲೋಕದಿಂದ ಆಚಾರ್ಯರು ಪ್ರತಿಪಾದಿಸುತ್ತಾರೆ.



|| ಶ್ರೀ ಗಣಪತಿ ಶಾರದಾ ಗುರುಭ್ಯೋ ನಮಃ ||

—: ಅಥ ದ್ವಿತೀಯ ಅನುಭವೋಪದೇಶ ||೨|| :—

||೧|| ಪರಮಾರ್ಥ ತತ್ವನಿರೂಪಣ.

|| ಯದಜ್ಞಾನತೋಭಾತೀತಿ ||

ಮೂ:—ಯದಜ್ಞಾನತೋ ಭಾತಿ ವಿಶ್ವಂ ಸಮಸ್ತಂ |
ವಿನಷ್ಟಂ ಚ ಸದ್ಯೋ ಯದಾತ್ಮಪ್ರಬೋಧೇ ||
ಮನೋವಾಗತೀತಂ ವಿಶುದ್ಧಂ ವಿಮುಕ್ತಂ |
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ||೪||

ಯಾವ ಬ್ರಹ್ಮದ ಅಜ್ಞಾನದಿಂದ ಎಲ್ಲಾ ವಿಶ್ವವು ತೋರುತ್ತಿರುವದೋ, ಮತ್ತು ಯಾವ ಪ್ರತ್ಯಗಭಿನ್ನ ಬ್ರಹ್ಮಸ್ವರೂಪದ ಜ್ಞಾನವಾಗಲು, ಸದ್ಯವಿನಾಶವಾಗುವದೋ, ಇನ್ನು ಯಾವದು ಮನವಾಣಿಗಳಿಗೆ ಅತೀತವಾಗಿಯೂ, ವಿಶುದ್ಧವಾಗಿಯೂ, ವಿಮುಕ್ತವಾಗಿಯೂ ಇರುವದೋ, ಆ ನಿತ್ಯಪರಂಬ್ರಹ್ಮ ನಾನಾಗಿರುವೆನು. ಇದು ಪದದ ಅರ್ಥ:—

[೧] ವಿಶ್ವದ ತೋರಿಕೆಗೆ ಕಾರಣ, ಅಜ್ಞಾನ.

ಟೀಕಾ:—ಯಾವ ಬ್ರಹ್ಮದ ವಿಶೇಷ ರೂಪಾಜ್ಞಾನದಿಂದ ಭೂತಭೌತಿಕ, ಸ್ಥಾವರ ಜಂಗಮವಾದ ಸಮಸ್ತ, ನಾಮರೂಪಕ್ರಿಯಾತ್ಮಕ ಪ್ರಪಂಚವು ತೋರುತ್ತಿರುವದೋ.

(ಟಿ) ಇಲ್ಲಿ ಜಗತ್ತಿನ ತೋರಿಕೆಗೆ ಕಾರಣ ಅಜ್ಞಾನವೆಂದು ಹೇಳಿದ್ದರಿಂದ ಪ್ರಧಾನ, ಪರಮಾಣ್ವಾದಿ ಅನ್ಯಮತಗಳ ಅಭಿಮತವಾದ ಕಾರಣಗಳನ್ನು ನಿರಾಕರಿಸಿದರೆಂದು ತಿಳಿಯತಕ್ಕದ್ದು.

ಬಳಿಕ ಯಾರೋ ಒಬ್ಬರು ಶ್ರುತಿಶಾಸ್ತ್ರಗಳಿಂದ ಶುದ್ಧ ಬ್ರಹ್ಮವು ಕಾರಣವೆಂದು ಕೇಳ್ವರುವದೆಂದರೆ;—

ಅದನ್ನು ಕೇಳು! ಎಲ್ಲಿ ಬ್ರಹ್ಮಕಾರಣವೆಂದು ಪೇಳಿರುವದೋ, ಅಲ್ಲಿಯೂ ಅಜ್ಞಾನದ ಅಪೇಕ್ಷೆಯಿಂದಲೇ ಪೇಳಿರುವದು. ಎಂತೆಂದರೆ—ಶುದ್ಧಬ್ರಹ್ಮವು ಅಸಂಗವಾಗಿದೆ. ಅದರಲ್ಲಿ ಕಾರ್ಯಕಾರಣಭಾವ ಸಂಭವಿಸುವದಿಲ್ಲ; ಆದ್ದರಿಂದ ಅಜ್ಞಾನವೇ ಮುಖ್ಯ ಕಾರಣವಾಗಿರುವದು. ಅದೆಂತೆಂದರೆ;—

**ಶ್ಲೋ॥ ಅಸ್ಯ ದ್ವೈತೇಂದ್ರ ಜಾಲಸ್ಯ ಯದುಪಾದಾನಕಾರಣಂ ॥**
**ಅಜ್ಞಾನಂ ತದುಪಾಶ್ರಿತ್ಯ ಬ್ರಹ್ಮಕಾರಣಮುಚ್ಯತೇ ॥**

ಎಂಬುವದ್ದರಿಂದಲೂ ೧,

"**ಅಜ್ಞಾನಮೇವಾಸ್ಯಹಿ ಮೂಲಕಾರಣಂ**" ಎಂದು ಪೇಳುವದ್ದರಿಂದಲೂ ೨,

"**ಅಜ್ಞಾನಾದ್ಬ್ರಹ್ಮಣೋಜಾತ ಆಕಾಶೋ ಬುದ್ಬುದೋಪಮಂ**" ಎನ್ನುವದ್ದರಿಂದಲೂ ೩,

"**ಆತ್ಮಾಜ್ಞಾನಾಜ್ಜಗದ್ಭಾತಿ**" ಇತ್ಯಾದಿ ಶಾಸ್ತ್ರವಚನಗಳಿಂದಲೂ ೪. ಅಜ್ಞಾನವೇ ಕಾರಣವೆಂದು ಪೇಳಿರುವರು. ಇವುಗಳ ಅರ್ಥವೇನೆಂದರೆ;—

೧:—ಈ ಇಂದ್ರಜಾಲೋಪಮೇಯವಾದ ದ್ವೈತಪ್ರಪಂಚಕ್ಕೆ ಯಾವ ಉಪಾದಾನಕಾರಣವಾದ ಅಜ್ಞಾನವುಂಟೋ, ಅದರ ಆಶ್ರಯದಿಂದ ಬ್ರಹ್ಮವನ್ನು ಕಾರಣವೆಂದು ಪೇಳುವರು. ಇದು ಮೊದಲನೇ ವಾಕ್ಯದ ಅರ್ಥವು.

೨:—ಈ ಸಂಸಾರಚಕ್ರಕ್ಕೆ ಅಜ್ಞಾನವೇ ಮೂಲಕಾರಣವಾಗಿರುವದು. ಇದು ಎರಡನೇ ವಾಕ್ಯದ ಅರ್ಥವು.

೩:—ಬ್ರಹ್ಮದ ಅಜ್ಞಾನದಿಂದ ಬುದ್ಬುದೋಪಮವಾದ ಆಕಾಶ ಉತ್ಪತ್ತಿಯಾಯಿತು. ಇದು ಮೂರನೇ ವಾಕ್ಯದ ಅರ್ಥವು.

೪:—ಆತ್ಮನ ಅಜ್ಞಾನದಿಂದ ಜಗತ್ತು ಭಾಸಿಸುತ್ತಿರುವದು. ಇದು ನಾಲ್ಕನೇ ವಾಕ್ಯದ ಅರ್ಥವು.

ಬಳಿಕ ದೇಶಕಾಲಾದಿಗಳಲ್ಲೂ, ಭೂತಗಳಲ್ಲೂ ಕಾರಣತ್ವ, ದೇಹಾದಿಗಳಲ್ಲಿ ಕಾರ್ಯತ್ವ, ಈ ಯಾವ ತೋರಿಕೆಯುಂಟೋ, ಅದಾದರೂ ಸ್ವಪ್ನ ಪದಾರ್ಥಗಳೊಳಗಣ ಕಾರಣ ಕಾರ್ಯತ್ವದಂತೆ ಎಲ್ಲಾ ವಿಶ್ವವು ಅವಿದ್ಯಾ ಕಲ್ಪಿತವಾಗಿರುವದು, ಎಂತೆಂದರೆ;—

"ನಿದ್ರಾಕಲ್ಪಿತದೇಶಕಾಲವಿಷಯ ಜ್ಞಾತಾದಿ ಸರ್ವಂಯಥಾ ।
ಮಿಥ್ಯಾತದ್ವದಿಹಾಪಿ ಜಾಗ್ರತಿ ಜಗತ್ಸ್ವಾಜ್ಞಾನ ಕಾರ್ಯತ್ವತಃ" ॥

ಅಂದರೆ;—ಸ್ವಪ್ನದಲ್ಲಿ ನಿದ್ರಾಕಲ್ಪಿತವಾದ ದೇಶಕಾಲ ವಿಷಯಗಳು, ಜ್ಞಾತಾದಿ ತ್ರಿಪುಟಿಗಳು ಈ ಸರ್ವವೂ ಹ್ಯಾಗೆ ಮಿಥ್ಯವಾಗಿ ತೋರುವವೋ, ಹಾಗೆ ಈ ಜಾಗ್ರತ್ತಿನಲ್ಲಿಯೂ, ಆತ್ಮನ ಅಜ್ಞಾನಕಾರ್ಯವಾದ್ದರಿಂದ ಸಕಲ ಜಗತ್ ಮಿಥ್ಯವಾಗಿ ತೋರುತ್ತಿರುವದು, ಎಂದರ್ಥ—

ಮತ್ತು ಸ್ವಪ್ನ, ಜಾಗ್ರತ್ತೆರಡರಲ್ಲಿಯೂ ಅಲ್ಪಕಾಲ ಸ್ಥಾಯಿತ್ವವೂ, ಬಹುಕಾಲ ಸ್ಥಾಯಿತ್ವವೂ ಈ ಭೇದದ ತೋರಿಕೆಯಾದರೂ ಅದೂ ಕೂಡ, ಅವಿದ್ಯೆಯಿಂದಲೇ ತೋರುತ್ತಿರುವದು.

ಇನ್ನು ಶಾಸ್ತ್ರಕಾರರು ಸ್ವಪ್ನಕ್ಕೆ ಪ್ರಾತಿಭಾಸಿಕ ಸತ್ತೆಯನ್ನೂ, ಜಾಗ್ರತ್ಪದಾರ್ಥಗಳಿಗೆ ವ್ಯಾವಹಾರಿಕ ಸತ್ತೆಯನ್ನೂ ಪೇಳಿರುವದೂ ಕೂಡ, ಜಾಗ್ರತ್ತಿನ ಮಿಥ್ಯಾತ್ವದ ತಿಳುವಳಿಕೆಯು ಜಿಜ್ಞಾಸುವಿಗೆ ಆಗಲೋಸುಗ ಅದರ ಉದಾಹರಣ ನಿಮಿತ್ತ ಸತ್ತೆಗೆ ಭೇದವಂ ಗ್ರಹಿಸಿರುವದಲ್ಲದೆ ಅನ್ಯಪ್ರಯೋಜನವಿಲ್ಲ;—

ಇನ್ನು ಸಿದ್ಧಾಂತದಲ್ಲಿ ವ್ಯವಹಾರಸತ್ತೆಗೆ ಅಂಗೀಕಾರವಿಲ್ಲ. ಮತ್ತೇನೆಂದರೆ;—ಚೇತನಕ್ಕೆ ಪರಮಾರ್ಥಸತ್ತೆ ಇರುವದು. ಅದರಿಂ ಭಿನ್ನವಾದ ಎಲ್ಲಾ ಅನಾತ್ಮ ಪದಾರ್ಥಗಳಿಗೂ, ಪ್ರಾತಿಭಾಸಿಕ ಸತ್ತೆ ಇರುವದು. ಅದೇನೆಂದರೆ;—ಸಿದ್ಧಾಂತದಲ್ಲಿ ದೃಷ್ಟಿ ಸೃಷ್ಟಿ ವಾದವೇ ಪ್ರಧಾನವು. "ದೃಷ್ಟಿರೇವಸೃಷ್ಟಿ" ಅಥವಾ "ದೃಷ್ಟಿ ಅನುಸೃಷ್ಟಿ" ಎಂದು ಪೇಳಿರುವರು.

ಬಳಿಕ ಯಾರಾದರು ವೇದದಲ್ಲಿ ಕ್ರಮವಾಗಿ ಸೃಷ್ಟಿ ಕೇಳ್ಪರುವದೆಂದರೆ? ಅದನ್ನು ಕೇಳು! ಸೃಷ್ಟಿಯ ಕ್ರಮವಂ ಪೇಳುವದರಲ್ಲಿ ವೇದಕ್ಕೆ ತಾತ್ಪರ್ಯ ಎಲ್ಲ; ಮತ್ತೇನೆಂದರೆ;—ಯಾವದಾದರೂ ಒಂದು ರೀತಿಯಿಂದ ಜಗತ್ತನ್ನು ಅಧ್ಯಾರೋಪಗೊಳಿಸಿ ಜಿಜ್ಞಾಸುವಿಗೆ ಅದ್ವೈತ ಬ್ರಹ್ಮವನ್ನು ತಿಳಿಯಪಡಿಸುವದರಲ್ಲಿ, ಅಥವಾ ಕ್ರಮಕ್ಕಿಂತ ಬೇರೆಯಾಗಿ, ಲಯ ಚಿಂತನೆಯಂ ಮಾಡಿಸಿ, ಅದ್ವೈತದಲ್ಲಿ ಚಿತ್ತಸ್ಥಾಪನೆಯನ್ನುಂಟುಮಾಡುವದರಲ್ಲಿ ತಾತ್ಪರ್ಯ. ಸೃಷ್ಟಿಕ್ರಮದ ವರ್ಣನೆಯಲ್ಲಿ ಅಭಿಪ್ರಾಯವಿಲ್ಲ. ಮತ್ತು ಜಗತ್ತಿನ ಉತ್ಪತ್ತ್ಯಾದಿಯ ಜ್ಞಾನದಿಂದ ಪ್ರಯೋಜನವೂ ಸಿದ್ಧವಾಗುವದಿಲ್ಲ; ಅದೆಂತೆನೆ;—

ಶ್ಲೋ॥ ನಹಿಸರ್ಗಾದಿಜ್ಞಾನೇನ ಕಿಂಚಿತ್ಪ್ರಯೋಜನಂ ಶ್ರುತಂ ॥
ಅದ್ವಯಬ್ರಹ್ಮಾತ್ಮತಾತ್ರ ಜ್ಞಾನಂಹಿ ಪ್ರಯೋಜನವತ್ ॥

ಅರ್ಥ—ಸಗರ್ಾದಿ ಜ್ಞಾನದಿಂದ ಸ್ವಲ್ಪವೂ ಪ್ರಯೋಜನ ಕೇಳಲಿಲ್ಲ. ಮತ್ತೇ ಸಂದರೆ;—ಅದ್ವಯಬ್ರಹ್ಮಾತ್ಮಜ್ಞಾನವೇ ಇಲ್ಲಿ ಪ್ರಯೋಜನ ಉಳ್ಳದ್ದಾಗಿದೆ.

ಆದ್ದರಿಂದ ಈ ಸರ್ವದ್ವೈತಪ್ರಪಂಚವು, ರಜ್ಜುಸರ್ಪದಂತೆ ಪ್ರತೀತಿಮಾತ್ರವಾಗಿರುವದು. ತಾತ್ಪರ್ಯವೇನೆಂದರೆ;—ಅನಿರ್ವಚನೀಯ ರೂಪದಿಂ ತೋರುತ್ತಿರುವದು.

ಮತ್ತು ರಜ್ಜುಸರ್ಪ, ಅಥವಾ ಶುಕ್ತಿರಜತಾದಿ ಭ್ರಮಸ್ಥಲದಲ್ಲಿ ಒಬ್ಬರು.
ಸತ್ ಖ್ಯಾತಿಯನ್ನೂ (೧), ಮತ್ತೊಬ್ಬರು
ಅಸತ್ ಖ್ಯಾತಿಯನ್ನೂ (೨), ಬೇರೊಬ್ಬರು
ಆತ್ಮಖ್ಯಾತಿಯನ್ನೂ (೩), ಇನ್ನೊಬ್ಬರು
ಅನ್ಯಥಾಖ್ಯಾತಿಯನ್ನೂ (೪), ಬಳಿಕ ಮತ್ತೊಬ್ಬರು
ಅಖ್ಯಾತಿಯ ಖ್ಯಾತಿಯನ್ನೂ (೫), ಗ್ರಹಿಸಿರುವರು. ಆ ಐದುಮತಗಳನ್ನು ಸಿದ್ಧಾಂತ ಗ್ರಂಥಗಳಲ್ಲಿ ಖಂಡನೆಯಂ ಮಾಡಿ, ಕೊನೆಗೆ ಅನಿರ್ವಚನೀಯ ಖ್ಯಾತಿಯನ್ನೇ ಅಂಗೀಕರಿಸಿದರು. ಆದ್ದರಿಂದ ಜಗತ್ ಶುಕ್ತಿರಜತದಂತೆ ಅನಿರ್ವಚನೀಯವೆನಿಸುವದು. ಮತ್ತು ಅದರ ಜ್ಞಾನವೂ ಅನಿರ್ವಚನೀಯವೆ. (ಟಿ) ಸತ್ತು ಅಸತ್ತುನಿಂ ವಿಲಕ್ಷಣವಾದ್ದಕ್ಕೆ ಅನಿರ್ವಚನೀಯವೆಂದು ಪೆಸರು. ತಾತ್ಪರ್ಯವೇನಂದರೆ;—ಅಧಿಷ್ಠಾನದ ಜ್ಞಾನದಿಂ ಪೂರ್ವ ಯಾವದು ತೋರುವದೋ, ಮತ್ತು ಬಾಧಯೋಗ್ಯವಾಗಿರುವದೋ, ಆ ಪದಾರ್ಥವು ಅನಿರ್ವಚನೀಯವೆನಿಸಿಕೊಳ್ಳುವದು. ಆದಕಾರಣ ಈ ಜಗತ್ತು ಅವಿದ್ಯೆಯ ಪರಿಣಾಮವಾಗಿಯೂ, ಚೇತನದ ವಿವರ್ತವಾಗಿಯೂ, ಇರುವದು. ಅದಕ್ಕೆ ಆಶ್ರಯವೂ, ಅಧಿಷ್ಠಾನವೂ, ಮತ್ತು ಭಾವಾಭಾವಗಳಿಗೆ ಸಾಕ್ಷಿಯೂ ಸಹ ಒಂದು ಚೇತನವೇ ಇರುವದು. ಹೀಗೆ ಶ್ಲೋಕದ ಪ್ರಥಮ ಪಾದದಿಂದ ವಿಶ್ವದ ತೋರಿಕೆಗೆ ಹೇತುವನ್ನು ಪೇಳಿದರು. ಈಗ ದ್ವಿತೀಯ ಪಾದದಿಂದ ಆಚಾರ್ಯರು ಅದರ ನಿವೃತ್ತಿಗೆ ಹೇತುವನ್ನು ಪೇಳುವರು.

## [೨] ವಿಶ್ವದ ನಿವೃತ್ತಿಗೆ ಹೇತು. ಜ್ಞಾನ.

(ವಿನಷ್ಟಮಿತಿ) ಯಾವ ಬ್ರಹ್ಮದ ವಿಶೇಷರೂಪದಿಂದ ಯಾವ ಕಾಲದಲ್ಲಿ ಜ್ಞಾನವಾಗುವದೋ, ಅದೇ ಕಾಲದಲ್ಲಿ ವಿಶ್ವಕ್ಕೆ ಸಮೂಲ 'ವಿನಷ್ಟ' ಅಂದರೆ—ವಿನಾಶವಾಗುವದು,

ಯಾರೋ ಒಬ್ಬರು ಪ್ರಲಯದಲ್ಲಿ ವಿಶ್ವಕ್ಕೆ ನಾಶವು ಕೇಳ್ಪರುವದು ಜ್ಞಾನದಿಂದೇನು ಪ್ರಯೋಜನವೆಂದರೆ;—ಅದನ್ನು ಕೇಳು! ಹ್ಯಾಗೂ ಪ್ರಲಯ ದಲ್ಲಿ ಜಗತ್ತಿಗೆ ನಿವೃತ್ತಿಯಂ ಪೇಳಿರುವದು, ಹಾಗಾದರೂ ಅದಕ್ಕೆ ಅತ್ಯಂತ ನಿವೃತ್ತಿಯಾಗುವದಿಲ್ಲ; ಮತ್ತೇನೆಂದರೆ;—

[೧] ನಿತ್ಯಪ್ರಲಯ,
[೨] ನೈಮಿತ್ತಿಕಪ್ರಲಯ,
[೩] ಕಲ್ಪಪ್ರಲಯ,
[೪] ಮಹಾಪ್ರಲಯ, ಈ ಪ್ರಳಯಗಳಲ್ಲಿ; ಜಗತ್ತಿಗೆ ಕಾರಣದಲ್ಲಿ ಲಯ ವೆಂಬ ನಿವೃತ್ತಿಯಾದರೂ, ಪುನಃ ಯಾವಾಗ ಜೀವರುಗಳಿಗೆ ಪ್ರಾಕ್ ಕರ್ಮವು ಫಲವಂ ಕೊಡುವದಕ್ಕೆ ಸನ್ಮುಖವಾಗುವದೋ, ಆಗ ಬೀಜದಿಂದಂಕುರದಂ ತೆಯೂ, ಅಥವಾ ಮೇಘದ ಉಜ್ಜೀವನದಂತೆಯೂ, ಪುನಃ ಸೃಷ್ಟಿಯಾಗುವದು. ಬಳಿಕ ನಾನಾ ಕ್ಲೇಶಗಳೂ ತೋರುವವು. ಇನ್ನು ಜ್ಞಾನದಿಂದಾದರೋ ಸಂಸಾರಕ್ಕೆ (5) ಅತ್ಯಂತ ನಿವೃತ್ತಿಯೇ ಆಗುವದು. (೬) ಯಾವದಕ್ಕೆ ಪುನಃ ಉತ್ಪತ್ತಿಯಾಗುವದಿಲ್ಲವೋ, ಅದಕ್ಕೆ ಅತ್ಯಂತ ನಿವೃತ್ತಿಯೆಂದು ಪೆಸರು. ಕಾರಣ ಸಹಿತ ಜಗತ್ತಿಗೆ ನಿವೃತ್ತಿಯಾಗಲು ಪುನಃ ಜನ್ಮಾದಿ ಸಂಸಾರವಾಗುವದಿಲ್ಲ; ಆ ನಿವೃತ್ತಿಯು ಜ್ಞಾನದಿಂದಲೇ ಆಗುವದು. ಅದನ್ನು ಪೇಳುವರು.

" ಐಕ್ಯಜ್ಞಾನಂ ಯದೋತ್ಪನ್ನಂ ಮಹಾವಾಕ್ಯೇನ ಚಾತ್ಮನೋಃ |
ತದಾಽವಿದ್ಯಾಸ್ವಕಾರ್ಯೈಶ್ಚ ನಶ್ಯತ್ಯೇವ ನ ಸಂಶಯಃ " ||

ಅಂದರೆ—ಯಾವಾಗ ಮಹಾವಾಕ್ಯದಿಂದ ಬ್ರಹ್ಮಾತ್ಮರ ಐಕ್ಯತ್ವಜ್ಞಾನ ಉತ್ಪ ನ್ನವಾಗುವದೋ, ಆಗ ಸ್ವಕಾರ್ಯಗಳಿಂ ಸಹಿತವಾಗಿ ಅವಿದ್ಯಾ ನಾಶವಾಗು ವದು, ಇದರಲ್ಲಿ ಸಂಶಯವಿಲ್ಲ ಎಂಬುದರ್ಥ.—

ಶಂಕಾ;—ವಿಚಿತ್ರ ಶಕ್ತಿಯುಳ್ಳದ್ದು ಕರ್ಮವಾದ್ದರಿಂದ ಯಾವದಾ ದರು ಕರ್ಮವಿಶೇಷದಿಂದಲೇ ಅವಿದ್ಯೆಗೆ ನಿವೃತ್ತಿಯಾದೀತು? ಕ್ಲೇಶ ಸಾಧ್ಯ ವಾದ ಜ್ಞಾನಾಯಾಸದಿಂದ ಏನು ಪ್ರಯೋಜನ?

ಸಮಾಧಾನ:—ಕರ್ಮಕ್ಕೂ ಅವಿದ್ಯಕ್ಕೂ ವಿರೋಧವಿಲ್ಲ, ಆದಕಾರಣ ಕರ್ಮದಿಂದ ಅವಿದ್ಯೆಗೆ ನಿವೃತ್ತಿಯಾಗುವದಿಲ್ಲ. ಎಂತೆಂದರೆ:—

ಶ್ಲೋ॥ ಅವಿರೋಧಿತಯಾ ಕರ್ಮನಾವಿದ್ಯಾಂ ವಿನಿವರ್ತಯೇತ್ |
ವಿದ್ಯಾವಿದ್ಯಾಂ ನಿಹಂತ್ಯೇವ ತೇಜಸ್ತಿಮಿರ ಸಂಘವತ್ ||

ಅರ್ಥ—ಕರ್ಮಕ್ಕೂ ಅವಿದ್ಯಕ್ಕೂ ಅವಿರೋಧವಾದ್ದರಿಂದ ಕರ್ಮವು ಅವಿದ್ಯವಂ ನಿವೃತ್ತಿಸುವದಿಲ್ಲ; ಮತ್ತು ವಿದ್ಯಾವಿದ್ಯಕ್ಕೆ ವಿರೋಧವಿತುವದ್ದರಿಂದ ತಿಮಿರ ಸಮೂಹವಂ ಪ್ರಕಾಶದಂತೆ ವಿದ್ಯವು ಅವಿದ್ಯವನ್ನು ನಾಶಗೈಯ್ಯುವದು.

(ಟಿ) ಇಲ್ಲಿ ಕರ್ಮನಿಷೇಧದಿಂದ ವಿಕಲ್ಪವಾದಕ್ಕೂ ನಿಷೇಧವಾಯಿತು. ತಾತ್ಪರ್ಯವೇನಂದರೆ:—ಐದು ಬಗೆ ಸಾಮಗ್ರಿಗಳ ಅಭಾವದಿಂದ ಆತ್ಮನಲ್ಲಿ ಸಂಸಾರಬಂಧ ಸತ್ಯವೆಂದು ಯಾರೋ ಒಬ್ಬರು ಪೇಳಿರುವರು. [ಐದು ಬಗೆ ಸಾಮಗ್ರಿಗಳೆಂದರೆ,

೧—ಸತ್ಯವಸ್ತುವಿನ ಜ್ಞಾನದಿಂದುಂಟಾಗುವ ಸಂಸ್ಕಾರ,

೨—ಪ್ರಮಾತೃದೋಷ,

೩—ಪ್ರಮಾಣದೋಷ,

೪—ಪ್ರಮೇಯದೋಷ,

೫—ಅಧಿಷ್ಠಾನದ ವಿಶೇಷಾಜ್ಞಾನ ಮತ್ತು ಸಾಮಾನ್ಯಜ್ಞಾನ. ಇವೇ ಸಾಮಗ್ರಿಗಳು.] ಮತ್ತು ಆ ಸಂಸಾರಬಂಧದ ನಿವೃತ್ತಿಯುಜ್ಞಾನದಿಂದಾಗುವದಿಲ್ಲ; ಮತ್ತೇನೆಂದರೆ, ಕರ್ಮದಿಂದಲೇ ನಿವೃತ್ತಿಯಾಗುವದು. ಹೀಗೆ ಕೇವಲ ಕರ್ಮದಿಂದ ಸಂಸಾರಾನರ್ಥಕ್ಕೆ ನಿವೃತ್ತಿಯಂ ಗ್ರಹಿಸಿರುವರು.

ಮತ್ತೊಬ್ಬರು ಜ್ಞಾನಕರ್ಮಗಳೆರಡೂ ವೇದದಲ್ಲಿ ಮೋಕ್ಷನಿಮಿತ್ತ ಪೇಳಿರುವವೆಂತಲೂ, ಆದ್ದರಿಂದ ಯಾರು ಜ್ಞಾನಸಂಪಾದನೆಯಂ ಮಾಡಿದರೂ, ಅಥವಾ ಯಾರು ಕರ್ಮಸಂಪಾದನೆಯಂ ಮಾಡಿದರೂ ವಿಕಲ್ಪದಿಂದೆರಡೂ ನಿರ್ಪೇಕ್ಷಮೋಕ್ಷಕ್ಕೆ ಹೇತುವಾಗಿರುವದೆಂತಲೂ ಪೇಳುವರು.

ಆ ಕೇವಲ ಕರ್ಮವಾಗಲೀ, ಅಥವಾ ವಿಕಲ್ಪವಾಗಲೀ ಎರಡು ವಾದವೂ ಸಮೀಚೀನವಲ್ಲ. ಯಾಕೆಂದರೆ;—ಕರ್ಮಾವಿದ್ಯೆಗಳಿಗೆ ವಿರೋಧವಿಲ್ಲದ್ದರಿಂದ ಎರಡೂ ಸಂಸಾರಕ್ಕೆ ಸಾಧಕವಾಗಿವೆ.

ಮತ್ತು ಜ್ಞಾನಕರ್ಮಗಳೆರಡೂ ಸಮಾನವಾಗಿಲ್ಲ; ಆದಕಾರಣ ವಿಕಲ್ಪವಾದವೂ ಸಂಭವಿಸುವದಿಲ್ಲ.

ಮತ್ತಾರೋ ಒಬ್ಬರು ಕರ್ಮಜ್ಞಾನಸಮುಚ್ಚಯ ಮೋಕ್ಷಕ್ಕೆ ಹೇತುವೆಂದು ಅಂಗೀಕರಿಸಿದಾರೆ; ಅದೂ ಸಂಭವಿಸುವದಿಲ್ಲ; ಯಾಕೆಂದರೆ;—ಯಾವಯಾವ ಪದಾರ್ಥ ತಮ್ಮಗಳಲ್ಲಿ ವಿರೋಧವಾಗಿಲ್ಲವೋ, ಅವೆರಡಕ್ಕೆ ಸಮುಚ್ಚಯ

ವಾಗುವದು. ಇನ್ನು ಜ್ಞಾನಕರ್ಮಗಳೆರಡೂ ತೇಜಸ್ತಿಮಿರದಂತೆ ವಿರೋಧ ವಾಗಿರುವದ್ದರಿಂದ ಅವುಗಳಿಗೆ ಸಮುಚ್ಚಯ ಸಂಭವಿಸುವದಿಲ್ಲ. ಅದೆಂತೆಂದರೆ;—

" ವಿದ್ಯಾವಿರೋಧಾನ್ನಸಮುಚ್ಚಯೋಭವೇತ್ " ಅಂದರೆ, ಕರ್ಮಕ್ಕೆ ವಿದ್ಯೆಯೊಡನೆ ವಿರೋಧವಿರುವದ್ದರಿಂದ ಸಮುಚ್ಚಯವಾಗುವದಿಲ್ಲ ವೆಂದರ್ಥ.—

ಮತ್ತೊಬ್ಬರು ಶೃತಿ ಸ್ಮೃತಿಗಳಲ್ಲಿ ಬಹುಸ್ಥಾನಗಳೊಳ್ ಸಮುಚ್ಚಯ ಕಾಣ್ಬರುವದೆಂದು. ಪೇಳುವರೆಂದರೆ, ಅದನ್ನು ಕೇಳು ! ಶೃತಿ ಸ್ಮೃತಿಗಳೊ ಳಗೆ ಎಲ್ಲಿ ಸಮುಚ್ಚಯವು ಪೇಳಿರುವದೋ, ಅಲ್ಲಿ ಸಮುಸಮುಚ್ಚಯದ ಗ್ರಹಣ ವಿಲ್ಲ ; ಮತ್ತೇನಂದರೆ ;—ಕ್ರಮುಸಮುಚ್ಚಯದ ಅಂಗೀಕಾರವಿರುವದು. ಈ ಅರ್ಥವು ಉಪನಿಷತ್ ಭಾಷ್ಯ ಮತ್ತು ಗೀತಾಭಾಷ್ಯದಲ್ಲಿ ಬಹುಕಡೆಗಳೊಳ್ ಆಚಾರ್ಯರು ಪ್ರತಿಪಾದಿಸಿರುವತು. ಆದ್ದರಿಂದ ಮೊದಲು, ಅಂತಃಕರಣಶುದ್ಧಿ ಗೋಸುಗ ಪುರುಷನು ಕರ್ಮವಂ ಮಾಡಬೇಕು. ಚಿತ್ತಶುದ್ಧಿಯಾಗಲು ಅನಂ ತರ ಕರ್ಮಸನ್ಯಾಸದಿಂದ ಜ್ಞಾನಕ್ಕೋಸುಗ ಪ್ರಯತ್ನವಂ ಮಾಡಬೇಕು. ಈ ಮಾತು ಪೂರ್ವದಲ್ಲಿ ಸ್ಪಷ್ಟವಾಗಿ ಪೇಳಿರುವದು. ಆದ್ದರಿಂದ ಕೇವಲ ಜ್ಞಾನವೇ ಸಮೂಲ ಜಗತ್ತಿನ ನಿವೃತ್ತಿಗೆ ಸಾಧನವೆನಿಸುವದು.

ಶಂಕಾ ;—ಜ್ಞಾನದಿಂದ ಸವಿಲಾಸ ಅಜ್ಞಾನದ ನಿವೃತ್ತಿಯಾಗಲಿ ; ಆದರೂ ಅಜ್ಞಾನವು ಬಹುಕಾಲದ್ದಾದ್ದರಿಂದ ಅದಕ್ಕೆ ತತ್‌ಕ್ಷಣ ನಿವೃತ್ತಿ ಸಂಭ ವಿಸುವದಿಲ್ಲ ?

ಸಮಾಧಾನ :—ಅಜ್ಞಾನಕ್ಕೆ ವಿರೋಧಿಯಾದ ಜ್ಞಾನವು ಉದಯ ವಾಗಲು ತತ್ಕಾಲದಲ್ಲಿಯೇ ಅಜ್ಞಾನಕ್ಕೆ ನಾಶವಾಗುವದು. ಹ್ಯಾಗೆಂದರೆ— ಗಿರಿಗುಹೆಯೊಳಗಣ ಕತ್ತಲೆಯು, ಬಹುಕಾಲದ್ದಾಗಿದ್ದರೂ, ದೀವಟಿಗೆಯ ಪ್ರಕಾ ಶವಂ ಮಾಡಿದರೆ, ಸದ್ಯ ನಿವೃತ್ತಿಯಾಗುವಂತೆ ಚಿರಕಾಲಿಕವಾದ ಅಜ್ಞಾನವೂ ಕೂಡ, ಜ್ಞಾನದಿಂದ ತತ್ಕಾಲದಲ್ಲಿಯೇ ನಾಶವಾಗುವದು. ಅದೆಂತೆಂದರೆ :— " ಅಜ್ಞಾನತೋಽಧ್ಯಾಸವಶಾತ್ಪ್ರಕಾಶತೇ ಜ್ಞಾನೇ ವಿಲೀಯೇತವಿ ರೋಧತಃ ಕ್ಷಣಾತ್ " ಅರ್ಥ—ಸಂಸಾರವೂ ತತ್ಸಂಬಂಧಿಯಾದ ದುಃಖಾ ದಿಗಳೂ ಸಹ ಆತ್ಮನ ಅಜ್ಞಾನದಿಂದಾದ ಅಧ್ಯಾಸದ ವಶದಿಂ ತೋರುತ್ತಿರುವದು. ಆ ಅಜ್ಞಾನಕ್ಕೆ ವಿರೋಧಿಯಾದ ಜ್ಞಾನವು ಉದಯವಾಗಲು ಕ್ಷಣಮಾತ್ರದಲ್ಲಿ ವಿಲಯುವಾಗುವದು.

(೬) ಮೇಲೆ ಅಧ್ಯಾಸದ ಪ್ರಸಂಗಮಾಡಿದ್ದರಿಂದ ಆ ಅಧ್ಯಾಸವನ್ನು ಸಂಕ್ಷೇಪವಾಗಿ ನಿರೂಪಣೆಯಂ ಮಾಡುತ್ತಾರೆ;—

[೩] ಅಧ್ಯಾಸವರ್ಣನೆ:—ಅಧಿಷ್ಠಾನಕ್ಕಿಂತ ವಿಷಮ ಸತ್ತೆಯುಳ್ಳ ಅವಭಾಸವನ್ನು 'ಅಧ್ಯಾಸ' ವೆಂದೆನ್ನುವರು. ಅದು

೧—ಅರ್ಥಾಧ್ಯಾಸ,

೨—ಜ್ಞಾನಾಧ್ಯಾಸ, ವೆಂಬ ಭೇದದಿಂದ ಎರಡು ಪ್ರಕಾರವಾಗಿರುವದು. ಅವುಗಳಲ್ಲಿ

(೧) ನೇ ಅರ್ಥಾಧ್ಯಾಸವು ಅನೇಕ ಪ್ರಕಾರವಾಗಿರುವದು. ಒಂದೆಡೆಯಲ್ಲಿ ಕೇವಲ ಸಂಬಂಧಮಾತ್ರದ ಅಧ್ಯಾಸವೂ, ಒಂದೆಡೆಯಲ್ಲಿ ಸಂಬಂಧ ವಿಶಿಷ್ಟ ಸಂಬಂಧಿಯ ಅಧ್ಯಾಸವೂ, ಒಂದೆಡೆಯಲ್ಲಿ, ಕೇವಲ ಧರ್ಮದ ಅಧ್ಯಾಸವೂ, ಒಂದೆಡೆಯಲ್ಲಿ ಧರ್ಮವಿಶಿಷ್ಟ ಧರ್ಮಿಯ ಅಧ್ಯಾಸವೂ; ಒಂದೆಡೆಯಲ್ಲಿ, ಅನ್ಯೋನ್ಯಾಧ್ಯಾಸವೂ, ಒಂದೆಡೆಯಲ್ಲಿ ಅನ್ಯತರಾಧ್ಯಾಸವೂ ಇರುವದು.

(೨) ಆ ಅನ್ಯತರಾಧ್ಯಾಸವೂ ಕೂಡ, ಎರಡು ಪ್ರಕಾರವಾಗಿರುವದು.

೧—ಆತ್ಮನಲ್ಲಿ ಅನಾತ್ಮಾಧ್ಯಾಸ,

೨—ಅನಾತ್ಮದಲ್ಲಿ ಆತ್ಮಾಧ್ಯಾಸವಾಗಿರುವದು.

ಈ ರೀತಿಯಿಂದ ಅಧ್ಯಾಸವು ಅನೇಕ ವಿಧವಾಗಿದೆ. ಅವುಗಳಲ್ಲಿ ಹೇಳಲ್ಪಟ್ಟ ಲಕ್ಷಣವು ಸರ್ವತ್ರ ಅನ್ವಯವಾಗಿರುವದು. ಮತ್ತು

(೩) ಸ್ವರೂಪಾಧ್ಯಾಸ, ಸಂಸರ್ಗಾಧ್ಯಾಸ ಭೇದದಿಂದ ಅಧ್ಯಾಸವೆರಡು ಬಗೆಯಾಗಿರುವದು. ಎಂತೆಂದರೆ—ಶುಕ್ತಿಯಲ್ಲಿ ರಜತದ ಸ್ವರೂಪಾಧ್ಯಾಸವಿರುವಂತೆ ಆತ್ಮನಲ್ಲಿ ಅನಾತ್ಮಪದಾರ್ಥಗಳ ಸ್ವರೂಪಾಧ್ಯಾಸವಿರುವದು. ಅವುಗಳಲ್ಲಿಯೂ, ಅಜ್ಞಾನದ ಅಧ್ಯಾಸವನ್ನು 'ಕಾರಣಾಧ್ಯಾಸ' ವೆನ್ನುವರು. ಆ ಅಜ್ಞಾನದ ಅಧ್ಯಾಸದಲ್ಲಿ ಅನ್ಯ ನಿಮಿತ್ತವಿಲ್ಲ; ಮತ್ತೇನೆಂದರೆ;—ತನ್ನ ಅಧ್ಯಾಸದಲ್ಲಿ ತಾನೇ ನಿರ್ವಾಹಕವೆಂದು ಹೇಳಿರುವರು. ಮತ್ತು

(೪) ಅಹಂಕಾರಾದಿ ಪದಾರ್ಥಗಳ ಅಧ್ಯಾಸವನ್ನು 'ಕಾರ್ಯಾಧ್ಯಾಸ' ವೆನ್ನುವರು. ಇವು ಎರಡೂ ಸ್ವರೂಪದಿಂದ ಆತ್ಮನಲ್ಲಿ ಕಲ್ಪಿತವಾಗಿವೆ ಇನ್ನು

(೫)(ಯಾವದರ ಸ್ವರೂಪವು ಪೂರ್ವವೇ ಸಿದ್ಧವಾಗಿದ್ದು ಸಂಬಂಧ ಮಾತ್ರ ಅನಿರ್ವಚನೀಯದಿಂ ಫುಟ್ಟುವದೋ, ಅದು ಸಂಸರ್ಗಾಧ್ಯಾಸವೆನ್ನಲ್ಪಡುವದು.) ಎಂತೆಂದರೆ ;—ದರ್ಪಣದಲ್ಲಿ ಮುಖಕ್ಕೆ ಅನಿರ್ವಚನೀಯ ಸಂಬಂಧ ಉಂಟಾಗುವಂತೆ ಚೇತನರೂಪನಾದ ಆತ್ಮನ ಸಂಬಂಧಕ್ಕೆ ಅನಾತ್ಮರೂಪವಾದ ಅಹಂಕಾರಾದಿಗಳಲ್ಲಿ ಅಧ್ಯಾಸವುಂಟು, ಸ್ವರೂಪದಿಂದಿಲ್ಲ ಮತ್ತು

(೬) ಅನಾತ್ಮ ಪದಾರ್ಥಗಳಿಗೆ ಕೆಲವಕ್ಕೆ ಕೇವಲ ಧರ್ಮಾಧ್ಯಾಸವೂ, ಕೆಲವಕ್ಕೆ ಧರ್ಮಸಹಿತ ಧರ್ಮಿಯ ಅಧ್ಯಾಸವೂ ಉಂಟು.

೧—ಇಂದ್ರಿಯಗಳಿಗೆ ಕೇವಲ ಧರ್ಮಾಧ್ಯಾಸವೂ,

೨—ಅಂತಃಕರಣಕ್ಕೆ ಧರ್ಮಸಹಿತ ಧರ್ಮಿ ಅಧ್ಯಾಸವೂ ಉಂಟು.

ದೇಹಾದಿ ಆಂತರ ಪದಾರ್ಥಗಳಲ್ಲಿ ಅಹಂತಾಧ್ಯಾಸವಾಗುವಂತೆ ಬಾಹ್ಯ ಸ್ತ್ರೀ ಪುತ್ರಾದಿಗಳಲ್ಲಿ ಮಮತ್ವಾಧ್ಯಾಸವುಂಟಾಗುವದು. ಇದೇ ಸಂಸಾರ ಬಂಧವೆನ್ನಲ್ಪಡುವದು. ಈ ಸಂಸಾರವೂ, ಇದರ ಕಾರಣವೂ ಸಹ ಜ್ಞಾನದಿಂದೆ ನಿವೃತ್ತಿಯಾಗುವದು.

ಆ ಜ್ಞಾನವು ಯಾವ ಕಾಲದಲ್ಲಿ ಆಗುವದೆಂದರೆ—

[೪] ಜ್ಞಾನಕ್ಕೆ ಕಾಲಾವಧಿ ಇಲ್ಲ;—ಅದಕ್ಕೆ ಕಾಲನಿಯಮವೇನೂ ಇಲ್ಲ. ಯಾಕೆಂದರೆ—ಉತ್ತಮ ಸಂಸ್ಕಾರವುಳ್ಳವನಿಗೆ ಶೀಘ್ರವೇ ಜ್ಞಾನವಾಗುವದು. ಎಂತೆಂದರೆ;—ಜನಕರಾಜನಿಗೆ ವನದಲ್ಲಿ ವೃಕ್ಷಾರೂಢರಾಗಿ ಅಗೋಚರದಲ್ಲಿದ್ದ ಸಿದ್ಧರುಗಳ ಸ್ವಾನುಭವ ಗೀತವಾಕ್ಯಗಳಂ ಕೇಳಿದ ಮಾತ್ರದಿಂದ ಜ್ಞಾನವಾಗಿರುವದು. ಹೀಗೆಯೇ ಖಟ್ವಾಂಗ, ರಹುಗಣ, ಯದುರಾಜಾದಿಯಾದ ಅನೇಕ ಪುರುಷರಿಗೆ, ಶ್ರವಣಮಾತ್ರದಿಂದ ಸದ್ಯಜ್ಞಾನವಾಗಿರುವದು. ಮತ್ತು ಉತ್ತಮ ಪುರುಷನು ಬ್ರಹ್ಮವಿದನಾದ ಗುರುವಿನ ಉಪದೇಶವಂ ಪೊಂದಿ ಉಪಪತ್ತಿಯಿಂದಲೂ, ಸರ್ವತ್ರ ಗುರುಬುದ್ಧಿಯಿಂದಲೂ, ಹೇಯಾಂಶವಂ ತೊರೆದು, ಉಪಾದೇಯವಾದ ಗುಣಗಳಂ ಗ್ರಹಿಸುವನು. ಹ್ಯಾಗೆಂದರೆ;—ದತ್ತಾತ್ರೇಯಮುನಿಯು, ಪೃಥ್ವಿ-ಗಗನ-ಪವನ, ಜಲ, ಅನಲ, ಚಂದ್ರ, ಶವಿ, ಕಪೋತಾದಿ ಇಪ್ಪತ್ತುನಾಲ್ಕರೊಳಗೂ, ಗುರುಬುದ್ಧಿಯಿಂದ ಗುಣಗಳಂ ಗ್ರಹಿಸಿ ಅವಗುಣಗಳಂ ವರ್ಜಿಸಿದನು.

ಮತ್ತು ಯಾವನ ಚಿತ್ತದಲ್ಲಿ ಏನಾದರೂ ಪ್ರತಿಬಂಧವಿದ್ದರೆ, ಅವನಿಗೆ ಸಾಕ್ಷಾತ್ ಬ್ರಹ್ಮವಿತ್ತಮನಾದ ಗುರುವಿನ ಉಪದೇಶದಿಂದಲೂ, ಶೀಘ್ರಜ್ಞಾನವಾಗುವದಿಲ್ಲ; ಎಂತೆಂದರೆ;—ನಿದಾಘರಾಜನಿಗೆ, ಋಭುಋಷಿಯು ಹತ್ತು ಸಹಸ್ರ ವರ್ಷ ಪರ್ಯಂತರ ತತ್ವೋಪದೇಶವಂ ಮಾಡಿದನು, ಆದಾಗ್ಯೂ ತತ್ಕಾಲ ಜ್ಞಾನವಾಗಲಿಲ್ಲ; ಪುನಃ ಯಾವಾಗ ನರಕಭಯವಂ ತೋರಿಸಿದನೋ, ಆಗಲವನು ಸ್ವಪ್ನದಲ್ಲಿ ಯಮಪುರಿಯಂ ಕಂಡು ಕೂಡಲೆ ಎಚ್ಚರವಾಗಿ, ಗುರುವಿನ ಉಪದೇಶವಂ ಸಂಪಾದಿಸಿಕೊಂಡನು. ಈ ವಿಷಯ ಗ್ರಂಥಾಂತರದಲ್ಲಿ ಪ್ರಸಿದ್ಧವಾಗಿರುವದು. ಆದ್ದರಿಂದ ಯಾವದಾದರು ಪ್ರತಿಬಂಧಕವಿದ್ದರೆ, ಸದ್ಯ ಜ್ಞಾನವಾಗುವದಿಲ್ಲ.

[೫] ಪ್ರತಿಬಂಧತ್ರಯ:—ಆ ಪ್ರತಿಬಂಧವು ಮೂರು ಬಗೆಯಾಗಿರುವದು.

(೧) ಭೂತ,

(೨) ಭಾವೀ,

(೩) ವರ್ತಮಾನ, ಅವುಗಳಲ್ಲಿ ವರ್ತಮಾನ ಪ್ರತಿಬಂಧವು.

[೧] ವಿಷಯಾಸಕ್ತಿ,

[೨] ಪ್ರಜ್ಞಾಮಾಂದ್ಯತೆ,

[೩] ಕುತರ್ಕ,

[೪] ದುರಾಗ್ರಹ, ಈ ಭೇದದಿಂದ ನಾಲ್ಕು ಬಗೆಯಾಗಿರುವದು. ಅವುಗಳಿಗೆ ನಿವೃತ್ತಿಯಾಗಲು ಜ್ಞಾನವಾಗುವದು. ಎಂತೆಂದರೆ— 3-42&43

ಶ್ಲೋ॥ ಕುತಸ್ತಜ್ಜ್ಞಾನ ಮಿತಿಚೇ ತದ್ಧಿಬಂಧ ಪರಿಕ್ಷಯಾತ್ ।
ಅಸಾವಪಿಚಭೂತೋವಾ ಭಾವೀವಾವರ್ತತೇಥವಾ ॥
ಪ್ರತಿಬಂಧೋ ವರ್ತಮಾನೋ ವಿಷಯಾಸಕ್ತಿಲಕ್ಷಣಃ ।
ಪ್ರಜ್ಞಾಮಾಂದ್ಯಂಕುತರ್ಕಶ್ಚ ವಿಪರ್ಯಯದುರಾಗ್ರಹಃ ॥

ಇದರ ಅರ್ಥ—ಆ ತತ್ವಜ್ಞಾನ ಯಾವಾಗ ಆಗುವದೆಂದರೆ; ಅದನ್ನು ಕೇಳು, ಆ ಜ್ಞಾನವು ಪ್ರತಿಬಂಧ ಕ್ಷಯವಾಗಲು ಆಗುವದು. ಅದಾದರೂ ಭೂತ, ಅಥವಾ ಭಾವೀ ಅಥವಾ ವರ್ತಮಾನವೆಂದು ಮೂರಾಗಿರುವದು. ॥೧॥ ಅವುಗಳಲ್ಲಿ ವರ್ತಮಾನ ಪ್ರತಿಬಂಧವೂ ಕೂಡ, ವಿಷಯಾಸಕ್ತಿಲಕ್ಷಣವೆಂದೂ,

ಪ್ರಜ್ಞಾಮಾಂದ್ಯವೆಂದೂ, ಕುತರ್ಕವೆಂದೂ, ವಿಪರ್ಯಯ ದುರಾಗ್ರಹವೆಂದೂ ನಾಲ್ಕು ವಿಧವಾಗಿರುವುದು. ||೨|| ಅದರಲ್ಲಿ—

(೧) ಭೂತಪ್ರತಿಬಂಧವೆಂದರೆ;—ಒಬ್ಬನೊಬ್ಬ ಭಿಕ್ಷುವಿಗೆ ಮಹಿಷೀ ಸ್ನೇಹದಿಂದ ತತ್ವಜ್ಞಾನವುಂಟಾಗಲಿಲ್ಲ. ಪುನಃ ಧ್ಯಾನದಿಂದ ಪ್ರತಿಬಂಧಕ್ಷಯ ವಾಗಲು, ತತ್ವವಂ ತಿಳಿದುಕೊಂಡನು. ಈ ಕಥೆ ಪ್ರಸಿದ್ಧವಾಗಿರುವದು.

(೨) ಭಾವೀಪ್ರತಿಬಂಧವಿದ್ದರೆ, ಈ ದೇಹದಲ್ಲಿ ಜ್ಞಾನವಾಗುವದಿಲ್ಲ; ಮತ್ತೇನೆಂದರೆ—ಅವನು ಯೋಗಭ್ರಷ್ಟನಾಗುವನು. ಈ ಪ್ರಸಂಗ ವಾಸಿಷ್ಠದ ಲ್ಲಿಯೂ ಪ್ರಸಿದ್ಧವಾಗಿ ಪೇಳಿರುವದು. ಅವನ್ನು ಕರ್ಮಶೇಷ, ಅಥವಾ ಕಾಮ ಶೇಷರೂಪವಾದ ಭಾವೀಪ್ರತಿಬಂಧಕ್ಷಯವಾಗಲು, ಮುಂದಣ ಜನ್ಮದಲ್ಲಿ ಜ್ಞಾ ನವಂ ಪಡೆದು ಮೋಕ್ಷವಂ ಪೊಂದುವನು, ಇದಕ್ಕೆ ವಾಮದೇವ ಜಡಭರತರ ಕಥೆ ದೃಷ್ಟಾಂತವಾಗಿದೆ.-

(೩) ವರ್ತಮಾನದ ಚತುರ್ವಿಧ ಪ್ರತಿಬಂಧಗಳು, ಯಥೋಚಿತ ಉಪಾ ಯಗಳಿಂದ ನಿವೃತ್ತಿಯಾಗುವದು. ಹ್ಯಾಗೆಂದರೆ—ವೈರಾಗ್ಯ, ಶಮಾದಿಗಳ ಸಂ ಪಾದನೆಯಿಂದ ವಿಷಯಾಸಕ್ತಿ ನಿವೃತ್ತಿಯಾಗುವದು. ||೧||

ಬುದ್ಧಿಮಾಂದ್ಯ, ಕುತರ್ಕ, ದುರಾಗ್ರಹ ಇವು ಮೂರು ಯಥಾಕ್ರಮ ವಾಗಿ (೧) ಶ್ರವಣ, (೨) ಮನನ, (೩) ನಿದಿಧ್ಯಾಸ. ಇವುಗಳಿಂದ ದೂರ ವಾಗುವದು. ಆದ್ದರಿಂದ ಜ್ಞಾನದಲ್ಲಿ ಕಾಲದ ಅಪೇಕ್ಷೆ ಇಲ್ಲ, ಆದರೆ ಅದರ ಅಧಿಕಾರದ ಅಪೇಕ್ಷೆ ಇರುವದು. ||೨|| ಬಳಿಕ

### ||೨|| ಅಧಿಕಾರವಿನಃ ತತ್ವೋಪದೇಶವಂ ಮಾಡುವದು ವ್ಯರ್ಥವೆನಿಸುದು.

ಅದೆಂತೆಂದರೆ—

ಶ್ಲೋ|| ಅಕಾಲೇಹಿ ಯಥಾ ವೃಷ್ಟಿರ್ಯಥಾದೀಪೋ ದಿವಾಕರೇ ||
ಅನ್ನಂ ಯಥಾತ್ವಜೀರ್ಣೇಸ್ಯಾದ್ವಿತ್ತಂ ಚಾಪಿಗತಸ್ಪೃಹೇ ||
ಅಧಿಕಾರಂ ವಿನಾ ತದ್ವದ್ವಿಫಲಂ ಬ್ರಹ್ಮಬೋಧನಂ ||

ಅರ್ಥ—ಹ್ಯಾಗೆ ಅಕಾಲದಲ್ಲಿ ವೃಷ್ಟಿ ಆದರೆ, ಮತ್ತು ಸೂರ್ಯನ ಎದುರಿಗೆ ದೀ ಪವನ್ನಿಟ್ಟರೆ, ಇನ್ನು ಅಜೀರ್ಣನಿಗೆ ಅನ್ನವಂ ಕೊಟ್ಟರೆ, ನಿಸ್ಪೃಹನಿಗೆ ಪದಾರ್ಥ ವನ್ನಿತ್ತರೆ, ಅವೆಲ್ಲವೂ ವಿಫಲವಾಗುವವೋ, ಹಾಗೆ ಅಧಿಕಾರವಿಲ್ಲದವನಿಗೆ ಬ್ರಹ್ಮ ಬೋಧವೂ ವಿಫಲವಾಗುವದು.

ಈ ಅಭಿಪ್ರಾಯದಿಂದ ದಧ್ಯಂಗಋಷಿಯು ಅಶ್ವಿನೀಕುಮಾರರಿಗೆ ಅಧಿಕಾರವಿಲ್ಲದ್ದರಿಂದ ಉಪದೇಶವಂ ಮಾಡಲಿಲ್ಲ; ಪುನಃ ಅಧಿಕಾರವಂ ಪೊಂದಿಬರಲು ಆಗ ಉಪದೇಶಿಸಿದನು.

ಮತ್ತು ಅಧಿಕಾರವಿನಃ ಇಂದ್ರನಿಗೆ ಅದೇ ದಧ್ಯಂಗಮುನಿಯು ಉಪದೇಶಿಸಿದನು. ಆದರಿಂದ ಮಹಾ ಉಪದ್ರವವಾಯಿತು. ಈ ವಿಷಯ ಉಪನಿಷತ್ತುಗಳಲ್ಲಿಯೂ, ಅದರ ವ್ಯಾಖ್ಯಾನರೂಪವಾದ ಆತ್ಮಪುರಾಣದ ನಾಲ್ಕನೇ ಅಧ್ಯಾಯದಲ್ಲಿಯೂ. ಪ್ರಸಿದ್ಧವಾಗಿರುವದು. ಬಳಿಕ ಅದೇ ಇಂದ್ರನು ತಪಸ್ಸನ್ನು ಮಾಡಿ, ನಾಲ್ಕಾವರ್ತಿ ಬ್ರಹ್ಮನ ಸಮೀಪಕ್ಕೆ ಪೋಗಿ ಅವನಿಂದ ತತ್ತೋಪದೇಶವಂಪಡೆದು ಕೃತಾರ್ಥನಾದನು.

ಇನ್ನು ವಿರೋಚನನು ಅಧಿಕಾರರಹಿತನಾದ್ದರಿಂದ ಪಿತಾಮಹನಿಂದ ಪರಮತತ್ವವಂ ಪೊಂದಲಿಲ್ಲ. ಮತ್ತೇನೆಂದರೆ, ದೇಹಾತ್ಮಬುದ್ಧಿಯನ್ನೇ ಮಾಡುವನಾದನು.

ಆದಕಾರಣ ಯಾವನಿಗೆ ತತ್ವಜ್ಞಾನದ ಇಚ್ಛೆಯಾಗುವದೋ, ಅವನು ದೈವೀಸಂಪತ್ತನ್ನು ಸಂಪಾದಿಸಿಕೊಳ್ಳಬೇಕು. ಮತ್ತು ಆಸುರೀಸಂಪದವನ್ನು ಸರ್ವಥಾ ತ್ಯಜಿಸಬೇಕು.

೧ ಆ ದೈವೀ, ಆಸುರೀ ಎಂಬ ಎರಡು ಸಂಪತ್ತುಗಳ ಲಕ್ಷಣವನ್ನು ಗೀತೆಯ ಹದಿನಾರನೇ ಅಧ್ಯಾಯದಲ್ಲಿ ಭಗವಂತ (ಶ್ರೀಕೃಷ್ಣ) ನು ವಿಸ್ತಾರವಾಗಿ ಪೇಳಿರುವನು.

೨ ಆ ದೈವೀ ಸಂಪತ್ತಿನಲ್ಲಿಯೂ. (೧) ಸತ್ಯ, (೨) ದಯಾ, (೩) ಶುಚಿ, ಇವು ಮೂರು ಮುಖ್ಯಗುಣಗಳಾಗಿರುವವು [೧]. ಆಸುರೀ ಸಂಪತ್ತಿನಲ್ಲಿ (೧) ಕಾಮ, (೨) ಕ್ರೋಧ, (೩) ಲೋಭ, ಇವು ಮೂರು ಮುಖ್ಯವಾಗಿರುವವು [೨]. ಬಳಿಕ

೩ ಬಾಹ್ಯದಲ್ಲಿ ಯಾರು ವೇದಾಧ್ಯಯನಾದಿಗಳಂ ಮಾಡುವರೋ, ಅಂತರದಲ್ಲಿ ಸತ್ಯ, ದಯಾದಿಗಳಿಂದ, ಶೂನ್ಯರಾಗಿರುವರೋ, ಅವರೂ ಕೂಡ ರಾಕ್ಷಸರಿಗೆ ಸಮಾನರಾದವರು. ಯಾಕೆಂದರೆ—ವೇದಾಧ್ಯಯನಾದಿಗಳು ರಾಕ್ಷಸರಲ್ಲಿಯೂ ಉಂಟು. ಎಂತೆಂದರೆ—

"ಅಗ್ನಿಹೋತ್ರಾಣಿವೇದಾಶ ರಾಕ್ಷಸಾನಾಂ ಗೃಹೇಗೃಹೇ ॥
ಸತ್ಯಂದಯಾಚ ಶೌಚಂಚ ರಾಕ್ಷಸಾನಾಂ ನವಿದ್ಯತೆ"

ಅರ್ಥ—ಅಗ್ನಿಹೋತ್ರ, ಮತ್ತು ವೇದಾಧ್ಯಯನ ಪಾಠಾದಿಗಳಂತು ರಾಕ್ಷಸರ ಮನೆಮನೆಗಳಲ್ಲಿ ಆಗುವವು. ಆದರೆ, ಸತ್ಯ, ದಯಾ ಮತ್ತು ಶೌಚ ಇವುಗಳಾದರೋ ಅವರಲ್ಲಿ ಇರುವದಿಲ್ಲ.

ಇದರಿಂದ ಏನು ತಿಳಿಯಪಡಿಸಿದರೆಂದರೆ—ಆಸುರೀ ರಾಕ್ಷಸೀ ಸಂಪತ್ತುಳ್ಳವನೇ ಅಸುರನು. ಮತ್ತು ರಾಕ್ಷಸನು; ಶರೀರಮಾತ್ರ ಪ್ರಧಾನವಲ್ಲ; ಯಾಕೆಂದರೆ—ದೇಹವು ಪ್ರಹ್ಲಾದ, ಬಲಿ ಮೊದಲಾದವರಿಗೂ ಅವರ ಕುಲದಲ್ಲಿ ಆಗಿರುವದು, ಆದಾಗ್ಯೂ ಮಹಾ ಭಾಗವತರೂ, ಬ್ರಹ್ಮನಿಷ್ಠರೂ ಆಗಿರುವರು. ಆದ್ದರಿಂದ ಮನವೇ ದೈತ್ಯ, ದೇವತಾ, ಮನುಷ್ಯರಾಗಿರುವುದು. ಇನ್ನು

ಳ—ಮನವೇ ಸರ್ವಧರ್ಮಗಳಂ ಧರಿಸುವದೆಂತಲೂ, ಬಂಧಮೋಕ್ಷಗಳಿಗೆ ಅದೇ ಕಾರಣವೆಂತಲೂ, ಶಾಸ್ತ್ರಗಳಲ್ಲಿ ಪೇಳಿರುವದು. ಆದ್ದರಿಂದ ಇದರ ನಿಯಮವೇನೆಂದರೆ—ದೈವೀಸಂಪತ್ತುಳ್ಳವನಿಗೇ ಚನ್ನಾಗಿ ತತ್ವಜ್ಞಾನವಾಗುವದು. ಆಸುರೀ ಸಂಪತ್ತುಳ್ಳವನಿಗೆ ಆಗುವದಿಲ್ಲ. ಇದಕ್ಕೆ ವರ್ಣ, ಆಶ್ರಮ, ಸ್ತ್ರೀ, ಪುರುಷ, ವಯಸ್ಸು, ಕಾಲ, ಕರ್ಮ, ದೇಶಗಳ ನಿಯಮವಿಲ್ಲ;

ಮತ್ತು ಯಾವನಿಗೆ ಈಶ್ವರ, ಗುರು, ಶೃತಿ, ಮತ್ತು ತನ್ನ ಕೃಪೆ [ಅಂತಃಕರಣಶುದ್ಧಿ] ಯಿಂದ ಜ್ಞಾನವಾಗುವದೋ ಅವನಿಗೆ ಶೀಘ್ರವೇ ಮೂಲಸಹಿತ ಸಂಸಾರ ನಿವೃತ್ತಿಯಾಗುವದು. ಇದರಲ್ಲಿ ಯಾವ ಸಂಶಯವೂ ಮಾಡಕೂಡದು. ಯಾಕೆಂದರೆ; ಈ ಸಂಸಾರವು ಏನೊಂದು ಪದಾರ್ಥವೂ ಅಲ್ಲ; ಮಿಥ್ಯಾಭ್ರಾಂತಿಮಾತ್ರವೆನಿಸುವದು. ಅಧಿಷ್ಠಾನರೂಪವಾದ ಅದ್ವಯಬ್ರಹ್ಮದಲ್ಲಿ ಪೂರ್ವವೇ ಕೌರವಕುಲದಂತೆ ಉಪಮರ್ದಿತವಾಗಿರುವದು. ಅದಕ್ಕೆ ಜ್ಞಾನದಿಂದ ಉಪಚಾರಮಾತ್ರ ಪುನಃ ನಾಶವು ಪೇಳಲ್ಪಡುವದು:—

ಶ್ಲೋ—ನಿತ್ಯಬೋಧಪರಿ ಪೀಡಿತಂ ಜಗದ್ವಿಭ್ರಮಂ ನುದತಿ
ವಾಕ್ಯಜಾಮತಿಃ ॥ ವಾಸುದೇವನಿಹತಂ ಧನಂಜ
ಯೋಹಂತಿ ಕೌರವಕುಲಂ ಯಥಾ ಪುನಃ ॥

ಇದಕ್ಕೆ—ವಾಸುದೇವನಿಂ ಕೊಲ್ಲಲ್ಪಟ್ಟ ಕೌರವಕುಲವನ್ನು ಪುನಃ ಅರ್ಜುನನು ಹ್ಯಾಗೆ ಕೊಂದನೋ, ಹಾಗೆ ನಿತ್ಯಬೋಧಸ್ವರೂಪವಾದ ಬ್ರಹ್ಮದಿಂ ಮೊದಲೇ ಬಾಧಿಸಲ್ಪಟ್ಟ ಜಗದ್ಭ್ರಮವನ್ನು ಮಹಾವಾಕ್ಯದಿಂ ಪುಟ್ಟಿದ ಜ್ಞಾನವು ಪುನಃ ನಾಶಪಡಿಸುವದು, ಎಂದರ್ಥ.

ಅ|| ಹೀಗೆ ಶ್ಲೋಕದ ಪೂರ್ವಾರ್ಧದಿಂದ ವಿಶ್ವಪ್ರತೀತಿಗೆ ಕಾರಣವನ್ನೂ, ಅದರ ನಿವೃತ್ತಿಗೆ ಉಪಾಯವನ್ನೂ ಸಹ ಹೇಳಿದರು. ಈಗ ಉತ್ತರಾರ್ಧದಿಂದ ಅವಶೇಷವಸ್ತುವನ್ನು ಆಚಾರ್ಯರು ತೋರಿಸುವರು.

## ||೩|| ಅವಶೇಷವಸ್ತು ಸ್ವರೂಪ ನಿರೂಪಣೆ.

(ಮನೋವಾಗತೀತಮಿತಿ) ಆವಸ್ತುವು ಮನವಾಣಿಗಳಿಂದ ಅತೀತ ಅಂದರೆ;—ರಹಿತವಾಗಿರುವದು. ಅದನ್ನು

(೧) " ಯನ್ಮನಸಾ ನಮನುತೇ "

(೨) " ಯದ್ವಾಚಾಽನಭ್ಯುದಿತಂ "

(೩) " ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ " ಇತ್ಯಾದಿ ಶೃತಿಗಳಲ್ಲಿಯೂ, ಪೇಳಿರುವದು. ಇವುಗಳ ಅರ್ಥವೇನೆಂದರೆ;

೧—ಯಾವ ಬ್ರಹ್ಮವನ್ನು ಜನಗಳು ಮನದಿಂದ ಮನನಕ್ಕೆ ವಿಷಯ ಮಾಡಿಕೊಳ್ಳಲು ಶಕ್ಯರಲ್ಲವೋ,

೨—ಯಾವ ಬ್ರಹ್ಮವನ್ನು ವಾಣಿಯಿಂದ ವರ್ಣಿಸಲಶಕ್ಯವೋ,

೩—ಯಾವದನ್ನು ಮನಸಹಿತವಾದ ವಾಣಿಯು ಪೊಂದದೆ ಯಾತರಿಂದ ನಿವೃತ್ತವಾಗುವದೋ. ಯೆಂದು ಶೃತಿಗಳ ಅರ್ಥವು. ಆದ್ದರಿಂದ ಬ್ರಹ್ಮವು ಮನವಾಣಿಗಳಿಗೆ ವಿಷಯವಲ್ಲ.

ಮತ್ತು " ಯನ್ಮನಸಾಧ್ಯಾಯತಿ ತದ್ವಾಚಾ ವದತಿ " ಈ ನ್ಯಾಯದಿಂದಲೂ ಕೂಡ, ಯಾವದನ್ನು ಮನದಿಂದ ಪುರುಷನು ಧ್ಯಾನಿಸುವನೋ, ಅದನ್ನು ವಾಣಿಯಿಂದ ಉಚ್ಚರಿಸುವನು. ಬ್ರಹ್ಮವು ಧ್ಯಾನಕ್ಕೆ ವಿಷಯವಲ್ಲ; ಆದ್ದರಿಂದ ಉಚ್ಚರಿಸುವದಕ್ಕೂ ವಿಷಯವಲ್ಲ.

ಇನ್ನು ಜಾತಿ, ಗುಣ, ಕ್ರಿಯಾ ಸಂಬಂಧವುಳ್ಳ ಪದಾರ್ಥಗಳಾದರೆ ವಾಣಿಗೆ ವಿಷಯವಾಗುವವು. ಬ್ರಹ್ಮವು ಜಾತ್ಯಾದಿಗಳಿಂ ರಹಿತವಾಗಿರುವದು ; ಇದರಿಂದಲೂ ವಾಣಿಗೆ ವಿಷಯವಲ್ಲ.

ಬಳಿಕ ಮನವಾಣಿಗಳ ವ್ಯಾಪಾರವಾದರೂ, ಯಾವ ಚೇತನಬ್ರಹ್ಮದಿಂದಲೇ ಸಿದ್ಧವಾಗುವದೋ, ಹೀಗೆಂಬುವದರಿಂದಲೂ ಅದು ಮನವಾಣಿಗಳಿಗೆ ವಿಷಯವಲ್ಲ. ಈ ಮಾತು " ಯೇನಾಹುರ್ಮನೋಮತಂ ಯೇನವಾಗಭ್ಯುದ್ಯತೇ " ಇತ್ಯಾದಿ ಶೃತಿಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಇದರ

ಅರ್ಥವೇನೆಂದರೆ;—ಯಾವ ಬ್ರಹ್ಮದಿಂದ ಮನವು ಮನನವಂ ಮಾಡುವದರಲ್ಲಿ ಸಮರ್ಥವಾಗುವದೋ, ಹೀಗೆ ಬ್ರಹ್ಮವೇತ್ತರು ಹೇಳುತ್ತಾರೆ. ಮತ್ತು ಯಾವದರಿಂದ ವಾಣಿಯು ಪ್ರಕಾಶಿತವಾಗುವದೋ, ಯೆಂದರ್ಥ—

ಇನ್ನು ಯಾರಾದರು "ಮನಸೈವೇದಮಾಪ್ತವ್ಯಂ–ತಂತ್ವೌಪನಿಷದಂ ಪುರುಷಂ" ಇತ್ಯಾದಿ ಶೃತಿಗಳಿಂದ ಬ್ರಹ್ಮವು ಮನದಿಂ ಪೊಂದಲ್ಪಡುವದು. ಮತ್ತು 'ಪುರುಷ' ಅಂದರೆ, ಪರಮಾತ್ಮನು ಉಪನಿಷದ್ಗಮ್ಯನು. ಹೀಗೆ ಕೇಳಿದ್ದೇವೆ; ಆದ್ದರಿಂದ ಆ ಶೃತಿಗಳಿಗೆ ವಿರೋಧವಾದೀತು ? ಅಂದರೆ;—ಅದನ್ನು ಕೇಳು ! ಬ್ರಹ್ಮಜ್ಞಾನದಲ್ಲಿ ಆವರಣ ಭಂಗಮಾತ್ರ ವೃತ್ತಿಗೆ ಉಪಯೋಗವಾದ್ದರಿಂದ ಮನದಿಂ ಪೊಂದಲ್ಪಡುವದೆಂದು ಪೇಳಿರುವದು. ಇಷ್ಟೇ ಅಲ್ಲದೆ ಬ್ರಹ್ಮವು ಮನಕ್ಕೆ ವಿಷಯವೆಂಬ ಅರ್ಥವಂ ಪೇಳುವದರಲ್ಲಿ ಶೃತಿಗೆ ತಾತ್ಪರ್ಯವಿಲ್ಲ. ಹಾಗೆ ವೇದವಾಕ್ಯವೂ ಕೂಡ, ಬ್ರಹ್ಮವನ್ನು ಲಕ್ಷಣಾವೃತ್ತಿಯಿಂದ ಬೋಧಿಸುವದಲ್ಲದೆ ಶಕ್ತಿವೃತ್ತಿಯಿಂದ ಬೋಧಿಸುವದಿಲ್ಲ. ಆದ್ದರಿಂದ ಬ್ರಹ್ಮವು ವಾಣಿಗೆ ವಿಷಯವಲ್ಲ; ಮತ್ತು ಶೃತಿಗೂ ವಿರೋಧವಿಲ್ಲ.

ತಾತ್ಪರ್ಯವೇನಂದರೆ:—ಅಂತಃಕರಣಕ್ಕೂ, ಶಬ್ದಕ್ಕೂ ಎರಡೆರಡು ವೃತ್ತಿಗಳಿರುವವು.

[೧] ಫಲವ್ಯಾಪ್ತಿ—ಮತ್ತು ವೃತ್ತಿ ವ್ಯಾಪ್ತಿ. ಈ ಎರಡು ವೃತ್ತಿಗಳು ಅಂತಃಕರಣದ್ದಾಗಿರುವವು. ಎಲ್ಲಿ ಮನಸ್ಸಿಗೆ ಬ್ರಹ್ಮವಿಷಯವೆಂಬುದನ್ನು ನಿಷೇಧಿಸಿರುವದೋ, ಅಲ್ಲಿ ಫಲವ್ಯಾಪ್ತಿಗೆ ನಿಷೇಧವುಂಟು. ಮತ್ತೆಲ್ಲಿ ಮನ, ಅಥವಾ ಬುದ್ಧಿಯಿಂದ ಬ್ರಹ್ಮಗಮ್ಯವೆಂದು ಪೇಳಿರುವದೋ, ಅಲ್ಲಿ ವೃತ್ತಿ ವ್ಯಾಪ್ತಿ ಮಾತ್ರ ಆವರಣ ಭಂಗಕ್ಕೋಸುಗ ಅಂಗೀಕಾರಮಾಡಿರುವುದು. ಇದರಂತೆ

[೨] ಎಲ್ಲಿ ಶಬ್ದವಂ ನಿಷೇಧಿಸಿರುವದೋ, ಅಲ್ಲಿ ಶಕ್ತಿ ವೃತ್ತಿಯಂ ನಿಷೇಧಿಸಿರುವದು. ಮತ್ತೆಲ್ಲಿ ಶಬ್ದದಿಂದ ಜ್ಞೇಯವೆಂದು ಪೇಳಿರುವದೋ, ಅಲ್ಲಿ ಲಕ್ಷಣಾವೃತ್ತಿಯಂ ಗ್ರಹಿಸಿರುವದು, ಆದ್ದರಿಂದ ಶೃತಿಗಳಿಗೆ ತಮ್ಮಗಳಲ್ಲಿ ವಿರೋಧವಿಲ್ಲ; ಮತ್ತು ಬ್ರಹ್ಮವು ಮನವಾಣಿಗಳಿಗೆ ವಿಷಯವೂ ಅಲ್ಲ.

## ||೧|| ಬ್ರಹ್ಮಶುದ್ಧ.

ಪುನಃ ಆ ಬ್ರಹ್ಮವೆಂತಿರುವದೆಂದರೆ ;—(ವಿಶುದ್ಧಂ) ಅಂದರೆ, ವಿಶೇಷದಿಂ ಶುದ್ಧವಾಗಿರುವದು. ಅರ್ಥವೇನೆಂದರೆ;—ಮಾಯಾ, ಅವಿದ್ಯಾ ಮತ್ತು ಅದರ ಗುಣದೋಷಗಳಿಂ ರಹಿತವಾಗಿರುವದು. ಇನ್ನು

## ॥೨॥ ಬ್ರಹ್ಮಮುಕ್ತ:—

(ವಿಮುಕ್ತಂ) ಅಂದರೆ ;—ವಿಶೇಷದಿಂ ಮುಕ್ತವಾಗಿರುವದು. ಅರ್ಥವೇನೆಂದರೆ;—ಸದಾ ಮುಕ್ತವಾಗಿರುವದು.

ಶಂಕಾ, ಸಮಾಧಾನ:—ಯಾರೋ ಒಬ್ಬರು ಬ್ರಹ್ಮವು ಸದಾ ಮುಕ್ತವಾಗಿದ್ದರೆ, ಆಗ ಬಂಧ ಪ್ರತೀತಿ ಎಂತಾದೀತೆಂದರೆ ;—ಅದನ್ನು ಕೇಳು! ಮಿಥ್ಯಾಬಂಧ ಮೋಕ್ಷಗಳು ಮೂಢ ಪುರುಷನಿಂದಾರೋಪಿತವಾದ ಸ್ವಬುದ್ಧಿ ಕೃತ ದೋಷವೆನಿಸುವದು, ಅದೆಂತೆಂದರೆ—

ಶ್ಲೋ॥ ಬಂಧಶ್ಚ ಮೋಕ್ಷಶ್ಚ ಮೃಷೈವ ಮೂಢಾ
ಬುದ್ಧೇರ್ಗುಣಂ ವಸ್ತುನಿ ಕಲ್ಪಯಂತಿ ॥
ದೃಗಾವೃತಂ ಮೇಘಕೃತಾಂ ಯಥಾರವೌ
ಯತೋಽದ್ವಯಾಸಂಗಚಿದೇತದಕ್ಷರಂ ॥

ಇದರ ಅರ್ಥ—ಬುದ್ಧಿಯ ಗುಣವಾದ ಬಂಧಮೋಕ್ಷಗಳೆರಡನ್ನು ಮಿಥ್ಯವಾಗಿಯೇ [ಮೂಢಜನಗಳು] ವಸ್ತುವಿನಲ್ಲಿ ಕಲ್ಪಿಸುವರು; ಹ್ಯಾಗೆಂದರೆ, ಮೇಘದಿಂ ಮಾಡಲ್ಪಟ್ಟ ನೇತ್ರಗಳ ಆವರಣವನ್ನು ಸೂರ್ಯನಲ್ಲಿ ಜನಗಳು ಕಲ್ಪಿಸುವಂತೆ ವಸ್ತುವಿನಲ್ಲಿ ಕಲ್ಪಿಸುವರು. ಆದ್ದರಿಂದ ಬ್ರಹ್ಮವು ಅದ್ವಯ, ಅಸಂಗ, ಚೇತನ, ಅವಿನಾಶೀರೂಪವಾಗಿರುವದು.

ಹೀಗೆ ಪೇಳಿದ್ದರಿಂದ ಏನು ತಿಳಿಯಪಡಿಸಿದರೆಂದರೆ;—ಕೂಟಸ್ಥಕ್ಕೂ, ಬ್ರಹ್ಮಕ್ಕೂ ಸದಾ ಅಭೇದವಿದೆ; ಅವುಗಳಲ್ಲಿ ಬಂಧಮೋಕ್ಷ, ಜ್ಞಾನಾಜ್ಞಾನಾದಿ ಯಾವ ಧರ್ಮಗಳೂ ಇಲ್ಲ. ಮತ್ತೇನೆಂದರೆ;—ಅಜ್ಞಾನಾದಿ ಸಪ್ತ (೭) ಅವಸ್ಥೆಗಳು ಅಂತಃಕರಣ ಸಹಿತವಾದ ಆಭಾಸನಿಗೆ ಪೇಳಿರುವದು. ಬಂಧ ಮೋಕ್ಷಗಳೂ ಕೂಡ, ಆ ಅವಸ್ಥೆಯಲ್ಲಿಯೇ ಇರುವವು. ಅದನ್ನು ಪೇಳುವರು.

## ॥೪॥ ಸಪ್ತಾವಸ್ಥಾ ನಿರೂಪಣೆ.

ಶ್ಲೋ॥ ಅಜ್ಞಾನಮಾವೃತ್ತಿ ಸ್ತದ್ವದ್ವಿಕ್ಷೇಪಶ್ಚ ಪರೋಕ್ಷಧೀಃ ।
ಅಪರೋಕ್ಷಮತಿಃಶೋಕ ಮೋಕ್ಷಸ್ತೃಪ್ತಿರ್ನಿರಂಕುಶಾ ॥
ಸಪ್ತಾವಸ್ಥಾ ಇಮಾಃ ಸಂತಿ ಚಿದಾಭಾಸಸ್ಯ ತಾಸ್ವಿಮೌ ।
ಬಂಧಮೋಕ್ಷೌ ಸ್ಥಿತೌತತ್ರ ತಿಸ್ರೋಽ ಬಂಧಕೃತಃ ಸ್ಮೃತಾಃ॥

ಅರ್ಥ—(೧) ಅಜ್ಞಾನ,
(೨) ಆವರಣ, ತದ್ವತ್,
(೩) ವಿಕ್ಷೇಪ, ಚ, ಪುನಃ,
(೪) ಪರೋಕ್ಷಜ್ಞಾನ,
(೫) ಅಪರೋಕ್ಷಜ್ಞಾನ,
(೬) ಶೋಕನಿವೃತ್ತಿ,
(೭) ನಿರಂಕುಶತೃಪ್ತಿ. ಈ ಸಪ್ತ ಅವಸ್ಥೆಗಳು ಚಿದಾಭಾಸನಿಗಿರುವವು. ಅವುಗಳಲ್ಲಿ ಈ ಬಂಧ, ಮೋಕ್ಷಗಳೆರಡೂ ಇರುತ್ತಿರುವವು. ಮತ್ತು ಆ ಏಳರಲ್ಲಿ ಆದಿಯಾದ ಮೂರು ಬಂಧಕ್ಕೆ ಹೇತುವೆಂದು ಕೇಳಲ್ಪಟ್ಟಿರುವದು.

೧—ನಾನು ಅದ್ವಯಬ್ರಹ್ಮವನ್ನು ತಿಳಿಯದಿರುವೆನು, ಈ ವ್ಯವಹಾರಕ್ಕೆ ಹೇತು ಅಜ್ಞಾನವಾಗಿರುವದು.

೨—ಬ್ರಹ್ಮವಿಲ್ಲ. ಭಾಸಿಸುವದಿಲ್ಲ; ಈ ಅಸತ್ವಾಪಾದಕ ಮತ್ತು ಅಭಾನಾಪಾದಕವಾದ ಎರಡು ಅಂಶದ ಪೆಸರು ಆವರಣವೆನಿಸುವದು.

೩—ನಾನು ಕರ್ತನು, ನಾನು ಭೋಕ್ತನು, ನಾನು ಸಂಸಾರಿಯಾಗಿರುವೆನು, ಇಂತೆಂಬ ಈ ಭ್ರಾಂತಿಗೆ ವಿಕ್ಷೇಪವೆಂದು ಪೆಸರು. ಇವು ಮೂರು ಬಂಧಕ್ಕೆ ಕಾರಣವಾಗಿರುವವು.

೪—ಬ್ರಹ್ಮ ಅಸ್ತಿ, ಈ ಜ್ಞಾನಕ್ಕೆ ಪರೋಕ್ಷಜ್ಞಾನವೆನ್ನುವರು. ಅದರಿಂ 'ಬ್ರಹ್ಮನಾಸ್ತಿ' ಈ ಆವರಣಾಂಶದ ನಿವೃತ್ತಿಯಾಗುವದು.

೫—ಬ್ರಹ್ಮ ನಾನಾಗಿರುವೆನು. ಈ ಜ್ಞಾನಕ್ಕೆ ಅಪರೋಕ್ಷಜ್ಞಾನವೆನ್ನುವರು. ಇದರಿಂದ ಸಮಸ್ತ ಅವಿದ್ಯಾಜಾಲವೂ ನಾಶವಾಗುವದು.

೬—ನನ್ನಲ್ಲಿ ಜನ್ಮಾದಿ ಸಂಸಾರವಿಲ್ಲ; ಈ ನಿಶ್ಚಯಕ್ಕೆ ಶೋಕನಾಶವೆಂದು ಪೆಸರು.

೭—ನಾನು ಕೃತಕೃತ್ಯನಾದೆನು. ಪಡೆಯತಕ್ಕದ್ದಂ ಪಡೆದಿರುವೆನು. ಈ ಹರ್ಷವಿಶೇಷಕ್ಕೆ ನಿರಂಕುಶ ತೃಪ್ತಿಯೆಂದು ಪೆಸರು. ಆ ಶೋಕನಾಶವಾಗಿ ಪರಮಸುಖದ ಪ್ರಾಪ್ತಿಯಾಗಲು ಮೋಕ್ಷವೆನಿಸಿಕೊಳ್ಳುವದು.

ಈ ರೀತಿಯಿಂದ ಬಂಧಮೋಕ್ಷಕಲ್ಪನೆಯು ಬುದ್ಧಿಯಿಂದೊಡಗೂಡಿದ ಚಿದಾಭಾಸನಲ್ಲಿರುವದು. ಅದು ಸ್ವಪ್ನದಂತೆ ಮಿಥ್ಯಾ ಅವಿದ್ಯಾಕೃತವಾಗಿರುವದು. ಇದಕ್ಕೆ

ದೃಷ್ಟಾಂತ:—ಯಾವನೋ ಒಬ್ಬ ರಾಜನಿಗೆ ಒಂದು ಸ್ವಪ್ನವಾಯಿತು, ಅದರಲ್ಲಿ ಅವನು ತಿಳಿದದ್ದೇನೆಂದರೆ;—ಮತ್ತೊಬ್ಬ ಯಾವನೋ ತನ್ನ ರಾಜ್ಯವಂ ತೆಗದುಕೊಂಡಂತೆಯೂ, ತಾನು ದೇಶದಿಂ ಭ್ರಷ್ಟನಾಗಿ ದೇಶಾಂತರಕ್ಕೆ ಹೋದಂತೆಯೂ, ಅಲ್ಲಿ ಭಿಕ್ಷದಿಂ ಜೀವಿಸುತ್ತಿರಲು, ಅಲ್ಲಿಯೂ ದುರ್ಭಿಕ್ಷ ಉಂಟಾದಂತೆಯೂ, ಆಗ ಕ್ಷುಧೆಯಿಂ ಪೀಡಿತನಾಗಿ; ಯಾವನೋ ಒಬ್ಬ ರಾಜನ ತೋಟದಲ್ಲಿ ಕಳ್ಳತನದಿಂದ ಫಲವಂ ಕಿತ್ತಂತೆಯೂ, ಆಗ ಅಲ್ಲಿದ್ದ ತೋಟರಕ್ಷಕನು ತನ್ನಂ ಹಿಡಿದು ಮುಳ್ಳಿನ ಮರಕ್ಕೆ ಕಟ್ಟಿಹಾಕಿದಂತೆಯೂ, ಪುನಃ ಯಾರೋ ಒಬ್ಬ ದಯಾವಂತನು ಬಿಡಿಸಿ, ಸ್ವರಾಜ್ಯದಲ್ಲಿ ಸ್ಥಾಪನೆಗೈದಂತೆಯೂ ತೋರಿತು. ಮರಳಿ ಯಾವಾಗ ತಾನು ಎಚ್ಚರಗೊಂಡು ನೋಡಿದನೋ, ಆಗ ಯಾವನೂ ನನ್ನನ್ನು ಕಟ್ಟಿರಲಿಲ್ಲ; ಯಾವನೂ ಬಿಡಿಸಲಿಲ್ಲ; ನಾನು ಹ್ಯಾಗಿದ್ದೆನೋ, ಹಾಗೆಯೇ ಸದಾ ಇರುವೆನು ಯೆಂದು ತಿಳಿದನು.

ಸಿದ್ಧಾಂತ:—ಇದರಂತೆ ಅವಿದ್ಯಾರೂಪವಾದ ನಿದ್ರೆಯಲ್ಲಿ ಸರ್ವಕಲ್ಪನೆಯೂ ಇರುವದು. ಪರಮಾರ್ಥ ದೃಷ್ಟಿಯಿಂ ನೋಡಿದರೆ, ಯಾವ ಬಂಧವೂ ಇಲ್ಲ, ಮುಕ್ತಿಯೂ ಇಲ್ಲ, ಜನ್ಮಿಸುವದೂ ಇಲ್ಲ, ಮರಣವಾಗುವದೂ ಇಲ್ಲ. ಈ ವಿಷಯದಲ್ಲಿ

**ಶೃತಿ॥ ನನಿರೋಧೋ ನಚೋತ್ಪತ್ತಿರ್ನ ಬದ್ಧೋ ನಚಸಾಧಕಃ ।**
**ನಮುಮುಕ್ಷುರ್ನವೈಮುಕ್ತ ಇತ್ಯೇಷಾ ಪರಮಾರ್ಥತಾ ॥**

ಇದರ ಅರ್ಥ—'ವೈ' ಎಂದರೆ, ನಿಶ್ಚಯವಾಗಿ, ಯಾವದಕ್ಕೂ ನಾಶವಿಲ್ಲ, ಉತ್ಪತ್ತಿಯಿಲ್ಲ, ಯಾವನೂ ಬದ್ಧನಿಲ್ಲ; ಸಾಧಕನಿಲ್ಲ, ಮುಮುಕ್ಷುವಿಲ್ಲ, ಮುಕ್ತನಿಲ್ಲ, ಇದು ಪರಮಾರ್ಥವು.

ಇದರಿಂದ ಏನು ಸಿದ್ಧವಾಯಿತೆಂದರೆ;—ಬ್ರಹ್ಮವು ನಿತ್ಯಮುಕ್ತವಾಗಿರುವದು. ಹೀಗೆ ಜಗತ್ತಿಗೆ ಅಧಿಷ್ಠಾನವಾಗಿ, ಮನವಾಣಿಗಳಿಗೆ ಅತೀತವಾಗಿ ಸದಾ ಶುದ್ಧಮುಕ್ತಸ್ವರೂಪವಾದ ಯಾವ ನಿತ್ಯಪರಂಬ್ರಹ್ಮವುಂಟೋ, ಅದೇ ನಾನಾಗಿರುವೆನು. ಇದು ನಾಲ್ಕನೇ ಶ್ಲೋಕದ ಅರ್ಥವು. ॥೪॥

ಅ—ಮೊದಲು ಬ್ರಹ್ಮವು ವಾಣಿಗೆ ಅವಿಷಯವೆಂದು ಪೇಳಲ್ಪಟ್ಟಿತು; ಆ ಅರ್ಥವನ್ನು ಸ್ಪಷ್ಟಪಡಿಸುವವರಾಗಿ ಸಮಾಧಿಯಲ್ಲಿರುವ ಜೀವನ್ಮುಕ್ತರಿಂದ ಅನುಭವಿಸಲ್ಪಡುವ ತತ್ವವನ್ನು ಈ ಐದನೇ ಶ್ಲೋಕದಲ್ಲಿ ಆಚಾರ್ಯರು ಪ್ರತಿಪಾದನೆಯಂ ಮಾಡುವರು.

## ||೫|| ಪರಿಶೇಷ ವಸ್ತುಸ್ವರೂಪ.

—: ನಿಷೇಧೇಕೃತೇ ಇತಿ :—

ಮೂ|| ನಿಷೇಧೇ ಕೃತೇ ನೇತಿನೇತೀತಿ ವಾಕ್ಯೈಃ
ಸಮಾಧಿಸ್ಥಿತಾನಾಂ ಯದಾ ಭಾತಿ ಪೂರ್ಣಂ ||
ಅವಸ್ಥಾತ್ರಯಾತೀತ ಮದ್ವೈತಮೇಕಂ
ಪರಂಬ್ರಹ್ಮನಿತ್ಯಂ ತದೇವಾಹಮಸ್ಮಿ ||೫||

"ನೇತಿನೇತಿ" ಈ ವಾಕ್ಯಗಳಿಂದ ನಿಷೇಧಿಸಲ್ಪಟ್ಟು, ಪರಿಶೇಷವಾದ ಯಾವ ತತ್ವವು ಸಮಾಧಿಯಲ್ಲಿರುವ ಜೀವನ್ಮುಕ್ತರಿಗೆ ಪೂರ್ಣವಾಗಿ ಭಾಸವಾಗುವದೋ ಮತ್ತು ಅವಸ್ಥಾತ್ರಯದಿಂದತೀತವಾಗಿ, ಅದ್ವೈತವಾಗಿ, ಏಕವಾಗಿ ಯಾವ ವಸ್ತುವಿರುವದೋ, ಅದೇ ನಿತ್ಯ ಪರಂಬ್ರಹ್ಮನಾನಾಗಿರುವೆನು. ಇದು ಪದದ ಅರ್ಥ.

**ಟೀಕಾ:**—"ನೇತಿನೇತಿ" ಈ ವಾಕ್ಯಗಳಿಂದ ಸರ್ವ ದೃಶ್ಯಗಳನ್ನು ನಿಷೇಧಿಸಿದ್ದೇ ಆದರೆ ವಸ್ತುವಿನ ಜ್ಞಾನವಾಗುವದು.

ತಾತ್ಪರ್ಯವೇನೆಂದರೆ;—ವೇದದಲ್ಲಿ ಜ್ಞೇಯ ಬ್ರಹ್ಮದ ಉಪದೇಶಮಾರ್ಗವು ಎರಡಿರುವದು.

ಒಂದು ವಿಧಿಮುಖವೆಂದು.

ಮತ್ತೊಂದು ನಿಷೇಧಮುಖವೆಂದು. ಮೊದಲು ವಿಧಿಮುಖದಿಂದ ಸೋಪಾಧಿಕ ಬ್ರಹ್ಮವಂ ಬೋಧಿಸಿ, ಪುನಃ ವೇದವು ನಿಷೇಧಮುಖದಿಂದ ಬ್ರಹ್ಮವಂ ಬೋಧಿಸುವದು.

**ಶಂಕಾ, ಸಮಾಧಾನ:**—ಯಾವನಾದರು "ಸತ್ಯಂ ಜ್ಞಾನಮನಂತಂ ಬ್ರಹ್ಮ—ಆನಂದೋಬ್ರಹ್ಮ" ಇತ್ಯಾದಿ ವಿಧಿಮುಖವಾಕ್ಯಗಳಿಂದಲೂ, ಶುದ್ಧ ಬ್ರಹ್ಮವಂ ಬೋಧಿಸುವದೆಂದರೆ;—ಅದನ್ನು ಕೇಳು! ಸತ್ಯಜ್ಞಾನಾದಿ ಪದವಾದರೂ ಸಾಕ್ಷಾತ್ ಶುದ್ಧವಸ್ತುವಿನ ಬೋಧಕವಲ್ಲ; ಮತ್ತೇನೆಂದರೆ;—ಅನೃತ, ಅಜ್ಞಾನ, ಪರಿಚ್ಛಿನ್ನ, ದುಃಖ ಈ ವಿರೋಧಾಂಶಗಳ ವ್ಯಾವೃತ್ತಿ ಪೂರ್ವಕ, ಲಕ್ಷಣಾವೃತ್ತಿಯಿಂದ ಬ್ರಹ್ಮವಂ ಬೋಧಿಸುವದು. ಇದೂ ಅಲ್ಲದೆ; ಮಹಾವಾಕ್ಯಗಳಲ್ಲಿ ಹ್ಯಾಗೆ ಲಕ್ಷಣೆಯಂ ಗ್ರಹಿಸಿಧೆಯೋ, ಹಾಗೆ ಸತ್ಯ, ಜ್ಞಾನ, ಆನಂದಪದವೂ ಕೂಡ ಲಕ್ಷಣೆಯಿಂದಲೇ ಶುದ್ಧವಂ ಬೋಧಿಸುವದು.

**೧—ಸತ್ಯಪದದ ವಾಚ್ಯಾರ್ಥ, ಲಕ್ಷ್ಯಾರ್ಥ.**

(೧) ಮಾಯೆಯ ಸತ್ತೆಯೂ, ಚೇತನದ ಸತ್ತೆಯೂ ಎರಡೂ ಸೇರಿ ಸತ್ಯಪದದ ವಾಚ್ಯವಾಗಿರುವದು.

(೨) ನಿರಪೇಕ್ಷಿತ ಸತ್ಯ ಲಕ್ಷ್ಯವಾಗಿರುವದು.

**೨—ಜ್ಞಾನಪದದ ವಾಚ್ಯಾರ್ಥ, ಲಕ್ಷ್ಯಾರ್ಥ.**

(೧) ವೃತ್ತಿಜ್ಞಾನವೂ, ಸ್ವಯಂ ಪ್ರಕಾಶರೂಪಜ್ಞಾನವೂ, ಎರಡೂಸೇರಿ ಜ್ಞಾನಪದದ ವಾಚ್ಯವಾಗುವದು.

(೨) ಸ್ವಯಂ ಪ್ರಕಾಶಜ್ಞಾನ ಲಕ್ಷ್ಯವಾಗಿರುವದು.

**೩—ಆನಂದಪದದ ವಾಚ್ಯಾರ್ಥ, ಲಕ್ಷ್ಯಾರ್ಥ.**

(೧) ಪ್ರಿಯಮೋದಾದಿ ವೃತ್ತಿಆನಂದವೂ, ಪರಮ ಪ್ರೇಮಾಸ್ಪದವಾದ ಸುಖವೂ ಎರಡೂ ಸೇರಿ, ಆನಂದಪದದ ವಾಚ್ಯವೆನಿಸುವದು.

(೨) ವೃತ್ತಿಭಾಗವಂ ಬಿಟ್ಟು, ಕೇವಲ ಸುಖ ಲಕ್ಷ್ಯವೆನ್ನಲ್ಪಡುವದು. ಹೀಗೆ ಎಲ್ಲಾ ವಾಕ್ಯಗಳಲ್ಲಿಯೂ ತಿಳಿದುಕೊಳ್ಳಬೇಕು—ಆದ್ದರಿಂದ ವಿಧಿಮುಖದ ಪರ್ಯವಸಾನವು, ನಿಷೇಧಮುಖದಲ್ಲಿರುವದು. ಆ ನಿಷೇಧಮುಖಬೋಧಕ ವಾಕ್ಯಗಳು ಯಾವವೆಂದರೆ;—

**॥೧॥ ಅಥಾತ ಆದೇಶೋ ನೇತಿನೇತಿ.**

**೨—ಅಸ್ಥೂಲಮನಣ್ವಹ್ರಸ್ವ ಮದೀರ್ಘಮಲೋಹಿತಮ
ಸ್ನೇಹಮಚ್ಛಾಯಮತಮೋವಾಯ್ವನಾಕಾಶಮಸಂ
ಗಮರಸಮಗಂಧಮಚಕ್ಷುಷ್ಕಮಶ್ರೋತ್ರಮವಾಗ
ಮನೋತೇಜಸ್ಕ ಮಪ್ರಾಣ ಮಮುಖಮಮಾತ್ರ
ಮನಂತರ ಮಬಾಹ್ಯಮಿತಿ ॥**

ಅರ್ಥ—೧-ಅಧ್ಯಾರೋಪಾನಂತರ " ನೇತಿನೇತಿ " ಹೀಗೆ ಉಪದೇಶಿಸಲ್ಪಡುವದು.

೨—ಅಕ್ಷರ ಬ್ರಹ್ಮವು ಘಟದಂತೆ ಸ್ಥೂಲವಲ್ಲ; ಪರಮಾಣುವಿನಂತೆ ಸೂಕ್ಷ್ಮವಲ್ಲ, ತೃಣದಂತೆ ಹ್ರಸ್ವವಲ್ಲ, ಲತೆಯಂತೆ ದೀರ್ಘವಲ್ಲ, ಅಗ್ನಿಯಂತೆ ಲೋಹಿತವಲ್ಲ, ಜಲದಂತೆ ಸ್ನೇಹವಲ್ಲ, ಕೃಷ್ಣಭೂಮಿಯಂತೆ ಛಾಯವಲ್ಲ, ಅಂಧಕಾರದಂತೆ ತಮವಲ್ಲ, ವಾಯುವಿನಂತೆ ಗತಿಯುಳ್ಳದ್ದಲ್ಲ, ಅದು ಶೂನ್ಯಾಕಾಶ ರೂಪವಲ್ಲ, ಸಂಗ ಉಳ್ಳದ್ದಲ್ಲ, ರಸವಲ್ಲ, ಗಂಧವಲ್ಲ, [ರಸ ಗಂಧಗಳ ನಿಷೇಧದಿಂದ ಶಬ್ದಸ್ಪರ್ಶ

ರೂಪಗಳಿಗೂ ನಿಷೇಧವೆಂದು ತಿಳಿದುಕೊಳ್ಳಬೇಕು.] ಮತ್ತು ಚಕ್ಷುವಲ್ಲ, ಶ್ರೋತ್ರವಲ್ಲ. [ಚಕ್ಷುಶ್ರೋತ್ರಗಳ ನಿಷೇಧದಿಂದ ತ್ವಕ್, ರಸನಾ, ಘ್ರಾಣಗಳಿಗೂ, ನಿಷೇಧವೆಂದರಿಯತಕ್ಕದ್ದು.] ಇನ್ನು ವಾಕ್ ಅಲ್ಲ, [ಇಲ್ಲಿವಾಗಿಂದ್ರಿಯದ ನಿಷೇಧದಿಂದ ಎಲ್ಲಾ ಕರ್ಮೇಂದ್ರಿಯಗಳಿಗೂ ನಿಷೇಧವಂ ತಿಳಿಯಬೇಕು.] ಬಳಿಕ ಮನವಲ್ಲ, ತೇಜವಲ್ಲ;—ಅಂದರೆ, ಬುದ್ಧಿಯಲ್ಲ; [ಇಲ್ಲಿ ಮನ ಬುದ್ಧಿಗಳ ನಿಷೇಧದಿಂದ ಚಿತ್ತ ಅಹಂಕಾರಗಳಿಗೂ ನಿಷೇಧವೆಂದರಿತುಕೊಳ್ಳತಕ್ಕದ್ದು.] ಇನ್ನು ನಮುಖ ಅಂದರೆ, ಸೂಕ್ಷ್ಮದೇಹವಲ್ಲ; ನಮಾತ್ರಾ ಅಂದರೆ, ಕಾರಣದೇಹವೆಂಬ ಅವಿದ್ಯವಲ್ಲ. ಮತ್ತು ಬಾಹ್ಯವಲ್ಲ, ಅಂತರವಲ್ಲ. ತಾತ್ಪರ್ಯವೇನೆಂದರೆ;—ಉಪ್ಪಿನ ಗಡ್ಡೆಯಂತೆ ಏಕರಸವಾಗಿ ಬ್ರಹ್ಮ ವಿರುವದ್ದರಿಂದ ಬಾಹ್ಯ ಅಥವಾ ಅಂತರವೆಂದು ಹೇಳಲ್ಪಡುವದಿಲ್ಲ. ಅವಿಚ್ಛಿನ್ನ

ಪೂರ್ವದಲ್ಲಿ ಹೇಳಿದ 'ನೇತಿನೇತಿ' ಎಂಬ ಎರಡು ನಕಾರಗಳಿಗೆ ಅರ್ಥವೇನೆಂದರೆ:—

I ಒಂದನೇ ನಕಾರದಿಂದ ಮೂರ್ತಕ್ಕೆ ನಿಷೇಧವೂ,
ಎರಡನೇ ನಕಾರದಿಂದ ಅಮೂರ್ತಕ್ಕೆ ನಿಷೇಧವೂ ಹೇಳಲ್ಪಡುವದು.

೧—ಅಗ್ನಿ-ಜಲ-ಪೃಥ್ವಿ; ಇವು ಮೂರು ಭೂತಗಳು ಮೂರ್ತವೆನ್ನಲ್ಪಡುವವು.

೨—ವಾಯು, ಆಕಾಶ ಇವೆರಡು ಭೂತಗಳು ಅಮೂರ್ತವೆನ್ನಲ್ಪಡುವವು. ಅಥವಾ,

II [೧] ಸ್ಥೂಲ ಪ್ರಪಂಚವು ಮೂರ್ತ,
[೨] ಸೂಕ್ಷ್ಮ ಪ್ರಪಂಚವು ಅಮೂರ್ತವಾಗುವದು.

III ಅಥವಾ, ಸ್ಥೂಲ ಸೂಕ್ಷ್ಮಗಳೆರಡು ಪ್ರಪಂಚವೂ ಕಾರ್ಯರೂಪವಾದ್ದರಿಂದ ಮೂರ್ತವಾಗಿರುವದು (೧). ಮತ್ತು

ಕಾರಣ ರೂಪವಾದ ಅವ್ಯಾಕೃತವು ಅಮೂರ್ತವಾಗಿರುವದು (೨). ಆ ಮೂರ್ತಾಮೂರ್ತಗಳೆರಡನ್ನು ಎರಡು ನಕಾರಗಳಿಂದ ನಿಷೇಧ ಮಾಡಿರುವದು,

IV ಅಥವಾ, ಒಂದು ನಕಾರದಿಂದ ಕಾರ್ಯಕಾರಣರೂಪವಾದ ಭಾವದ ನಿಷೇಧವನ್ನೂ,

ಮತ್ತೊಂದು ನಕಾರದಿಂದೆ ನಿಸ್ತತ್ವರೂಪವಾದ ಅಭಾವದ ನಿಷೇಧವನ್ನೂ ಮಾಡಿರುವದು. ಅದನ್ನು

ಶ್ಲೋ॥ ನಕಾರಏಕೋ ಭಾವಾಖ್ಯಂ ಸ್ಥಿರಂ ವ್ಯುತ್ಕಾರ್ಯಕಾರಣಂ ॥ ತನ್ನಿಷೇಧ್ಯತಿಚಾನ್ಯೋಪಿ ದ್ವಯಾಭಾವ ಮನಾತ್ಮಕಂ ॥

ಈ ವಾಕ್ಯದಲ್ಲಿ ಪೇಳಿರುವದು. ಇದರ ಅರ್ಥವು ಸ್ಪಷ್ಟವಾಗಿದೆ. ಆದ್ದರಿಂದ ಬ್ರಹ್ಮವು ವಿಧಿಮುಖ ಗೋಚರವಲ್ಲ: ಮತ್ತೇನೆಂದರೆ;—ನಿಷೇಧ ಮುಖದಿಂದಲೇ ವೇದವು ಪ್ರತಿಪಾದನೆ ಮಾಡಿರುವದು.

ಮತ್ತು 'ಇದಂ' ಎಂಬ ದೃಶ್ಯರೂಪದಿಂದ ಯಾವ ಪದಾರ್ಥದ ಬೋಧೆಯಾಗುವದೋ, ಅದು ವಿಧಿಮುಖಕ್ಕೆ ವಿಷಯವಾಗುವದು. ಹಾಗೆ ಬ್ರಹ್ಮವಿಲ್ಲ; ಅದನ್ನು ಪೇಳುವರು:—

ಶ್ಲೋ॥ ತದಿದಂ ತಾದೃಶಮೀದೃಶಮೇತಾವತ್ತಾವದಿತಿ ಚಯುನ್ನಭವೇತ್ ॥ ಬ್ರಹ್ಮ ತದಿತ್ಯವಧೇಯಂ ನೋಚೇದ್ವಿಷಯೋ ಭವೇತ್ಪರೋಕ್ಷಂ ಚ ॥

ಅರ್ಥ—ತತ್, ಇದಂ, ತಾದೃಶ ಈದೃಶ, ಏತಾವತ್, ತಾವತ್, ಈಷಡ್ವಿಧ ಶಬ್ದ ಪ್ರತ್ಯಾರ್ಥ ಯಾವದಾಗುವದಿಲ್ಲವೋ, ಅದು ಬ್ರಹ್ಮವೆಂದು ತಿಳಿಯಬೇಕು. ಅನ್ಯಥಾ ಆದರೆ, ಬ್ರಹ್ಮವು ವಿಷಯರೂಪವೂ ಮತ್ತು ಪರೋಕ್ಷವೂ ಆದೀತು! ಅದು ಸಂಭವಿಸುವದಿಲ್ಲ.

ಹೀಗೆ ಪೇಳಿದ್ದರಿಂದ ಬ್ರಹ್ಮವು ಲೌಕಿಕವಾದ ಷಟ್ಪ್ರಮಾಣಗಳಿಗೆ ಅವಿಷಯವೆಂದು ತಿಳಿಯಪಡಿಸಿದರು. ಯಾಕೆಂದರೆ:—ಪ್ರತ್ಯಕ್ಷ ಪರೋಕ್ಷವಾದ ಸರ್ವ ದೃಶ್ಯಪದಾರ್ಥಗಳು ಷಟ್ ಪ್ರಮಾಣಗಳಿಗೆ ವಿಷವಾಗಿರುವವು. ಹೀಗೆ ಬ್ರಹ್ಮವಿಲ್ಲ; ಅದೆಂತೆಂದರೆ;—

### ॥೬॥ ಸಂಕ್ಷೇಪ ಪ್ರಮಾಣ ನಿರೂಪಣ.

(೧) ಪ್ರತ್ಯಕ್ಷ,
(೨) ಅನುಮಾನ,
(೩) ಶಬ್ದ,
(೪) ಉಪಮಾನ,
(೫) ಅರ್ಥಾಪತ್ತಿ,

(೬) ಅನುಪಲಬ್ಧಿ, ಈ ಭೇದದಿಂದ ಪ್ರಮಾಣವು ಆರು ವಿಧವಾಗಿರುವದು.

ಪ್ರಮಾಣ ಜನ್ಯಜ್ಞಾನಕ್ಕೆ ಪ್ರಮಾ ಎಂದು ಹೆಸರು. ಅದೂ ಕೂಡ, ೧–ಪ್ರತ್ಯಕ್ಷ, ೨–ಅನುಮಿತಿ, ೩–ಶಾಬ್ದೀ, ೪–ಉಪಮಿತಿ, ೫–ಅರ್ಥಾಪತ್ತಿ, ೬–ಅಭಾವಪ್ರಮಾ, ಈ ಭೇದದಿಂದ ಆರು ಬಗೆಯಾಗಿರುವದು. ಅದರಲ್ಲಿ—

(೧) ಪ್ರತ್ಯಕ್ಷ:—ಪ್ರತ್ಯಕ್ಷಜ್ಞಾನವು ಶ್ರೌತ್ರ, ತ್ವಾಚ, ಚಾಕ್ಷುಷ, ರಾಸನ, ಘ್ರಾಣಜಭೇದದಿಂದ ಐದು ಪ್ರಕಾರವಾಗಿರುವದು. ತಾರ್ಕಿಕರು ಆರನೆ ಮಾನಸಜ್ಞಾನವನ್ನೂ ಪ್ರತ್ಯಕ್ಷವೆಂದು ಗ್ರಹಿಸಿರುವರು. ಅದನ್ನು ಪಂಚಪಾದಿಕಾನುಸಾರಿಗಳು ಅಂಗೀಕಾರಮಾಡದೆ ಆರನೆ ಶಾಬ್ದೀಪ್ರತ್ಯಕ್ಷಪ್ರಮಾವಂ ಗ್ರಹಿಸಿರುವರು.

(೨) ಅನುಮಾನ:—ಅನುಮಾನವು.

೧—ಸ್ವಾರ್ಥ,

೨—ಪರಾರ್ಥಭೇದದಿಂದ ಎರಡು ಪ್ರಕಾರವಾಗಿರುವಕಾರಣ ಅನುಮಿತಿ ಜ್ಞಾನವೂ ಕೂಡ ಎರಡು ಬಗೆಯಾಗಿರುವದು.

(೧) ಕೇವಲ ವ್ಯಾಪ್ತಿಜ್ಞಾನಾದಿಯಿಂದ ಅನುಮಿತಿಯಾಗಲು ಅದು 'ಸ್ವಾರ್ಥ' ವೆನಿಸುವದು.

(೨) ವಾಕ್ಯಪ್ರಯೋಗದಿಂದಾಗಲು ಅದು 'ಪರಾರ್ಥ' ವೆನಿಸುವದು.

ಅವುಗಳಲ್ಲಿ ಪರಾರ್ಥಾನುಮಾನಕ್ಕೆ–ತಾರ್ಕಿಕರು,

(೧) ಪ್ರತಿಜ್ಞಾ,

(೨) ಹೇತು,

(೩) ದೃಷ್ಟಾಂತ,

(೪) ಉಪನಯ,

(೫) ನಿಗಮನ, ಇವೈದು ಅವಯವಗಳನ್ನು ಗ್ರಹಿಸಿರುವರು.

ಮತ್ತು ವೇದಾಂತದಲ್ಲಿ—

(೧) ಪ್ರತಿಜ್ಞಾ, (೨) ಹೇತು, (೩) ಉದಾಹರಣ ಈ ಮೂರು ವಾಕ್ಯಗಳಂ ಗ್ರಹಿಸಿರುವರು.

೧—ಸಾಧ್ಯವಿಶಿಷ್ಟ ಪಕ್ಷಬೋಧಕವಾಕ್ಯ ಪ್ರತಿಜ್ಞಾವಾಕ್ಯವೆನಿಸುವದು,

೨—ಲಿಂಗಬೋಧಕವಾಕ್ಯ ಹೇತು. ವಾಕ್ಯವಾಗುವದು.

೩—ಹೇತು ಸಾಧ್ಯ ಸಹಚಾರಬೋಧಕವಾಕ್ಯ ಉದಾಹರಣ ವಾಕ್ಯ ವೆನಿಸುವದು.

(೩) ಶಬ್ದ:—"ಅಯಂ ಪರ್ವತೋವಹ್ನಿಮಾನ್ ಧೂಮಾತ್ ಯಥಾ ಮಹಾನಸ" ಇತ್ಯಾದಿ ಶಾಬ್ದೀಜ್ಞಾನವು (೧) ವ್ಯವಹಾರಿಕ (೨) ಪರಮಾರ್ಥಭೇದದಿಂದ ಎರಡು ಪ್ರಕಾರವಾಗಿ ಪೇಳಿರುವರು. ವ್ಯವಹಾರಿಕವೂ ಕೂಡ,

(೧) ಲೌಕಿಕ,

(೨) ವೈದಿಕ ವಾಕ್ಯಭೇದದಿಂದ ಎರಡು ಬಗೆಯಾಗಿರುವದು. ಮತ್ತು ಶಬ್ದಬೋಧಕ್ಕೆ ಸಹಕಾರಿಯಾಗಿ ಆಕಾಂಕ್ಷಾ, ಯೋಗ್ಯತಾ, ತಾತ್ಪರ್ಯ, ಇವುಗಳ ಜ್ಞಾನ ಮತ್ತು ಆಸತ್ತಿ ಇವು ನಾಲ್ಕು ಗ್ರಹಿಸಿರುವರು.

(೪) ಉಪಮಾನ:—ಸಾದೃಶ್ಯಜ್ಞಾನಜನ್ಯಜ್ಞಾನ ಉಪಮಿತಿಪ್ರಮಾ ಎನ್ನಲ್ಪಡುವದು. ಎಂತೆಂದರೆ;—ಗೋವಿನಜ್ಞಾನದಿಂದ ಗವಯದ ಜ್ಞಾನವಾಗುವದಾವುದೋ, ಅದು ಸಾದೃಶ್ಯಜ್ಞಾನದಿಂದಾಗುವದು; ಮತ್ತು ತಾರ್ಕಿಕರು ವಿಧರ್ಮಜ್ಞಾನದಿಂದಲೂ ಉಪಮಿತಿಯನ್ನಂಗೀಕರಿಸುವರು. ಎಂತೆಂದರೆ;—ಉಷ್ಟ್ರವಿಧರ್ಮವು ಖಡ್ಗಮೃಗದ ಜ್ಞಾನವಾಗುವದು. ಮತ್ತು ಸಂಜ್ಞಿಯನ್ನು ಸಂಜ್ಞಿಯಲ್ಲಿ ವಾಚ್ಯತ್ವಜ್ಞಾನ ಉಪಮಿತಿ ಎಂದು ಪೇಳಿರುವರು.

(೫) ಅರ್ಥಾಪತ್ತಿ:—ಸಂಪಾದಕಜ್ಞಾನವನ್ನು ಅರ್ಥಾಪತ್ತಿ ಪ್ರಮಾ ಎನ್ನುವರು. ಆ ಸಂಪಾದಕ ಕಲ್ಪನೆಗೆ ಹೇತುವಾದ ಸಂಪಾದ್ಯಜ್ಞಾನವನ್ನು ಉಪಮಾನ ಪ್ರಮಾಣವೆಂದು ಪೇಳಿರುವರು. ಎಂತೆಂದರೆ;—ಹಗಲಲ್ಲಿ ಉಣ್ಣದ ಪುರುಷನು ರಾತ್ರಿಯಲ್ಲಿ ಭೋಜನವಂ ಮಾಡಲು ಅಲ್ಲಿ ಸ್ಥೂಲತ್ವವು ರಾತ್ರಿ ಭೋಜನದ ಸಂಪಾದ್ಯವಾಗಿರುವದು. ಮತ್ತು ರಾತ್ರಿ ಭೋಜನವು ಸಂಪಾದಕವಾಗಿರುವದು. ಆ ಅರ್ಥಾಪತ್ತಿಯು

(೧) ದೃಷ್ಟಾರ್ಥಾಪತ್ತಿ,

(೨) ಶೃತಾರ್ಥಾಪತ್ತಿ ಈ ಭೇದದಿಂದ ಎರಡು ಪ್ರಕಾರದ್ದಾಗಿರುವದು.

(೬) ಅನುಪಲಬ್ಧಿ:—ಅನುಪಲಬ್ಧಿಪ್ರಮಾಣದಿಂದ ಅಭಾವಜ್ಞಾನವಾಗುವದು. ನಿಷೇಧಮುಖಪ್ರತೀತಿಗೆ ವಿಷಯವಾದರೂ, ಅಲ್ಲದೆ ಪ್ರತಿಯೋಗೀ ಸಾಪೇಕ್ಷಪ್ರತೀತಿಗೆ ವಿಷಯವಾದರೂ ಅದು ಅಭಾವವೆನ್ನಲ್ಪಡುವದು. ಹೀಗೆ ಪ್ರಮಾಸಹಿತ ಷಟ್‌ಪ್ರಮಾಣಗಳನ್ನು ಸಂಕ್ಷೇಪದಿಂದ ನಿರೂಪಿಸಿದರು.

॥೭॥ ಬ್ರಹ್ಮವು ಷಟ್‌ಪ್ರಮಾಣಗಳಿಗೆ ವಿಷಯವಲ್ಲ:—
ಆ ಷಟ್‌ಪ್ರಮಾಣಗಳಿಗೆ ವಿಷಯ ಬ್ರಹ್ಮವಾಗುವದಿಲ್ಲ. ಯಾಕಂದರೆ;—

೧—ಪ್ರತ್ಯಕ್ಷಪ್ರಮಾಣಕ್ಕೆ ಅವಿಷಯ:—"ಅಶಬ್ದಮಸ್ಪರ್ಶಮರೂಪಮವ್ಯಯಂ" ಈ ಶೃತಿಯಲ್ಲಿ ಪೇಳಿದಂತೆ ಬ್ರಹ್ಮವು ಶಬ್ದಸ್ಪರ್ಶಾದಿಗಳಿಂ ರಹಿತವಾದ್ದರಿಂದ ಪ್ರತ್ಯಕ್ಷಪ್ರಮಾಣಕ್ಕೆ ವಿಷಯವಲ್ಲ.

೨—ಅನುಮಾನಪ್ರಮಾಣಕ್ಕೆ ಅವಿಷಯ:—"ನೈವಚತಸ್ಯಲಿಂಗಂ" ಈ ಶೃತಿಯಲ್ಲಿ ಪೇಳಿದಂತೆ ಬ್ರಹ್ಮವು ಲಿಂಗ (ಚಿಹ್ನ) ರಹಿತವಾದ್ದರಿಂದ ಅನುಮಾನಕ್ಕೂ ವಿಷಯವಿಲ್ಲ.

೩—ಶಬ್ದಪ್ರಮಾಣಕ್ಕೆ ಅವಿಷಯ:—"ಯತ್ತದದೃಶ್ಯಮಗ್ರಾಹ್ಯಮಗೋತ್ರಂ" ಈ ಶೃತಿಯಲ್ಲಿ ಪೇಳಿದಂತೆ, ಜಾತ್ಯಾದಿ ರಹಿತವಾದ್ದರಿಂದ ಬ್ರಹ್ಮವು ಶಬ್ದಗೋಚರವಲ್ಲ;

೪—ಉಪಮಾನಪ್ರಮಾಣಕ್ಕೆ ಅವಿಷಯ:—"ನತತ್ಸಮಶ್ಚಾಭ್ಯಧಿಕಂಚದೃಶ್ಯತೆ-ನತಸ್ಯಪ್ರತಿಮಾ" ಇತ್ಯಾದಿ ಶೃತಿಗಳಲ್ಲಿ ಪೇಳಿದಂತೆ ಸಾದೃಶ್ಯಕ್ಕೆ ಬಾರದ್ದರಿಂದ ಉಪಮಾನಕ್ಕೂ ಬ್ರಹ್ಮವಿಷಯವಲ್ಲ;

೫—ಅರ್ಥಾಪತ್ತಿಪ್ರಮಾಣಕ್ಕೆ ಅವಿಷಯ:—"ನತಸ್ಯಕಾರ್ಯಂ ಕರಣಂಚವಿದ್ಯತೇ" ಈ ಶೃತಿಯಲ್ಲಿ ಪೇಳಿದಂತೆ ಸಂಪಾದ್ಯಕಾರ್ಯದ ಅಭಾವದಿಂದ ಅರ್ಥಾಪತ್ತಿಗೆ ವಿಷಯವೂ ಅಲ್ಲ,

೬—ಅನುಪಲಬ್ಧಿಪ್ರಮಾಣಕ್ಕೆ ಅವಿಷಯ:—"ನಿತ್ಯೋನಿತ್ಯಾನಾಂ" ಈ ಶೃತಿ ಪೇಳಿದಂತೆ ಬ್ರಹ್ಮವು ಸದಾ ಭಾವರೂಪವಾಗಿರುವದ್ದರಿಂದ ಅನುಪಲಬ್ಧಿಪ್ರಮಾಣಕ್ಕೂ ವಿಷಯವಲ್ಲ.

(೧) ಈ ರೀತಿಯಿಂದ ಬ್ರಹ್ಮವು ಷಟ್‌ಪ್ರಮಾಣಗಳಿಗೆ ವಿಷಯವಲ್ಲ; ಮತ್ತು ವೇದಾಂತಗ್ರಂಥಗಳಲ್ಲಿ ಷಟ್ ಪ್ರಮಾಣಗಳನ್ನು ಹ್ಯಾಗೂ ವಿಚಾರದಲ್ಲಿ ಸಹಕಾರಿಯಾಗಿ ಗ್ರಹಿಸಿದ್ದಾರೆ. ಆದರೂ ಬ್ರಹ್ಮವು ಅವುಗಳಿಗೆ ವಿಷಯವಲ್ಲ;—

(೨) ಮುಖ್ಯಸ್ವಸಿದ್ಧ್ಯರ್ಥವಾಗಿ ಅವು ಚೇತನವನ್ನಪೇಕ್ಷಿಸುವವು. ಅದನ್ನು "ಪ್ರಮಾಣಮಪ್ರಮಾಣಂವಾ ಪ್ರಮಾಂತರಮಪೇಕ್ಷತೆ—ಯತೋಮಾನಾನಿಸಿದ್ಧ್ಯಂತಿ" ಇತ್ಯಾದಿ ವಾಕ್ಯಗಳಿಂದ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವವು. ಆದ್ದರಿಂದ ಏನು ಸಿದ್ಧವಾಯಿತೆಂದರೆ;—ಬ್ರಹ್ಮವು ಯಾವ ಪ್ರಮಾಣಕ್ಕೂ ವಿಷಯವಲ್ಲ.

(೩) ಮತ್ತು ವೇದವೂ ಕೂಡ, 'ನೇತಿನೇತಿ' ಎಂಬ ವಾಕ್ಯಗಳಿಂದಲೂ, ಅತದ್ವ್ಯಾವೃತ್ತಿಯಿಂದಲೂ ಬೋಧಿಸುವದು. ಹ್ಯಾಗೆಂದರೆ—ಸೀತಾದೇವಿಯು ರಾಮನನ್ನ ಋಷಿಪತ್ನಿಯರಿಗೆ ಬೋಧಿಸಿದಂತೆಯೂ, ವೃದ್ಧನು ಬಾಲಕನಿಗೆ ಸೇನಾನಿಷೇಧದಿಂದ ರಾಜನಂ ತೋರಿಸಿದಂತೆಯೂ ಶೃತಿಯು ತೋರಿಸುವದು.

ಆ ಬ್ರಹ್ಮವು ಯಾವ ಪುರುಷನಿಂದ ಅನುಭವಿಸಲ್ಪಡುವದು ? ಹೇಗೆ ತಿಳಿಯಲಪೇಕ್ಷೆಯುಂಟಾದರೆ;—ಆಚಾರ್ಯರು ಪೇಳುವರು:—

## ॥೮॥ ಬ್ರಹ್ಮವು ಸಮಾಧಿಯಲ್ಲಿರುವವರಿಗೆ ಪೂರ್ಣಭಾನವಾಗುವದು.

(**ಸಮಾಧಿಸ್ಥಿತಾನಾಮಿತಿ**) 'ಸಮಾಧಿಸ್ಥಿತಾನಾಂ' ಅಂದರೆ; ಸಮಾಧಿಯಲ್ಲಿರುವ ಜೀವನ್ಮುಕ್ತರಿಗೆ ಪೂರ್ಣಭಾನವಾಗುವದು. (ಅನುಭವಕ್ಕೆ ಬರುವದು.)

ಅ—ಆ ಸಮಾಧಿಯ ಲಕ್ಷಣವಂ ತೋರಿಸುವರು.

## ॥೯॥ ಸಮಾಧಿ ಲಕ್ಷಣ, ಮತ್ತು ಅದರ ಭೇದ.

೧—ನಿರೋಧಸಂಸ್ಕಾರ ಪ್ರಕಟತೆಯೂ, ಚಿತ್ತೈಕಾಗ್ರ್ಯಪರಿಣಾಮವೂ ಸಮಾಧಿ ಎನ್ನಲ್ಪಡುವದು. ಅದು

(೧) ಸಂಪ್ರಜ್ಞಾತ,

(೨) ಅಸಂಪ್ರಜ್ಞಾತ, ಭೇದದಿಂದ ಎರಡು ಪ್ರಕಾರವಾಗಿರುವದು. ಅದರಲ್ಲಿ—

[೧] **ಸಂಪ್ರಜ್ಞಾತ:**—ಅಹಂಕೃತಿವಿನಃ ಬ್ರಹ್ಮಾಕಾರವಾದ ಮನೋವೃತ್ತಿಯು ಸಂಪ್ರಜ್ಞಾತಸಮಾಧಿ ಎನಿಸಿಕೊಳ್ಳುವದು. ಅದನ್ನು "**ಬ್ರಹ್ಮಾಕಾರ ಮನೋವೃತ್ತಿ**" ಈ ಶೃತಿಯಲ್ಲಿಯೂ ಪೇಳಿರುವದು.

[೨] **ಅಸಂಪ್ರಜ್ಞಾತ:**—ಪ್ರಶಾಂತ ಚಿತ್ತವೃತ್ತಿಯು ಅಸಂಪ್ರಜ್ಞಾತವೆನ್ನಲ್ಪಡುವದು. ಅದನ್ನು "**ಪ್ರಶಾಂತವೃತ್ತಿಕಂ ಚಿತ್ತಂ ಪರಮಾನಂದದೀಪಕಂ**" ಈ ಶೃತಿಯಲ್ಲಿ ಪೇಳಿರುವದು.

೨—ಇನ್ನು ಸವಿಕಲ್ಪ ನಿರ್ವಿಕಲ್ಪ ಭೇದದಿಂದಲೂ ಸಮಾಧಿ ದ್ವಿವಿಧವಾಗಿರುವದು.

(೧) ಸವಿಕಲ್ಪಸಮಾಧಿ—ತ್ರಿಪುಟೀಭಾನಸಹಿತ ಬ್ರಹ್ಮದಲ್ಲಿ ಚಿತ್ತದ ಸ್ಥಿತಿಗೆ ಸವಿಕಲ್ಪಸಮಾಧಿ ಎನ್ನುವದು. ಅದೂ ಕೂಡ,

[೧] ಶಬ್ದಾನುವಿದ್ಧ,

[೨] ಶಬ್ದಾನನುವಿದ್ಧ, ಈ ಭೇದದಿಂದ ಎರಡು ಬಗೆಯಾಗಿರುವದು.

(೨) ನಿರ್ವಿಕಲ್ಪಸಮಾಧಿ—ತ್ರಿಪುಟೀಭಾನವಿಲ್ಲದೆ ಅಖಂಡಾಕಾರವಾಗಿ, ನಿರ್ವಾತದೀಪದಂತೆ ಇರುವ ಚಿತ್ತದ ಸ್ಥಿತಿಗೆ, ನಿರ್ವಿಕಲ್ಪಸಮಾಧಿ ಎನ್ನುವದು. ಅದನ್ನು "ಧ್ಯಾತೃಧ್ಯಾನೇವಿಹಾಯ ನಿವಾತಸ್ಥಿತದೀಪವತ್ ಧ್ಯೇಯೈಕಗೋಚರಂ ಚಿತ್ತಂ ಸಮಾಧಿ- ಯಥಾದೀಪೋನಿವಾತಸ್ಥಃ- ಧ್ಯಾತೃಧ್ಯಾನೇ ಪರಿತ್ಯಜ್ಯಕ್ರಮಾದ್ಧ್ಯೇಯೈಕಗೋಚರಂ ನಿವಾತದೀಪವತ್‌ಚಿತ್ತಂ" ಇತ್ಯಾದಿ ಶೃತಿ ಸ್ಮೃತಿ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವವು. ಆ ನಿರ್ವಿಕಲ್ಪಸಮಾಧಿಯೂ ಕೂಡ,

(೧) ಅದ್ವೈತಭಾವನಾರೂಪ,

(೨) ಅದ್ವೈತಾವಸ್ಥಾನರೂಪ, ಈ ಭೇದದಿಂದ ಎರಡು ವಿಧವಾಗಿರುವದು. ಅವರಲ್ಲಿ—

(೧) ಅದ್ವೈತಭಾವನಾರೂಪಸಮಾಧಿ:—ಅದ್ವೈತಬ್ರಹ್ಮಾಕಾರವಾದ ಅಜ್ಞಾತವೃತ್ತಿಯಿಂದೊಡಗೂಡಿದ್ದು, ಅದ್ವೈತ ಭಾವನಾರೂಪವೆನಿಸುವದು.

(೨) ಅದ್ವೈತಾವಸ್ಥಾನರೂಪಸಮಾಧಿ:—ಮತ್ತು ವೃತ್ತಿ ರಹಿತವಾದದ್ದು ಅದ್ವೈತಾವಸ್ಥಾನ ರೂಪವೆನಿಸುವದು. ಅವರಲ್ಲಿ—

ಮೊದಲನೇ ಸಮಾಧಿ ಸಾಧನರೂಪವಾಗಿಯೂ,

ಎರಡನೇದು ಫಲರೂಪವಾಗಿಯೂ ಇರುವದು.

ಬಳಿಕ ಸೈಂಧವ ಜಲದಂತೆ, ಮತ್ತು ತಪ್ತಲೋಹದ ಮೇಲಣ ಜಲಬಿಂದುವಿನಂತೆ ಪೇಳಲ್ಪಡುವ ಇತ್ಯಾದಿಗಳು ವೃತ್ತಿಗೆ ದೃಷ್ಟಾಂತವೆಂದು ತಿಳಿಯತಕ್ಕದ್ದು. ಅದನ್ನು "ಸಲಿಲಸ್ಯೆಂಧವಂಯದ್ವತ್, ಯಾಶಿಲಾವದವಸ್ಥಿತಿ, ವೃತ್ತಿ ವಿಸ್ಮರಣಂ ಸಮ್ಯಕ್, ವಾಸನಾತೃಣಪಾವಕಃ" ಇತ್ಯಾದಿ ಶೃತಿಗಳಲ್ಲಿಯೂ ಪೇಳಿರುವದು.

ಆ ನಿರ್ವಿಕಲ್ಪಸಮಾಧಿಯಲ್ಲಿ,

(೧) ಲಯ,

(೨) ವಿಕ್ಷೇಪ,

(೩) ಕಷಾಯ,

(೪) ರಸಾಸ್ವಾದ, ಈ ನಾಲ್ಕು ವಿಘ್ನಗಳಿದ್ದರೆ, ೧—ಲಯೇಸಂಬೋಧಯೇಚ್ಚಿತ್ತಂ ೨—ವಿಕ್ಷಿಪ್ತಂಶಮಯೇತ್, ೩—ಸಕಷಾಯಂ ವಿಜಾನೀಯಾತ್, ೪—ನಾಸ್ವಾದಯೇತ್, ಹೀಗೆ ಗೌಡ ಪಾದಾಚಾರ್ಯರಿಂ ಹೇಳಲ್ಪಟ್ಟ ಉಪಾಯುಗಳಿಂದ ತೊಲಗಿಸಬೇಕು.

ಮತ್ತು ಸಮಾಧಿಯ ಸಾಧನವಾದ ಯಮನಿಯಮಾದಿ ಎಂಟು ಯೋಗದ ಅಂಗಗಳಿರುವವು. ಅವುಗಳನ್ನು ಮುಂದೆ ಹೇಳುವೆವು.

ಆದರೆ ಮುಖ್ಯಸಾಧನ ಶ್ರವಣ, ಮನನ ನಿದಿಧ್ಯಾಸನಗಳಾಗಿರುವವು. ಯಾಕೆಂದರೆ—ನಿದಿಧ್ಯಾಸನದ ಪರಿಪಕ್ವಾವಸ್ಥೆಯನ್ನು ಸಮಾಧಿ ಎನ್ನುವರು.

ಈ ಶ್ರವಣಾದಿಗಳು ಪೂರ್ವದಲ್ಲೇ ಪ್ರತಿಪಾದನ ಮಾಡಿರುವದು. ಮತ್ತು ಶ್ರವಣದಮೇಲೆ ಮನನ, ನಿದಿಧ್ಯಾಸನ, ಸಮಾಧಿಯನಿಮಿತ್ತ ಅಧಿಕಯತ್ನವಂ ಮಾಡಬೇಕು. ಅದನ್ನು ಹೇಳುವರು.

ಶ್ಲೋ॥ ಶ್ರುತೇಃ ಶತಗುಣಂ ವಿದ್ಯಾನ್ಮನನಂ ಮನನಾದಪಿ ।
ನಿದಿಧ್ಯಾಸಂ ಲಕ್ಷಗುಣಮನಂತಂ ನಿರ್ವಿಕಲ್ಪಕಂ ॥

ಇದರ ಅರ್ಥ—ಶ್ರವಣಕ್ಕಿಂತ ಶತಗುಣಾಧಿಕ ಮನನವು, ಮನನಕ್ಕಿಂತ ಲಕ್ಷಗುಣಾಧಿಕ ನಿದಿಧ್ಯಾಸನವು, ಅದಕ್ಕಿಂತ ಅನಂತಗುಣ ಉಳ್ಳದ್ದು ನಿರ್ವಿಕಲ್ಪ ಸಮಾಧಿಯೆಂದು ತಿಳಿಯಬೇಕು.

೧—ಆ ಸಮಾಧಿಯಲ್ಲಿರುವ ಜೀವನ್ಮುಕ್ತನಿಗೆ ನಿಶ್ಶೇಷಾವಧಿ ಎನಿಪ ಪರಮಾನಂದಘನ ಬ್ರಹ್ಮವು ನಿರಾವರಣ ಪರಿಪೂರ್ಣರೂಪದಿಂ ಭಾನವಾಗುವದು. ಆ ಸಮಾಧಿಯಲ್ಲಿರುವ ಜೀವನ್ಮುಕ್ತನನ್ನು ಸ್ಥಿತಪ್ರಜ್ಞನೆಂದು ಹೇಳುವರು. ಅವನ ಲಕ್ಷಣವನ್ನು ಗೀತೆಯ ದ್ವಿತೀಯಾಧ್ಯಾಯದಲ್ಲಿ "ಪ್ರಜಹಾತಿ ಯದಾ ಕಾಮಾನ್" ಈ ಶ್ಲೋಕ ಮೊದಲುಗೊಂಡು, "ವಿಹಾಯ ಕಾಮಾನ್ಯಃ ಸರ್ವಾನ್" ಈ ಶ್ಲೋಕದ ಪರ್ಯಂತವೂ, ಭಗವಂತನು ಹೇಳಿರುವನು. ಅದನ್ನು ತಿಳಿದುಕೊಳ್ಳತಕ್ಕದ್ದು. [ಈ ಸ್ಥಿತಪ್ರಜ್ಞನ ಸರ್ವಲಕ್ಷಣವೂ ಗೀತಾಗೂಢಾರ್ಥ ದೀಪಿಕೆಯಲ್ಲಿ ಸ್ಪಷ್ಟವಾಗಿದೆ.]

೨—ಆ ಸ್ಥಿತಪ್ರಜ್ಞನಾದ ಜೀವನ್ಮುಕ್ತನಿಗೆ ಪರಮಾನಂದದ ಲಾಭವಾಗುವದು. ಅದನ್ನು

ಶ್ಲೋ॥ ಸಂಸಿದ್ಧಸ್ಯ ಫಲಂ ತ್ವೇತಜ್ಜೀವನ್ಮುಕ್ತಸ್ಯ ಯೋಗಿನಃ |
ಬಹಿರಂತಃ ಸದಾನಂದ ರಸಾಸ್ವಾದನಮಾತ್ಮನಿ ॥

ಈ ಶ್ಲೋಕದಲ್ಲಿ ಹೇಳಿರುವದು. ಇದರ ಅರ್ಥ—ಸಂಸಿದ್ಧ ಜೀವನ್ಮುಕ್ತನಾದ ಯೋಗಿಗೆ ಜೀವನ್ಮುಕ್ತಿಯ ಫಲವಿಶೇಷವೇನೆಂದರೆ, ಒಳಗೂ ಹೊರಗೂ ಸಹ ಸರ್ವದಾ ಬುದ್ಧಿಯಲ್ಲಿ ಪರಮಾನಂದ ರಸದ ಅನುಭವವೇ ಆಗುತ್ತಿರುವದು.

೩—ಮತ್ತು ಇತರರಾವದು ಅನುಭೂತಿ ಇಲ್ಲದೆ, ಕೇವಲ ಬ್ರಹ್ಮವನ್ನು ವರ್ಣಿಸುತ್ತಾ ಯಾವ ಬ್ರಹ್ಮಾನಂದವನ್ನಭಿನೈಸುವರೋ, ಅದು ವ್ಯರ್ಥವೆನಿಸುವದು. ಎಂತೆಂದರೆ ;—

ಶ್ಲೋ॥ "ಅನುಭೂತಿಂ ವಿನಾಮೂಢೋ ವೃಥಾ ಬ್ರಹ್ಮಣಿ ಮೋದತೇ | ಪ್ರತಿಬಿಂಬಿತ ಶಾಖಾಗ್ರಫಲಾ ಸ್ವಾದನ ಮೋದವತ್ ॥"

ಇದಕ್ಕೆ—ಜಲದಲ್ಲಿ ಪ್ರತಿಫಲಿಸಲ್ಪಟ್ಟ, ಶಾಖಾಗ್ರಫಲದ ಆಸ್ವಾದನದಿಂದ ಸಂತೋಷಪಡುವನಂತೆ, ಅನುಭೂತಿ ವಿನಃ ಮೂಢನು ಬ್ರಹ್ಮದಲ್ಲಿ ಮೋದಪಡುವನೆಂದರ್ಥ.

೪—ಮತ್ತು ದೃಢವಾದ ಬ್ರಹ್ಮ ಸ್ಥಿತಿಯಿಂದಲ್ಲದೆ, ಸಂಸಾರಕ್ಕೂ ಉಚ್ಛೇದವಾಗುವದಿಲ್ಲ ; ಅದೆಂತೆಂದರೆ;—

"ಕುಶಲಾ ಬ್ರಹ್ಮವಾರ್ತಾಯಾಂ ವೃತ್ತಿಹೀನಾಃ ಸುರಾಗಿಣಃ |
ತೇಪ್ಯಜ್ಞಾನತಯಾ ನೂನಂ ಪುನರಾಯಾಂತಿ ಯಾಂತಿಚ ॥೧॥
ಯೆಹಿಂವೃತ್ತಿಂ ಜಹತ್ಯೇನಾಂ ಬ್ರಹ್ಮಾಖ್ಯಾಂ ಪಾವನೀಂಪರಾಂ|
ತೇತುವೃಥೈವ ಜೀವಂತಿ ಪಶುಭಿಶ್ಚ ಸಮಾನರಾಃ ॥೨॥"

ಇದರ ಅರ್ಥ—ಬ್ರಹ್ಮವಾರ್ತೆಯಲ್ಲಿ ಯಾವನು ಕುಶಲನಾಗಿಯೂ ಮತ್ತು ಬ್ರಹ್ಮಾಕಾರ ವೃತ್ತಿಯಿಂ ಹೀನನಾಗಿಯೂ, ಇನ್ನು ವಿಷಯಗಳಲ್ಲಿ ರಾಗಿಯಾಗಿಯೂ, ಇರುವನೋ, ಅವನೂ ಕೂಡ ಅಜ್ಞಾನದ ದೆಶೆಯಿಂದ ನಿಶ್ಚಯವಾಗಿ ಸಂಸಾರದಲ್ಲಿ ಜನ್ಮಿಸುವನು. ಪುನಃ ಮರಣವಾಗುವನು. ॥೧॥

ಮತ್ತು ಯಾವನು ಈ ಬ್ರಹ್ಮಾಖ್ಯವಾದ ಪರಮಪಾವನ ವೃತ್ತಿಯನ್ನು ಉಪೇಕ್ಷಿಸುವನೋ, ಆ ಪುರುಷನು ಪಶುವಿಗೆ ಸಮಾನವಾಗಿ, ವೃಥಾ ಜೀವಿಸುವನು. ॥೨॥

೫೭—ಇನ್ನು ಯಾವ ಮಹಾತ್ಮನು ಪ್ರತ್ಯಕ್ ಪ್ರವಣನೋ ಅವನು ಧನ್ಯನು. ಎಂತೆಂದರೆ;—

**ಶ್ಲೋ|| ಯೇಹಿವೃತ್ತಿಂ ವಿಜಾನಂತಿ ಜ್ಞಾತ್ವಾಪಿ ವರ್ಧಯಂತಿಯೇ।**
**ತೇವೈ ಸತ್ಪುರುಷಾ ಧನ್ಯಾ ವಂದ್ಯಾಸ್ತೇ ಭುವನತ್ರಯೇ ||**

**ಅರ್ಥ**—ಯಾವನು ಬ್ರಹ್ಮಾಕಾರವೃತ್ತಿಯ ಫಲವಂ ತಿಳಿದಿರುವನೋ, ಮತ್ತು ಯಾವನು ತಿಳಿದು ವೃತ್ತಿಯಂ ದೃಢಪಡಿಸಿಕೊಂಡಿರುವನೋ, ಆ ಸತ್ಪುರುಷನು ಧನ್ಯನು. ಮತ್ತು ಮೂರು ಲೋಕಗಳಲ್ಲಿಯೂ ಪೂಜ್ಯನು.

ಅಭಿಪ್ರಾಯವೇನೆಂದರೆ;—ಪರಾಕ್ ಪ್ರವಣತೆ ದುಃಖದ ಸೀಮೆಯಾಗಿ, ಪ್ರತ್ಯಕ್ ಪ್ರವಣತೆ ಸುಖದ ಸೀಮೆಯಾಗಿರುವದು. ಅದನ್ನು ಪೇಳುವರು.

**ಶ್ಲೋ|| ಸಮಸ್ತದುಃಖಸೀಮೇಯಂ ಯನ್ಮನೋದೃಶ್ಯಗೋಚರಂ।**
**ಸಮಸ್ತಸುಖಸೀಮೇಯಂ ಯನ್ಮನೋ ಬ್ರಹ್ಮಗೋಚರಂ ||**

ಎಂಬುದರಿಂದ ಸಮಾಧಿಯಲ್ಲಿರುವ ಪುರುಷನಿಗೆ ಬ್ರಹ್ಮವು ಘನವಾಗಿ ಭಾನವಾಗುವದು. ಎಂದು ಸಿದ್ಧವಾಯಿತು.

ಬಳಿಕ ಯಾವನಾದರು ಆಗ ಉತ್ಥಾನಕಾಲದಲ್ಲಿ ಜಾಗ್ರದಾದಿ ಪ್ರಪಂಚವೇ ಅವನಿಗೆ ಭಾಸವಾಗುತ್ತಾ ಇದ್ದೀತು? ಅಂದರೆ;—ಅದಕ್ಕೆ ಪೇಳುವರು.

**||೧೦|| ಅವಸ್ಥಾತ್ರಯಾತೀತ ಸ್ವರೂಪಃ**—(ಅವಸ್ಥಾತ್ರಯಾತೀತಮಿತಿ) ಕಾಲವಿಶೇಷದ ಪೆಸರು ಅವಸ್ಥೆ ಎನಿಸುವದು. ಆ ಅವಸ್ಥೆಯು ಜಾಗ್ರದಾದಿ ಭೇದದಿಂದ ಮೂರು ವಿಧವಾಗಿರುವದು.

(೧) ಸ್ವಪ್ನಸುಷುಪ್ತಿಯಿಂ ಭಿನ್ನವಾಗಿ, ಇಂದ್ರಿಯ ಜನ್ಯಜ್ಞಾನಕ್ಕೂ ಆ ಜ್ಞಾನದ ಸಂಸ್ಕಾರಕ್ಕೂ ಆಧಾರವಾದ ಕಾಲವು ಜಾಗ್ರದವಸ್ಥೆ ಎನಿಸಿಕೊಳ್ಳುವದು.

(೨) ಇಂದ್ರಿಯ ಜನ್ಯವಲ್ಲದ ವಿಷಯವಂ ಪಿಡಿಯುವ ಅಂತಃಕರಣ ವೃತ್ತಿಯ ಕಾಲವು ಸ್ವಪ್ನಾವಸ್ಥೆ ಎನಿಸಿಕೊಳ್ಳುವದು.

(೩) ಸುಖವನ್ನೂ, ಅಜ್ಞಾನವನ್ನೂ ವಿಷಯಿಸಿಕೊಳಿಸುವ ಅವಿದ್ಯಾವೃತ್ತಿಯ ಕಾಲವು ಸುಷುಪ್ತಿ ಅವಸ್ಥೆ ಎನಿಸಿಕೊಳ್ಳುವದು.

ಜಾಗ್ರದ್ವ್ಯವಹಾರವೆಲ್ಲವು ತ್ರಿಪುಟಿಯಿಂದಾಗುವದು. ಮೂರು ಪುಟಗಳಿಗೆ ತ್ರಿಪುಟಿ ಎಂದು ಪೆಸರು. ಪುಟವೆಂದರೆ ಅಂಶುವಕ್ಕೆ ಪೆಸರು ಅಥ್ವಾ ಶ್ಚೆ— ಅವಯವಗಳು

ಅಧಿಭೂತ–ಅಧಿದೈವ ಇವು ಮೂರು ಕೂಡಿ ತ್ರಿಪುಟಿ ಎನಿಸುವದು. ಅದೆಂತೆಂದರೆ:—

ಶ್ಲೋ॥ ಶ್ರೋತ್ರಮಧ್ಯಾತ್ಮಮಿತ್ಯಾಹುರ್ಯಥಾರ್ಥ ಶ್ರುತಿದರ್ಶನಃ ॥ ಶಬ್ದಸ್ತತ್ರಾಧಿಭೂತಂತು ದಿಶಸ್ತತ್ರಾಧಿ ದೈವತಂ ॥ ಇತ್ಯಾದಿಯಾಗಿ ತಿಳಿಯತಕ್ಕದ್ದು.

(೧) ಶ್ರೋತ್ರ ಅಧ್ಯಾತ್ಮ—ಶಬ್ದ ಅಧಿಭೂತ—ದಿಶಾಧಿಪತಿದೇವತಾ ಅಧಿದೈವವೆಂದು ಹ್ಯಾಗೆ ಪೇಳಿರುವದೋ,—ಹಾಗೆಯೇ,

| | | |
|---|---|---|
| (೨) ತ್ವಗಧ್ಯಾತ್ಮ— | ಸ್ಪರ್ಶ ಅಧಿಭೂತ— | ವಾಯು ಅಧಿದೈವ— |
| (೩) ಚಕ್ಷು | ರೂಪ | ಸೂರ್ಯ |
| (೪) ಜಿಹ್ವಾ | ರಸ | ವರುಣ |
| (೫) ಘ್ರಾಣ | ಗಂಧ | ಅಶ್ವಿನೀಕುಮಾರ |
| (೬) ವಾಕ್ | ವಕ್ತಿ | ಅಗ್ನಿ |
| (೭) ಪಾಣಿ | ಆದಾನ | ಇಂದ್ರ |
| (೮) ಪಾದ | ಗತಿ | ವಿಷ್ಣು |
| (೯) ಉಪಸ್ಥ | ರತಿ | ಪ್ರಜಾಪತಿ |
| (೧೦) ಗುದ | ಮಲತ್ಯಾಗ | ಯಮ |
| (೧೧) ಮನ | ಮಂತವ್ಯ | ಚಂದ್ರ |
| (೧೨) ಬುದ್ಧಿ | ಬೋದ್ಧವ್ಯ | ವಿಧಿ |
| (೧೩) ಚಿತ್ತ | ಚೇತಯಿತವ್ಯ | ವಾಸುದೇವ |
| (೧೪) ಅಹಂಕಾರ | ಅಹಂಕರ್ತವ್ಯ | ರುದ್ರ |

ಇವುಗಳನ್ನು ಅಧ್ಯಾತ್ಮ, ಅಧಿಭೂತ, ಅಧಿದೈವರೂಪಗಳೆಂದು ತಿಳಿಯತಕ್ಕದ್ದು.

ಈ ಚತುರ್ದಶ [೧೪] ತ್ರಿಪುಟಿಗಳು ಹ್ಯಾಗೆ ಜಾಗ್ರತ್ತಿನಲ್ಲಿರುವವೋ ಹಾಗೆ ಅಂತರಮನೋಮಯ ತ್ರಿಪುಟಿಗಳನ್ನೂ ಸ್ವಪ್ನದಲ್ಲಿ ತಿಳಿಯಬೇಕು.

ಮತ್ತು ಸುಷುಪ್ತಿಯಲ್ಲಿ ಎಲ್ಲಾ ತ್ರಿಪುಟಿಗಳೂ ಲಯವಾಗುವದು.

ಈ ಮೂರು ಅವಸ್ಥೆಗಳು ಬುದ್ಧಿವೃತ್ತಿಯದಾಗಿರುವವು. ಆ ಮೂರರ ಅನುಭವವು ಯಾವದರಿಂದಾಗುವದೋ, ಅದೇ ಸರ್ವಾಧಿಷ್ಠಾನ ಚೇತನವೆನಿಪ ಸಾಕ್ಷೀ. ಅವುಗಳಿಗಿಂತ ಅತೀತವಾಗಿರುವದು. ಎಂತೆಂದರೆ;—

ಶ್ಲೋ॥ ಬುದ್ಧೆರ್ಜಾಗರಣಂ ಸ್ವಪ್ನಃ ಸುಷುಪ್ತಿರಿತಿ ವೃತ್ತಯಃ।
ತಾಯೋನ್ಯೈವಾನುಭೂಯಂತೇ ಸೋಽಧ್ಯಕ್ಷಃ ಪುರುಷಃ ಪರಃ॥

ಬಳಿಕ ಹ್ಯಾಗೆ ಜಾಗ್ರದಾದಿ ಅವಸ್ಥಾತ್ರಯಗಳಿಂದ ಸಾಕ್ಷಿಯಾದ ಆತ್ಮನು ಭಿನ್ನನಾಗಿರುವನೋ, ಹಾಗೆ ತದ್ಗತವಾದ ಭೋಗ್ಯ ಭೋಕ್ತಾದಿಗಳಿಂದಲೂ, ಭಿನ್ನನಾಗಿರುವನು. ಅಲ್ಲಿ—

ಶೃತಿ॥ ತ್ರಿಷುಧಾಮಸು ಯದ್ಭೋಜ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್ । ತೇಭ್ಯೋ ವಿಲಕ್ಷಣಃ ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ ॥

ಇದರ ಅರ್ಥ ;—ಜಾಗ್ರದಾದಿ ಮೂರು ಅವಸ್ಥೆಗಳಲ್ಲಿ ಅಥವಾ ಚಕ್ಷು, ಕಂಠ, ಹೃದಯವೆಂಬ ಮೂರು ಧಾಮಗಳಲ್ಲಿ ಸ್ಥೂಲ-ಪ್ರವಿವ್ಯಕ್ತ-ಮತ್ತು ಆನಂದವೆಂಬ ಯಾವ ಭೋಗ್ಯವುಂಟೋ, ಇನ್ನು ವಿಶ್ವತೈಜಸ ಪ್ರಾಜ್ಞರೆಂಬ ಭೋಕ್ತರುಂಟೋ, ಬಳಿಕ ಸುಖದುಃಖಗಳ ಅನುಭವರೂಪವಾದ ಯಾವ ಭೋಗವುಂಟೋ, ಅವುಗಳಿಂ ವಿಲಕ್ಷಣವಾದ ಸಾಕ್ಷಿಯು ಚಿನ್ಮಾತ್ರ ಸದಾಶಿವರೂಪವಾಗಿರುವದ್ದರಿಂದ ಅದೇ ನಾನು.

ಈ ರೀತಿಯಿಂದ ಅವಸ್ಥಾತ್ರಯಾತೀತವಾದ ಚೇತನವೆನಿಪ ಸಾಕ್ಷಿಯ ಸ್ಮರಣೆಯು ಉತ್ಥಾನಕಾಲದಲ್ಲಿ ವಿದ್ವಾಂಸನಿಗೆ ಆಗುವದು. ಇಲ್ಲಿ ಸಮೀಪ ಉದಾಸೀನ ಚೇತನ, ತದನುಕೂಲವೃತ್ತಿಯುಳ್ಳದ್ದಾಗಿರಲು ಅದು ಸಾಕ್ಷೀ ಎನಿಸಿಕೊಳ್ಳುವದು.

ಶಂಕಾ—ಸಾಕ್ಷೀ ಆತ್ಮನು ಮೂರು ಅವಸ್ಥೆಗಳಿಗೆ ಅತೀತನಾಗಿರಲಿ; ಆದರೂ, ಪ್ರತಿ ಶರೀರದಲ್ಲಿ ಬೇರೆಬೇರೆಯಾಗಿ ತೋರುವದರಿಂದ ನಾನಾವಾಗಿ ಬ್ರಹ್ಮದಿಂ ಭಿನ್ನನಾದಾನು ?

ಸಮಾಧಾನ—"ಜಾಗ್ರತ್ಸ್ವಪ್ನ ಸುಷುಪ್ತ್ಯಾದಿ ಪ್ರಪಂಚಂ ಯತ್ಪ್ರಕಾಶತೇ ತದ್ಬ್ರಹ್ಮ" ಈ ಶೃತಿಯಲ್ಲಿ ಪೇಳಿದ ಜಾಗ್ರದಾದಿ ಪ್ರಪಂಚದ ಪ್ರಕಾಶಕವಾದ, ಚೇತನಬ್ರಹ್ಮರೂಪತ್ವವೂ ಮತ್ತು "ಏಕೋ ವಶೀಸರ್ವಭೂತಾಂತರಾತ್ಮಾ" ಈ ಶೃತಿಯಲ್ಲಿ ಪೇಳಲ್ಪಟ್ಟ, ಸರ್ವಭೂತಾಂತರನಾದ ಏಕಾತ್ಮನೂ ಸಹ ನಾನಾತ್ವಭೇದರಹಿತನೆಂಬುದನ್ನು ಈಗ ಪ್ರತಿಪಾದಿಸುವರು.

॥೧೧॥ ಅದ್ವೈತಸ್ವರೂಪ—(ಅದ್ವೈತಮೇಕಮಿತಿ) ಅರ್ಥವೇನೆಂದರೆ—ಆ ಪ್ರತ್ಯಗಭಿನ್ನ ಚೇತನವು ಏಕಾದ್ವೈತರೂಪವಾಗಿರುವದು. ಅದನ್ನು "ಏಕಮೇವಾದ್ವಿತೀಯಂ ಬ್ರಹ್ಮ" ಈ ಶ್ರುತಿಯಲ್ಲಿಯೂ ಪೇಳಿರುವದು. ಇಲ್ಲಿ ಏಕಂ-ಏವ-ಅದ್ವಿತೀಯಂ ಈ ಮೂರು ಪದಗಳಿಂದ ಶ್ರುತಿಯು ಸಜಾತೀಯಾದಿ ತ್ರಿವಿಧ ಭೇದಗಳ ಪರಿಹಾರವಂ ಮಾಡಿರುವದು. ಯಾಕೆಂದರೆ—ಆ ಮೂರು ಭೇದವು ಜಡವಾದ ಅವಯುವವುಳ್ಳ ಪದಾರ್ಥಗಳಲ್ಲಿರುವದು. ಚೇತನದಲ್ಲಿ ಇಲ್ಲ. ಎಂತೆಂದರೆ;—

(೧) ವೃಕ್ಷಕ್ಕೆ ವೃಕ್ಷಾಂತರದಿಂದ ಭೇದವಾವುದೋ, ಅದು ಸಜಾತೀಯ ಭೇದವು.

(೨) ವೃಕ್ಷಕ್ಕೆ ಪಾಷಾಣದಿಂದ ಭೇದವಾವುದೋ, ಅದು ವಿಜಾತೀಯ ಭೇದವು.

(೩) ಸ್ವಶಾಖಾ ಪತ್ರಾದಿಗಳಿಂದ ಭೇದವಾವುದೋ, ಅದು ಸ್ವಗತಭೇದವು. ಹೀಗೆ ಜಾತ್ಯಾಹ್ಮಣಾದಿಗಳಲ್ಲಿಯೂ ತಿಳಿಯಬೇಕು. ಈ ಮೂರು ಭೇದವು ಚೇತನವಾದ ಬ್ರಹ್ಮದಲ್ಲಿ ಸಂಭವಿಸುವದಿಲ್ಲ; ಯಾಕೆಂದರೆ—

೧—ಎರಡನೇ ಸತ್ಯವಸ್ತುವಿಲ್ಲದ್ದರಿಂದ ಸಜಾತೀಯಭೇದವು ಅಸಂಭವವೆನಿಸುವದು. ಅದೆಂತೆಂದರೆ—"ಸದಂತರಂ ಸಜಾತೀಯಂ ವೈಲಕ್ಷಣ್ಯವಿವರ್ಜನಾತ್" ಈ ವಾಕ್ಯದಿಂದ ಪೇಳಿರುವದು.

೨—ಪ್ರತಿಯೋಗಿಯು ಇಲ್ಲದ್ದರಿಂದ ವಿಜಾತೀಯಭೇದವೂ ಸಂಭವಿಸುವದಿಲ್ಲ; ಎಂತೆಂದರೆ—"ನಾಸ್ತ್ಯತಃ ಪ್ರತಿಯೋಗಿತ್ವಂ ವಿಜಾತೀಯಾದ್ಭಿದಾಕುತಃ" ಇದರಲ್ಲಿ ಪೇಳಿರುವದು.

೩—ಬ್ರಹ್ಮವು ನಿರವಯುವವಾಗಿರುವದ್ದರಿಂದ ಅದರಲ್ಲಿ ಸ್ವಗತಭೇದವೂ ಸಂಭವಿಸುವದಿಲ್ಲ. ಅದನ್ನು "ಸತೋನಾವಯವಾಃ" ಈ ವಾಕ್ಯದಲ್ಲಿ ಪೇಳಿರುವದು. ಈ ಕಾರಣಗಳಿಂದ ಬ್ರಹ್ಮವು ಸಜಾತೀಯಾದಿ ಮೂರು ಭೇದಗಳಿಂ ರಹಿತವಾಗಿದೆ. ಅದು ಪೂರ್ವೋಕ್ತ ಶ್ರುತಿಯಿಂದಲೂ, ಮತ್ತು "ಭೇದತ್ರಯವಿವರ್ಜಿತಂ" ಈ ವಾಕ್ಯದಿಂದಲೂ, ತ್ರಿವಿಧಭೇದಗಳ ಪರಿಹಾರಗೈದಿರುವರು. ಮತ್ತು

## ॥೧೨॥ ಪಂಚಭೇದಗಳು, ಅವುಗಳ ಪರಿಹಾರಗಳು.

೧—ಜೀವ, ಈಶ್ವರರ ಭೇದ,

೨—ಜೀವರ ಪರಸ್ಪರಭೇದ,

೩—ಜೀವ ಜಡಭೇದ,

೪—ಈಶ್ವರ ಜಡಭೇದ,

೫—ಜಡಜಡಭೇದ. ಈ ಪಂಚಭೇದವು ವೇದಾಂತ ವಿಮುಖರಾದ ವಾದಿಗಳು ಅಂಗೀಕರಿಸಿರುವರು. ಮತ್ತು ಆ ಭೇದಗಳ ಸಿದ್ಧಿಯ ನಿಮಿತ್ತ ಶೃತ್ಯಾಭಾಸಯುಕ್ತಿಗಳನ್ನೂ ಸಹ ನಾನಾ ಪ್ರಕಾರವಾಗಿ ಪೇಳಿರುವರು. ಇಂಥಾ ವಾದಿಗಳೆಲ್ಲರೂ ಭ್ರಾಂತರು. ಇವರು ಇತರ ಜನಗಳಿಗೆ ಭೇದವನ್ನು ದೃಢಪಡಿಸಿ, ವ್ಯಾಕುಲವನ್ನುಂಟುಮಾಡಿದರು. ಅದೆಂತೆಂದರೆ ;—

"ಈಶಾನೀಶಾದಿ ಭೇದೇನ ವ್ಯಾಕುಲಂ ಸಕಲಂ ಜಗತ್"

ಈ ವಾಕ್ಯದಲ್ಲಿ ಪೇಳಿರುವದು. ಆ ಈಶಾನೀಶಾದಿ ಸರ್ವಭೇದವು ಅಸತ್ತಾಗಿರುವದು.

[೧] ಪ್ರಥಮ ಜೀವ ಈಶ್ವರರಿಗೆ ಭೇದವು ಸಂಭವಿಸುವದಿಲ್ಲ; ಯಾಕೆಂದರೆ—ತತ್ವಮಸ್ಯಾದಿ ಮಹಾ ವಾಕ್ಯಗಳಲ್ಲಿ ಜೀವಾತ್ಮ ಪರಮಾತ್ಮರಿಗೆ ಏಕತ್ವವಂ ಪೇಳಿರುವದರಿಂದ.

ಶಂಕಾ, ಸಮಾಧಾನ—ಯಾವನಾದರು ಒಬ್ಬನು ಜೀವ ಈಶ್ವರರಿಗೆ ಏಕತ್ವವನ್ನಂಗೀಕರಿಸಿದರೆ ಅಧಿಕಾರಿಯೂ, ಫಲದಾತನೂ ಸಹ ಅಭಾವವಾಗುವದ್ದರಿಂದ ಕರ್ಮೋಪಾಸನಗಳು ವಿಫಲವಾದೀತು ? ಅಂದರೆ;—ಅದನ್ನು ಕೇಳು !

ಬುದ್ಧಿ ವಿಶಿಷ್ಟಚೇತನದಲ್ಲಿ ಕರ್ಮೋಪಾಸನ ಕರ್ತೃತ್ವವೂ, ಮಾಯಾವಿಶಿಷ್ಟ ಚೇತನದಲ್ಲಿ ಫಲದಾತೃತ್ವವೂ ಇರುವದಲ್ಲದೆ ಶುದ್ಧ ಚೇತನದಲ್ಲಿ ಇಲ್ಲ; ಅವುಗಳಿಗೆ ಸದಾ ಅಭೇದವಿರುವದು. ಇದರಿಂದ ಎರಡಕ್ಕೂ ವ್ಯವಸ್ಥೆಯುಂಟಾಗಿರುವದು. ಅದನ್ನು ಚತುರ್ವಿಧಾಕಾಶದ ದೃಷ್ಟಾಂತದಿಂದ ತಿಳಿಯಬೇಕು. ಅದೆಂತೆಂದರೆ;—

ಶ್ಲೋ॥ ಕೂಟಸ್ಥೋ ಬ್ರಹ್ಮಜೀವೇಶಾವಿತ್ಯೇವಂ ಚಿಚ್ಚತುರ್ವಿಧಾ ।
ಘಟಾಕಾಶ ಮಹಾಕಾಶೌ ಜಲಾಕಾಶಾಭ್ರಖೇ ಯಥಾ ॥

ಇದರ ಅರ್ಥವೇನಂದರೆ—ಹ್ಯಾಗೆ,

(೧) ಘಟಾಕಾಶ,

(೨) ಮಹಾಕಾಶ,

(೩) ಜಲಾಕಾಶ ಮತ್ತು ಅಭ್ರಖ, ಅಂದರೆ,

(೪) ಮೇಘಾಕಾಶ, ಈ ನಾಲ್ಕು ಆಕಾಶದ ಭೇದವುಂಟೋ ಹಾಗೆ,

[೧] ಕೂಟಸ್ಥ,

[೨] ಬ್ರಹ್ಮ,

[೩] ಜೀವ,

[೪] ಈಶ್ವರ, ಈ ನಾಲ್ಕು ಭೇದವು ಚೇತನಕ್ಕೆ ಕಲ್ಪಿಸಲ್ಪಟ್ಟಿರುವದು. ಅವುಗಳಲ್ಲಿ ಸಪ್ರತಿಬಿಂಬ ಜಲವನ್ನೂ ಮತ್ತು ಮೇಘದೃಷ್ಟಿಯನ್ನೂ ತ್ಯಾಗಮಾಡಿದರೆ ಘಟಾಕಾಶ, ಮಹಾಕಾಶ ಸದಾ ಅಭೇದವಾಗಿ ತೋರುವದು. ಇದರಂತೆ ಆಭಾಸಬುದ್ಧಿಯನ್ನೂ ಮಾಯೆಯನ್ನೂ ಸಹ ತ್ಯಾಗಮಾಡಿದರೆ—ಕೂಟಸ್ಥಕ್ಕೂ ಬ್ರಹ್ಮಕ್ಕೂ ಸದಾ ಅಭೇದವಿಹುವದು. ಎಂಕೆಂದರೆ—

ಶ್ಲೋ|| ಯಥಾ ನಭಸಿ ನೈವಾಸ್ತಿ ಭೇದಃ ಕೋಪ್ಯೇಕರೂಪಿಣಿ |
ಚೈತನ್ಯೇ ತದ್ವದೇವಾತ್ರ ಭೇದಃ ಕೋಪಿನವಿದ್ಯತೇ ||

ಇದರ ಅರ್ಥ ಸ್ಪಷ್ಟವಾಗಿದೆ. ಹಾಗೆ "ಪ್ರಜ್ಞಾನ ಮಾನಂದಂ ಬ್ರಹ್ಮ-ಅಯಮಾತ್ಮಾ ಬ್ರಹ್ಮ-ಕ್ಷೇತ್ರಜ್ಞಂ ಚಾಪಿಮಾಂ ವಿದ್ಧಿ" ಇತ್ಯಾದಿ ಶೃತಿ ಸ್ಮೃತಿಗಳಲ್ಲಿಯೂ ಮತ್ತು "ಜೀವೋ ಬ್ರಹ್ಮೈವನಾಪರಃ—ಮುಂಚ ಮುಂಚೇತಿ ಜೀವತ್ವಂ ಬ್ರಹ್ಮಾಹಮಿತಿನಿಶ್ಚಯ" ಇತಿ.

ದುರ್ವಾಸಾ ವಾಮದೇವಶ್ಚ ಭರತೋ ನಾರದಸ್ತಥಾ |
ತೇ ವದಂತೀಹಿ ಬ್ರಹ್ಮತ್ವಂ ಜೀವತ್ವಂ ಕಿಂ ನಮುಂಚಸಿ ||
ದತ್ತವ್ಯಾಸಾದಯಶ್ಚೈವ ವಸಿಷ್ಠ ಕಪಿಲಾದಯಃ |
ತೇ ವದಂತೀಹಿಬ್ರಹ್ಮತ್ವಂ ಜೀವತ್ವಂ ಕಿಂ ನಮುಂಚಸಿ ||
ರಾಮಕೃಷ್ಣಾದಯಶ್ಚೇತಿ ಶುಕಾದ್ಯಾಶ್ಚ ಮುನೀಶ್ವರಾಃ |
ನೀವು ತೇ ವದಂತೀಹಿಬ್ರಹ್ಮತ್ವಂ ಜೀವತ್ವಂ ಕಿಂ ನಮುಂಚಸಿ || ಜೀವ ಭಾವ

ಇತ್ಯಾದಿ ಸಚ್ಛಾಸ್ತ್ರಗಳೂ ಮತ್ತು ಋಷಿಮುನೀಶ್ವರರೂ ಗಜಘಂಟಾನ್ಯಾಯದಿಂದ ಜೀವಬ್ರಹ್ಮರಿಗೆ ಏಕತ್ವವಂ ಪೇಳಿರುವರು.

ಮತ್ತು ಅನ್ಯಥಾದರ್ಶಿಗಳಿಗೆ "ದ್ವಿತೀಯಾದ್ವೈ ಭಯಂ ಭವತಿ—ಪಶುರೇವ ಸದೇವಾನಾಂ + ಏತಸ್ಮಿನ್ನುದರ ಮಂತರಂ ಕುರುತೇ—ಅಥ ತಸ್ಯಭಯಂ ಭವತಿ—ಈಷದಪ್ಯಂತರಂ ಕೃತ್ವಾ ರೌರವಂ ನರಕಂ ವ್ರಜೇತ್" ಇತ್ಯಾದಿ ಶೃತಿ ಸ್ಮೃತಿಗಳು ಮಹತ್ತಾದ ಅನರ್ಥವಂ ಪೇಳಿರುವವು. ಆದ್ದರಿಂದ ಜೀವ ಬ್ರಹ್ಮರಭೇದ ಅಸಂಗತವೆನಿಸುವದು.

[೨]—ಜೀವರಿಗೆ ಪರಸ್ಪರ ಭೇದವೂ ಸಂಭವಿಸುವದಿಲ್ಲ; ಯಾಕೆಂದರೆ—ಜೀವನಲ್ಲಿ ಕರ್ತೃತ್ವ, ಭೋಕ್ತೃತ್ವ, ನಾನು ನೀನು, ಇತ್ಯಾದಿ ಶಬ್ದಪ್ರಯೋಗದಿಂದ ಯಾವ ಭೇದವು ತೋರುವದೋ, ಅದು ಸಾಭಾಸ ಅಂತಃಕರಣದಿಂದಲೂ, ದೇಹಾದಿಗಳಿಂದಲೂ ಮಾಡಲ್ಪಟ್ಟ ಭೇದವಲ್ಲದೆ ಚೈತನ್ಯಾತ್ಮನಲ್ಲಿ ಇಲ್ಲ.

ಇನ್ನು ತಾರ್ಕಿಕರು ಯಾವ ಆತ್ಮನನ್ನು ಕರ್ತನೆಂದು, ಭೋಕ್ತನೆಂದು, ನಾನಾ ಎಂದು, ವಿಭುವೆಂದು, ಜಡನೆಂದು ಮತ್ತು ಜ್ಞಾನಗುಣವುಳ್ಳವನೆಂದು ಗ್ರಹಿಸಿರುವರೋ,

ಬಳಿಕ ಸಾಂಖ್ಯಮತದವರು ಅಸಂಗರೂಪನೆಂದಂಗೀಕರಿಸಿ, ನಾನಾ ಆತ್ಮರೆಂದು ಪೇಳಿರುವರೋ,

ಮತ್ತು ಯೋಗಮತದವರು ಈಶ್ವರನಿಂ ಭಿನ್ನ ಕರ್ಮಕ್ಲೇಶಾದಿ ಉಳ್ಳ ನಾನಾ ಆತ್ಮರೆಂದು ಗ್ರಹಿಸಿರುವರೋ,

ಇನ್ನು ಕರ್ಮಿಗಳು ಕರ್ತಾ, ಭೋಕ್ತಾ, ನಾನಾ ಆತ್ಮರೆಂದು ಗ್ರಹಿಸಿರುವರೋ, ಆ ಸರ್ವವಾದಿಗಳು ಭ್ರಾಂತರೆನಿಸುವರು. ಮತ್ತು ವೇದಕ್ಕೆ ವಿರುದ್ಧವಾಗಿ ಜಲ್ಪಿಸುವರು.

ಮಿಥ್ಯಾ ಉಪಾಧಿಗಳಿಂದ ಆತ್ಮನು ನಾನಾವಾಗಿರುವಂತೆ ತೋರುತ್ತಿರುವನು. ವಸ್ತುತಃ ಸೂಚೀರಂಧ್ರ ಕಲಶದ್ರೋಣ ಮಠಾದಿಗಳಲ್ಲಿನ ಆಕಾಶದಂತೆ ಬ್ರಹ್ಮಾದಿ ಸ್ತಂಭಪರ್ಯಂತವಾದ ದೇವ, ದನುಜ, ಮನುಜ, ತಿರ್ಯಗಾದಿಗಳಲ್ಲಿ ಚೇತನ ಒಂದೇ ಅನುಸ್ಯೂತವಾಗಿರುವದು. ಈ ವಿಷಯ

"ಆಕಾಶವತ್ಸರ್ವಗತಶ್ಚ ನಿತ್ಯಃ । ಏಕೋದೇವಃ ಸರ್ವಭೂತೇಷು ಗೂಢಃ ॥ ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್—ಸಮಸ್ಸರ್ವೇಷು ಭೂತೇಷು"

ಇತ್ಯಾದಿ ಶೃತಿಸ್ಮೃತಿಗಳಲ್ಲಿ ಒಬ್ಬ ಆತ್ಮನನ್ನೇ ಪೇಳಿರುವದು. ಆದ್ದರಿಂದವನು ಸರ್ವಸಂಸಾರ ಧರ್ಮದಿಂ ರಹಿತನಾಗಿರುವನು.

ಮತ್ತಾರ್ಯರು ಅನ್ಯಥಾ ದರ್ಶಿಗಳೋ, ಅವರಿಗೆ "ಮೃತ್ಯೋಸ್ಸಮೃತ್ಯುಮಾಪ್ನೋತಿ-ಕಿಂ ತೇನನಕೃತಂ ಪಾಪಂ-ನಪಶ್ಯತಿದುರ್ಮತಿಃ-ಮಾಯಯಾ ವಂಚಿತೋನರಃ" ಇತ್ಯಾದಿ ಶೃತಿ ಸ್ಮೃತಿ ಶಾಸ್ತ್ರಗಳು ಅನರ್ಥ ಫಲವಂ ಪೇಳಿರುವವು. ಆದ್ದರಿಂದ ಜೀವರಿಗೆ ಪರಸ್ಪರ ಭೇದ ಅಸಂಗತವು.

[೩] ಜೀವಜಡಭೇದವೂ ಅಸಂಗತವೆ. ಯಾಕೆಂದರೆ—ಜೀವ ಮತ್ತು ಜಡಪದಾರ್ಥಗಳಲ್ಲಿ ಶೇಷೀಶೇಷಾ, + ಅಥವಾ ಕರ್ತಾರ್ಕಾರ್ಯ, + ಅಥವಾ ಜ್ಞಾತಾಜ್ಞೇಯ,—ಅಥವಾ ಚೇತನ ಜಡತ್ವಾದಿ ಯಾವ ಭೇದವು ತೋರುತ್ತಿರುವದೋ, ಅದು ಸ್ವಪ್ನದೃಕ್, ಮತ್ತು ಸ್ವಾಪ್ನಿಕಪದಾರ್ಥಗಳಂತೆ ಅವಿದ್ಯಾರೂಪವಾದ ನಿದ್ರೆಯಿಂದ ತೋರುವದಲ್ಲದೆ ಪರಮಾರ್ಥದಿಂದಲ್ಲ. ಅದನ್ನು "ತಸ್ಯತ್ರಯ ಆವಸಥಾಸ್ತ್ರಯಃಸ್ವಪ್ನಾಃ—ಆತ್ಮಾಜ್ಞಾನಾದಿದಂ ಸರ್ವಂ" ಇತ್ಯಾದಿ ಶೃತಿಶಾಸ್ತ್ರಗಳಲ್ಲಿ ಸ್ಪಷ್ಟವಾಗಿ ಪೇಳಿರುವವು. ಆದ್ದರಿಂದ ಜೀವಜಡಭೇದವಸಂಗತವು.

[೪] ಈಶ್ವರ ಜಡಭೇದವೂ ಸಂಭವಿಸುವದಿಲ್ಲ; ಯಾಕೆಂದರೆ—ಈಶ್ವರನು ಸರ್ವಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣನು. ಮತ್ತು ಉಪಾದಾನದಿಂ ಭಿನ್ನವಾಗಿ, ಕಾರ್ಯಕ್ಕೆ ಸತ್ತೆ ಇರುವದಿಲ್ಲ; ಇದರಿಂದ ಈಶ್ವರನು ಪರಮಾರ್ಥದಲ್ಲಿ ಬ್ರಹ್ಮಸ್ವರೂಪವೇ ಆಗಿದಾನೆ. ಅವನಲ್ಲಿ ಜಗತ್ತಿನ ತೋರಿಕೆಯು ಮಿಥ್ಯವಾಗಿರುವದು. ಈ ಮಾತು

೧—"ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವಸತ್ಯಂ"

೨—"ಇಂದ್ರೋಮಾಯಾಭಿಃ ಪುರುರೂಪ ಈಯತೇ"

೩—"ಮಾಯಾಮಾತ್ರಮಿದಂ ಸರ್ವಂ" ಇತ್ಯಾದಿ ಶೃತಿಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಅರ್ಥವೇನಂದರೆ—

೧—ಘಟಾದಿ ಕಾರ್ಯವ್ಯಪದೇಶ ಮಾತ್ರವೇ ನಾಮವಾಗಿರುವದು. ಮೃತ್ತಿಕೆಯೇ ಸತ್ಯವು.

೨—ಪರಮೇಶ್ವರನು ಮಾಯಾಶಕ್ತಿಯಿಂದ ಅನೇಕ ರೂಪನಾಗಿ ತೋರುವನು.

೩—ಈ ದ್ವೈತವು ಮಾಯಾ ಮಾತ್ರವೇ ಆಗಿರುವದು. ಆದಕಾರಣ ಈಶ್ವರ ಜಡಭೇದವೂ ಅಸಂಗತವು.

[೫] ಜಡಪದಾರ್ಥಗಳಾದರೋ, ತಾವೇ ಮಿಥ್ಯವಾಗಿರುವದ್ದರಿಂದ ಅವುಗಳಿಗೆ ಪರಸ್ಪರ ಭೇದವೂ ಸ್ವಪ್ನಪದಾರ್ಥಗಳ ಭೇದದಂತೆ ಮಿಥ್ಯವೇ ಆಗಿರುವುದು. ಅದನ್ನು " ನಾಸ್ತಿನಾಸ್ತಿ ಜಗತ್ಸರ್ವಂ-ವಿಕಲ್ಪೋನಹಿವಸ್ತು" ಇತ್ಯಾದಿ ಶೃತಿಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಇದಕ್ಕೆ

ಯುಕ್ತಿ.

(೧) ಜೀವೇಶ್ವರರಿಗೆ ಪರಮಾರ್ಥವಾಗಿ ಭೇದವಿಲ್ಲ,
" ಔಪಾಧಿಕತ್ವಾತ್ ಸೋಽಯಂ ದೇವದತ್ತವತ್ "

(೨) ಜೀವರ ಪರಸ್ಪರ ಭೇದವೂ ಅಸತ್,
" ಔಪಾಧಿಕತ್ವಾತ್ ಜಲಚಂದ್ರವತ್ "

(೩) ಜೀವ ಜಡಗಳ ಪರಸ್ಪರ ಭೇದವೂ ಅಸತ್,
" ಅವಿದ್ಯಕತ್ವಾತ್ ಸ್ವಪ್ನಪುರುಷ ಭೋಗ್ಯವತ "

(೪) ಈಶ್ವರ ಜಡಭೇದವೂ ಅಸತ್,
" ಮಾಯಿಕತ್ವಾತ್ ನಟಭಾಜಿವತ್ "

(೫) ಜಡ ಜಡ ಭೇದವೂ ಅಸತ್,
" ಭ್ರಾಂತಿಮೂಲಕತ್ವಾತ್ ಸ್ವಾಪ್ನಿಕಪದಾರ್ಥಭೇದವತ್ "

ಇತ್ಯಾದಿ ಯುಕ್ತಿಗಳಿಂದಲೂ, ಐದು ಭೇದವೂ ಅಸತ್ತಾಗಿರುವದು. ಗುರುಮುಖವಾಗಿ ವೇದಾಂತವನ್ನು ಚನ್ನಾಗಿ ವಿಚಾರಿಸುವದ್ದರಿಂದ ಆ ಭೇದಗಳು ನಿರಾಸವಾಗಿ ಅದ್ವಯ ನಿಶ್ಚಯವಾಗುವದು. ಆ ಗುರು ವೇದಾಂತ ವಿಚಾರಗಳಿಂ ವಿಮುಖರಾದ ಭ್ರಾಂತವಾದಿಗಳಿಗೆ ಅದ್ವಯಬೋಧವಾಗುವದಿಲ್ಲ ; ಆವಾದಿಗಳ ಭ್ರಮೆ ಐದು ಬಗೆಯಾಗಿರುವದು.

॥೧೩॥ ಪಂಚ ಭ್ರಮಸ್ವರೂಪ.

೧—ಜೀವ ಪರಮಾತ್ಮರಲ್ಲಿ ಭೇದಭ್ರಮ.
೨—ಆತ್ಮನಲ್ಲಿ ಕರ್ತೃತ್ವಭ್ರಮ.
೩—ಸಂಗಿತ್ವಭ್ರಮ.
೪—ಬ್ರಹ್ಮದಲ್ಲಿ ವಿಕಾರಿತ್ವಭ್ರಮ.
೫—ಜಗತ್ತಿನಲ್ಲಿ ಸತ್ಯತ್ವಭ್ರಮ. ಇವುಗಳ ನಿವೃತ್ತಿಯ ವಿಚಾರವಾವುದೆಂದರೆ—

## ||೧೪|| ಭ್ರಮನಿವೃತ್ತಿ ವಿಚಾರ.

೧—ಭೇದಭ್ರಮೆಯ ನಿರಾಕರಣೆ ಪೂರ್ವದಲ್ಲೇ ಮಾಡಿರುವದು.

೨—ಸರ್ವಕರ್ಮಗಳ ಸಿದ್ಧಿಯು (೧) ಶರೀರವನ್ನಧಿಷ್ಠಿಸಿದ್ದರಿಂದಲೂ, (೨) ಕರ್ತೃ ಅಹಂಕಾರದಿಂದಲೂ, (೩) ಕರಣ ಇಂದ್ರಿಯದಿಂದಲೂ, (೪) ಚೇಷ್ಟಿಸುವ ಪ್ರಾಣದಿಂದಲೂ, (೫) ದೇವತೆಗಳ ಸಹಕಾರಿಯಿಂದಲೂ ಆಗುವದು. ಆತ್ಮನು ಅವುಗಳೆಲ್ಲಕ್ಕೂ ಸಾಕ್ಷಿಯಾಗಿರುವನು. ಮತ್ತು ಅವನು ಸದಾ ಅಕರ್ತನಾಗಿರುವನು. ಅವನಲ್ಲಿ ಕರ್ತೃತ್ವವನ್ನಾವನು ಆರೋಪಿಸುವನೋ, ಅವನನ್ನು ಗೀತೆಯಲ್ಲಿ ಭಗವಂತನು ದುರ್ಮತಿ ಎಂದು ಹೇಳಿರುವನು. ಗೀತ. 18–16

೩—ಮತ್ತು ಆತ್ಮನು ದೇಹಾದಿಗಳಿಂದ ಸದಾ ಅಸಂಗನಾಗಿರುವನು. ಯಾಕೆಂದರೆ—ಸಂಗವೆಂಬ ಹೆಸರು ಸಂಬಂಧಕ್ಕಾಗುವದು. ಆ ಸಂಬಂಧವು ಸಜಾತೀಯ, ವಿಜಾತೀಯ, ಸ್ವಗತಪದಾರ್ಥಗಳಲ್ಲಾಗುವದು. ಎಂತೆಂದರೆ—ಘಟಕ್ಕೆ ಘಟದಲ್ಲಿ ಸಜಾತೀಯವೂ, ಪಟದಲ್ಲಿ ವಿಜಾತೀಯವೂ, ಪಟಕ್ಕೆ ತಂತುವಿನಲ್ಲಿ ಸ್ವಗತ ಸಂಬಂಧವೂ, ಇರುವದು. ಆತ್ಮನು ಸಜಾತೀಯಾದಿಗಳಿಂ ರಹಿತನಾಗಿರುವನು. ಆದ್ದರಿಂದ ಅಸಂಗನೆನ್ನಲ್ಪಡುವನು. ಈ ಪ್ರಕ್ರಿಯದ ವಿಶೇಷವನ್ನು ಮುಂದೆ ಹೇಳುವೆವು.

೪—ಬ್ರಹ್ಮವು ಪರಿಣಾಮಿಯಾಗಿಯೂ, ಅಥವಾ ಆರಂಭಿಯಾಗಿಯೂ, ಇರುವ ಜಗತ್ತಿಗೆ ಉಪಾದಾನವಲ್ಲ. ಮತ್ತೇನೆಂದರೆ—ವಿವರ್ತೋಪಾದಾನ ಕಾರಣವಾಗಿರುವದು. ಇದರಿಂದ ಬ್ರಹ್ಮವು ವಿಕಾರಿಯಾಗುವದಿಲ್ಲ; ತನ್ನ ಸ್ವರೂಪತ್ಯಾಗವಾಗದೆ ಕಾರ್ಯತ್ವರೂಪದಿಂ ತೋರುವದಾವುದೋ, ಅದು ವಿವರ್ತೋಪಾದಾನವೆನ್ನಲ್ಪಡುವದು. ರಜ್ಜುಸರ್ಪದಂತೆ; ಅದನ್ನು ವೇದಾಂತಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಹೇಳಿರುವದು. ಮತ್ತು

೫—ಜಗತ್ತೆಲ್ಲವೂ ಷಟ್ ಪ್ರಮಾಣಗಳಿಂ ಮಿಥ್ಯವಾಗಿದೆ.

(೧) ' ವಿದ್ಯುತ್‌ವತ್ ' ದೃಷ್ಟನಷ್ಟಸ್ವಭಾವದಿಂ ಪ್ರತ್ಯಕ್ಷ ಪ್ರಮಾಣದಿಂದ ಮಿಥ್ಯಾ.

(೨) ' ಜ್ಞಾನನಿವರ್ತ್ಯತ್ವಾತ್ ಇತ್ಯಾದಿ ಅನುಮಾನದಿಂ ಮಿಥ್ಯಾ. '

(೩) " ನೇಹನಾನಾಸ್ತಿ ವಿಕಲ್ಪೋನಹಿವಸ್ತು " ಇತ್ಯಾದಿ ಶಾಸ್ತ್ರ [ಶಬ್ದ] ದಿಂದಲೂ ಮಿಥ್ಯಾ.

(೪) “ಗಂಧರ್ವನಗರೋಪಮಂ ಸ್ವಪ್ನೇಂದ್ರಜಾಲವತ್” ಇತ್ಯಾದಿ ಉಪಮಾನದಿಂದಲೂ ಮಿಥ್ಯಾ.

(೫) “ತರತಿಶೋಕಮಾತ್ಮವಿತ್” ಇತ್ಯಾದಿ ಶೃತಿಯಲ್ಲಿ ಪೇಳಲ್ಪಟ್ಟ ಶೃತಾರ್ಥಾಪತ್ತಿಯಿಂದಲೂ ಮಿಥ್ಯಾ.

(೬) ಸುಷುಪ್ತಿ ಸಮಾಧ್ಯಾದಿಗಳಲ್ಲಿ ಅನುಪಲಂಭವಾಗಿರುವದ್ದರಿಂದ ಅನುಪಲಬ್ಧಿಪ್ರಮಾಣದಿಂದಲೂ, ಜಗತ್ತು ಮಿಥ್ಯವಾಗಿರುವದು.

ಹೀಗೆ ಷಟ್ಪ್ರಮಾಣಗಳಿಂ ಜಗತ್ ಮಿಥ್ಯವಾಗಿರುವದ್ದರಿಂದ ಸತ್ಯವಲ್ಲ.

ಈ ಪ್ರಕಾರದಿಂ ಭ್ರಮಪರಿಹಾರವಾಗಲು ವಿದ್ವಾನುವಿಗೆ ಜಗತ್ ಅನರ್ಥಕರವಾಗುವದಿಲ್ಲ; ಮತ್ತೇನೆಂದರೆ:— ಅನ್ಯಥಾದರ್ಶಿಗಳಿಗೇನೆ ಕ್ಲೇಶಕರವಾಗುವದು. ಅದೆಂತೆಂದರೆ ;—

ಶ್ಲೋ|| ಅಪಾಮಾರ್ಗಲತೇವಾಸೌ ವಿಷಮೋಹಿಭವಭ್ರಮಃ ||
ಪ್ರತ್ಯಗ್ದೃಶಾಂ ವಿಮೋಕ್ಷಾಯ ನಿಬಂಧಾಯ ಬಹಿರ್ದೃಶಾಂ ||

ಇದರ ಅರ್ಥವೇನಂದರೆ—ಉತ್ತರೇಣಿಗಿಡದಂತೆ ಭವಭ್ರಮೆಯು ವಿಷಮವಾಗಿರುವದು. ಪ್ರತ್ಯಗಾತ್ಮದೃಷ್ಟಿಯುಳ್ಳ ವಿದ್ವಾನುಗಳಿಗೆ ಮೋಕ್ಷನಿಮಿತ್ತವಾಗಿಯೂ, ಬಹಿರ್ಜಗದ್ದೃಷ್ಟಿಯುಳ್ಳ ಮೂಢರಿಗೆ ಬಂಧಕ್ಕೋಸುಗವಾಗಿಯೂ ಇರುವದು.

ಹ್ಯಾಗೆ ರಜ್ಜುವಿನಲ್ಲಿ ಸರ್ಪವಂ ನೋಡುವನಿಗೆ ಭ್ರಾಂತಿರೂಪವಾದ ಸರ್ಪವು ಭಯಕ್ಕೆ ಹೇತುವಾಗುವದೋ, ಅದೇ ರಜ್ಜುವಂ ನೋಡುವನಿಗೆ ಭಯಕ್ಕೆ ಹೇತುವಾಗಿಲ್ಲವೋ, ಹಾಗೆ ಮೂಢಾ ಮೂಢರಿಗೆ (ವಿಮೂಢರು) ವಿಷಮದೃಷ್ಟಿಯಿಂದ ವಿಷಮ ಫಲವಾಗುವುದು.

ತಾತ್ಪರ್ಯವೇನೆಂದರೆ—(೧) ಅಸ್ತಿ (೨) ಭಾತಿ (೩) ಪ್ರಿಯ (೪) ನಾಮ (೫) ರೂಪ. ಈ ಪಂಚಾಂಶಗಳು ಸರ್ವವಿಶ್ವದಲ್ಲಿರುವವು. ಅವುಗಳಲ್ಲಿ ಮೊದಲನೇ ಮೂರು ಬ್ರಹ್ಮರೂಪವು. ಉಳಿದ ನಾಮರೂಪ ಜಗತ್ತು ಮಾಯಾಕೃತವಾದ್ದರಿಂದ ಮಿಥ್ಯವಾಗಿರುವದು. ಯಾವನು ಜಗದ್ದೃಷ್ಟಿಯಿಂದ ನೋಡುವನೋ, ಅವನಿಗೆ ಜಗತ್ತು ಕ್ಲೇಶಕಾರಿಯಾಗುವದು. ಬ್ರಹ್ಮದೃಷ್ಟಿಯಿಂ ನೋಡುವನಿಗೆ, ಕ್ಲೇಶಕರವಾಗುವದಿಲ್ಲ ;—

ಇನ್ನು ಪರಮಾರ್ಥ ದೃಷ್ಟಿಯಿಂ ನೋಡಿದರೆ, ನಾಮರೂಪ ಕ್ರಿಯಾತ್ಮಕವಾದ ಜಗತ್ತು ಬ್ರಹ್ಮರೂಪವೇ ಆಗಿರುವದು. ಅಲ್ಲಿ

ಶ್ರು॥ "ಬ್ರಹ್ಮೈ ತದ್ಧಿ ಸರ್ವಾಣಿ ನಾಮಾನಿ ಬಿಭರ್ತಿ
ಬ್ರಹ್ಮೈ ತದ್ಧಿ ಸರ್ವಾಣಿ ರೂಪಾಣಿ ಬಿಭರ್ತಿ
ಬ್ರಹ್ಮೈ ತದ್ಧಿ ಸರ್ವಾಣಿ ಕರ್ಮಾಣಿ ಬಿಭರ್ತಿ "

ಹೀಗೆ ಬೃಹದಾರಣ್ಯಕದ ತೃತೀಯಾಧ್ಯಾಯದೊಳ್ ಆರನೇ ಬ್ರಾಹ್ಮಣದಲ್ಲಿ ಪ್ರಸಿದ್ಧಪಡಿಸಿರುವದು. ಇದರಿಂದ ಜಗತ್ ಮಿಥ್ಯಾಕಲ್ಪನಾ ಮಾತ್ರವೆನಿಸುವದು. ಹೀಗೆ ವಿಚಾರವಂ ಮಾಡಿದರೆ, ಐದು ಭ್ರಮೆಗಳಿಗೂ ನಿವೃತ್ತಿಯಾಗುವದು. ಇದಕ್ಕೆ ಅನುಕೂಲವಾದ ಐದು ದೃಷ್ಟಾಂತಗಳು ಯಾವವೆಂದರೆ—

[೧] ಬಿಂಬ ಪ್ರತಿಬಿಂಬ ದೃಷ್ಟಾಂತ, (ಇದು ಭೇದಭ್ರಮೆಗೆ)
[೨] ಜಪಾಕುಸುಮ ಸ್ಫಟಿಕ ದೃಷ್ಟಾಂತ, (ಇದು ಕರ್ತೃತ್ವಭ್ರಮೆಗೆ)
[೩] ಘಟ ಆಕಾಶ ದೃಷ್ಟಾಂತ; (ಇದು ಸಂಗಭ್ರಮೆಗೆ)
[೪] ರಜ್ಜುಸರ್ಪ ದೃಷ್ಟಾಂತ, (ಇದು ವಿಕಾರಭ್ರಮೆಗೆ)
[೫] ಸುವರ್ಣಭೂಷಣ ದೃಷ್ಟಾಂತ, (ಇದು ಜಗತ್ ಸತ್ಯವೆಂಬ ಭ್ರಮೆಗೆ) ಇವೈದಿರುವವು. ಇದರಿಂದ ಏನು ಸಿದ್ಧವಾಯಿತೆಂದರೆ—ಬ್ರಹ್ಮದಲ್ಲಿ ಭೇದವು ಭ್ರಾಂತಪುರುಷರಿಂದ ಕಲ್ಪಿಸಲ್ಪಟ್ಟಿರುವದು.

ಮರಳಿ ವಿಚಾರಿಸಿದರೆ, ಯಾವ ರೀತಿಯಿಂದಲೂ ಭೇದ ಸಿದ್ಧಿ ಆಗುವದಿಲ್ಲ. ಕೂಟಸ್ಥ ಬ್ರಹ್ಮರಿಗೆ ಮುಖ್ಯ ಸಮಾನಾಧಿಕರಣದಿಂದ ಸದಾ ಅಭೇದವುಂಟು. ಮತ್ತು ಮಾಯೆಗೂ, ಮಾಯಾಕಾರ್ಯವಾದ ಜಗತ್ತಿಗೂ ಬ್ರಹ್ಮದೊಡನೆ ಬಾಧಸಮಾನಾಧಿಕರಣದಿಂದ ಅಭೇದವುಂಟು. ಆದ್ದರಿಂದ ಬ್ರಹ್ಮವು ಸರ್ವದಾ ಏಕ ಅದ್ವೈತಸ್ವರೂಪವಾಗಿರುವದು. ಇದು ಜೀವನ್ಮುಕ್ತನಾದ ಸ್ಥಿತ ಪ್ರಜ್ಞನಿಗೆ ಸದಾ ಅನುಭವದಲ್ಲಿದೆ. ಆದ್ದರಿಂದ ಅದೇ ನಿತ್ಯಪರಂಬ್ರಹ್ಮನಾನಾಗಿರುವೆನು, ಇದು ಐದನೇ ಶ್ಲೋಕದ ಅರ್ಥವು. ||೫||

ಅ—ಹಿಂದೆ ಮೂರನೇ ಶ್ಲೋಕದಲ್ಲಿ ಆನಂದ ಪ್ರಕಾಶ ನಿಷ್ಪ್ರಪಂಚರೂಪವಾದ ಜ್ಞೇಯಬ್ರಹ್ಮವಂ ಪ್ರತಿಪಾದಿಸಿದರು. ಅದನ್ನು ಸಿಂಹಾವಲೋಕನ ನ್ಯಾಯವಾದ ಉಪ ಪತ್ತಿಯಿಂದ ಈ ಆರನೇ ಶ್ಲೋಕದಲ್ಲಿ ಆಚಾರ್ಯರು ಪ್ರತಿಪಾದಿಸುವರು.

—: ಯದಾನಂದೇತಿ :—

ಮೂ॥ ಯದಾನಂದಲೇಶೈಃ ಸಮಾನಂದ ವಿಶ್ವಂ।
ಯದಾಭಾತಿ ಸತ್ವೇ ತದಾಭಾತಿ ಸರ್ವಂ ॥
ಯದಾಲೋಚಿತೇ ಹೇಯಮನ್ಯತ್ಸಮಸ್ತಂ।
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥೬॥

ಯಾವುದರ ಆನಂದಲೇಶದಿಂದ ಸರ್ವವಿಶ್ವವು ಆನಂದ ಉಳ್ಳದ್ದಾಗಿರುವದೋ, ಮತ್ತು ಯಾವದು ಯಾವಾಗ ಭಾನವಾಗಲು, ಆಗ ಸರ್ವವಿಶ್ವವೂ ಭಾನವಾಗುವದೋ, ಇನ್ನು ಯಾವದನ್ನಾಲೋಚಿಸುವದ್ದರಿಂದ ಸಮಸ್ತ ಪ್ರಪಂಚವು ಹೇಯವಾಗುವದೋ, ಅದೇ ನಿತ್ಯಪರಂ ಬ್ರಹ್ಮನಾನಾಗಿರುವೆನು. ಇದು ಪದದ ಅರ್ಥ ॥೬॥

॥೧೫॥ ನಾಮಬ್ರಹ್ಮಾನಂದ ವಿಚಾರ.

ಟೀಕಾ:—ಯಾವ ಬ್ರಹ್ಮಾನಂದದ "ಲೇಶ" ಅಂದರೆ, ಲವದಿಂದ ಬ್ರಹ್ಮಾದಿಪಿಪೀಲಿಕಾ ಪರ್ಯಂತವಾದ ಸರ್ವಪ್ರಾಣಿಗಳು ಆನಂದಿತವಾಗುವವೋ, ಅಲ್ಲಿ ಶೃತಿ "ಏಷ ಹ್ಯೇವಾನಂದ ಯಾತಿ—ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾ ಮುಪಜೀವಂತೀತಿ" ಇದಕ್ಕೆ ಈ ಪ್ರತ್ಯಗಭಿನ್ನ ಪರಮಾತ್ಮನೇ, ಸರ್ವಜಗತ್ತಿಗೆ ಆನಂದವಂ ಕೊಡುವನೆಂತಲೂ ಮತ್ತು ಇವನ ಆನಂದಸ್ವರೂಪದ 'ಮಾತ್ರಾ' ಅಂದರೆ, ಲೇಶಾನಂದದಿಂದ, ಈ ಸರ್ವ ಭೂತ ಪ್ರಾಣಿಗಳು ಜೀವಿಸುವವೆಂತಲೂ ಅರ್ಥ. ತಾತ್ಪರ್ಯವೇನೆಂದರೆ—ಯಜುರ್ವೇದದ ತೈತ್ತರೀಯೋಪನಿಷತ್ತಿನೊಳಗಣ ದ್ವಿತೀಯಾಧ್ಯಾಯರೂಪವಾದ ಆನಂದವಲ್ಲಿಯಲ್ಲಿ

"ಸೈಷಾನಂದಸ್ಯ ಮೀಮಾಂಸಾ ಭವತಿ"

ಹೀಗೆ ಉಪಕ್ರಮವಂ ಮಾಡಿ, ಚಕ್ರವರ್ತಿಯಾದ ರಾಜನಲ್ಲಿ ಮನುಷ್ಯ ಸುಖಕ್ಕೆ ಅಂತವಂ ಪೇಳಿರುವದು (೧). ಅದಕ್ಕಿಂತ ಶತಗುಣಾಧಿಕಸುಖ ಮನುಷ್ಯಗಂಧರ್ವರಿಗೆ ಒಂದು ಆನಂದವೆಂದು ಪೇಳಿರುವದು (೨). ಆ ಮನುಷ್ಯಗಂಧರ್ವರಿಗಿಂತ ದೇವಗಂಧರ್ವರಲ್ಲಿ (೩). ಅವರಿಗಿಂತ ಪಿತೃಗಳಲ್ಲಿ (೪). ಅವರಿಗಿಂತ ಆಜಾನಜ ದೇವರುಗಳಲ್ಲಿ (೫). ಅವರಿಗಿಂತ ಕರ್ಮ ದೇವತೆಗಳಲ್ಲಿ (೬). ಅವರಿಗಿಂತ ಮುಖ್ಯ ದೇವತೆಗಳಲ್ಲಿ (೭). ಅವರಿಗಿಂತ ಇಂದ್ರನಲ್ಲಿ (೮). ಅವನಿಗಿಂತ ಬೃಹಸ್ಪತಿಯಲ್ಲಿ (೯). ಅವನಿಗಿಂತ ಪ್ರಜಾಪತಿಯಲ್ಲಿ (೧೦). ಅವನಿಗಿಂತ

ಬ್ರಹ್ಮನಲ್ಲಿ ಶತಶತಗುಣ ಅಧಿಕಾನಂದವಂ ಪೇಳಿರುವದು (೧೧). ಆ ಮಹಾ ರಾಜ ಮೊದಲುಗೊಂಡು, ಬ್ರಹ್ಮನ ಪರ್ಯಂತವಾದ ಸರ್ವ ಆನಂದವು ಬ್ರಹ್ಮಾನಂದದ ಲೇಶವೆನಿಸುವದು. ಹ್ಯಾಗೆಂದರೆ—ಸಮುದ್ರದ ಲೇಶಜಲಗಳಿಂದ ಮೇಘವು ಪುಷ್ಟವಾಗಿ ಸರ್ವತೃಣಾದಿ ಸ್ಥಾವರಗಳಿಗೂ, ತನ್ಮೂಲಕ ಜಂಗಮಗಳಿಗೂ, ಜೀವನವನ್ನಿತ್ತು ಮುದಿತಗೈವದೋ, ಹಾಗೆ ಬ್ರಹ್ಮಾನಂದದ ಲೇಶಮಾತ್ರವು ಜಗತ್ತಿನೊಳಗೆಲ್ಲ ಹರಡಿಕ್ಕೊಂಡಿರುವದು. ಅದನ್ನು ಪೇಳುವರು.

“ಯಸ್ಯಾನಂದ ಸಮುದ್ರಸ್ಯ ಲೇಶಮಾತ್ರಂ ಜಗದ್ಗತಂ |
ಪ್ರಸೃತಂ ಬ್ರಹ್ಮಲೋಕಾದಾವಿತಿ ॥”

ಇದರ ಅರ್ಥ ಮೇಲೆ ಹೇಳಿದಂತಿರುವದು. ಆದ್ದರಿಂದ ಯಾವ ಬ್ರಹ್ಮಾನಂದದ ಲವ ಮಾತ್ರದಿಂ ಎಲ್ಲಾ ವಿಶ್ವವು ಸಮ್ಯಕ್ ಆನಂದವುಳ್ಳದ್ದಾಗಿರುವದೋ, ಆ ಬ್ರಹ್ಮವೇ ಪರಮ ಆನಂದ ಸ್ವರೂಪವಾಗಿದೆ.

೧—ಹೀಗೆ ಬ್ರಹ್ಮವು ಆನಂದ ಸ್ವರೂಪವಾಗಿಲ್ಲದಿದ್ದರೆ, ವಿಶ್ವಕ್ಕೆ ಆನಂದವೆಲ್ಲಿಂದಾದೀತು ? ಈ ಉಪಪತ್ತಿಯಿಂದ ಬ್ರಹ್ಮವು ಆನಂದ ಸ್ವರೂಪವೆಂದು ಪೇಳಲ್ಪಟ್ಟಿತು. ಮತ್ತು

೨—ಹಿಂದೆ ಪೇಳಿದ ಶೃತಿಯ ಗೂಢಾಭಿಪ್ರಾಯವಂ ನೋಡಿದರೆ, ಲೋಕಾಂತರದೊಳ್ ಅಧಿಕಾನಂದವಂ ಪ್ರತಿಪಾದಿಸುವದರಲ್ಲಿ ತಾತ್ಪರ್ಯವಿಲ್ಲ; ಮತ್ತೇನೆಂದರೆ—ಲೋಕದವರಿಂದ ಅನುಭವಿಸಲ್ಪಡುವ ವಿಷಯಾನಂದದ ಅನುವಾದವಂ ಮಾಡಿ, ಬ್ರಹ್ಮಾನಂದವು ನಿರತಿಶಯವೆಂದು ತಿಳಿಯಪಡಿಸುವದರಲ್ಲಿಯೂ, ಮತ್ತು ಶ್ರೋತ್ರಿಯನಿಗೂ ಅಕಾಮಹತನಾದ ಜ್ಞಾನಿಗೂ, ಸಂಪೂರ್ಣಸುಖದ ಪ್ರಾಪ್ತಿಯಂ ತೋರ್ಪಡಿಸುವದರಲ್ಲಿಯೇ ತಾತ್ಪರ್ಯವು. ಬಳಿಕ

೩—ಆ ಆನಂದವು ಅಕ್ಷಯ, ಅನಂತವೆಂದು ತೋರಿಸಿ, ಬ್ರಹ್ಮಲೋಕ ಪರಿಯಂತವಾಗಿ ಮೂಢರಿಂದ ಆರೋಪಿತವಾದ ತುಚ್ಛಸುಖದಿಂ ಪರಾಙ್ಮುಖವನ್ನೇ ಮಾಡಿಸುವದು. “ಯೋವೈ ಭೂಮಾತತ್ಸುಖಂ ನಾಲ್ಪೇ ಸುಖಮಸ್ತಿ” ಈ ಶೃತಿಯು ಸ್ಪಷ್ಟವಾಗಿ ಬ್ರಹ್ಮವೇ ಸುಖರೂಪವೆಂದು ಪೇಳಿರುವದು. ಅದರಿಂ ಭಿನ್ನವಾದ ಪರಿಚ್ಛಿನ್ನ ಪ್ರಪಂಚದಲ್ಲಿ ಸುಖವಿಲ್ಲವೆಂದು ನಿಷೇಧಿಸಿರುವದು. ಮತ್ತು ಹ್ಯಾಗೆ ಜಗತ್ತಿನಲ್ಲಿ ಸುಖವಿಲ್ಲವೋ, ಹಾಗೆ ವಿಶ್ವಕ್ಕೆ ಸತ್ತಾಭಾಸವೂ ಕೂಡ ಸ್ವತಃ ಇಲ್ಲ. ಮತ್ತೇನೆಂದರೆ—ಯಾಚಿತಮಂಡನ ನ್ಯಾಯ

ದಂತೆ ಚೇತನದ ಸತ್ತೆಯಿಂದಲೇ ಸತ್ತೆಯಂತೆ ತೋರುವದು. ಈ ಅರ್ಥವನ್ನು ಈಗ ದ್ವಿತೀಯ ಪಾದದಿಂದ ಪ್ರತಿಪಾದಿಸುವರು.

॥೧೬॥ ಜಗತ್ತಿಗೆ ಸ್ವತಃ ಸತ್ತಾಭಾನಗಳಿಲ್ಲ, ಮತ್ತು ಜಗತ್ತು ಪರಮಾರ್ಥವಾಗಿಲ್ಲ.

(ಯದಾಭಾತಿಸತ್ವೇ ಇತಿ) "ಯದಾಭಾತಿಸತ್ವೆ" ಅಂದರೆ, ಯಾವ ಅಧಿಷ್ಠಾನ ಬ್ರಹ್ಮವು ಸಾಮಾನ್ಯರೂಪದಿಂ ಭಾನವಾಗಲು, ಅನಂತರ ಸರ್ವಜಗತ್ ಭಾನವಾಗುವದೋ, ಅಲ್ಲಿ ಶೃತಿ "ತಮೇವಭಾಂತಮನುಭಾತಿಸರ್ವಂ" ಇದರ ಅರ್ಥ—ಆ ಸ್ವಯಂಜ್ಯೋತಿಯಾದ ಪರಮಾತ್ಮನ ಭಾನವಾದ ಬಳಿಕ ಸರ್ವವೂ ಭಾನವಾಗುವದು. ತಾತ್ಪರ್ಯವೇನೆಂದರೆ—ರಜ್ಜು ಶುಕ್ತ್ಯಾದಿಗಳು ಸಾಮಾನ್ಯರೂಪದಿಂ ಭಾನವಾಗಲು, ಅನಂತರ ಕಲ್ಪಿತರಜತಾದಿಗಳು ತೋರುವಂತೆ ಸರ್ವಾಧಿಷ್ಠಾನವಾದ ಬ್ರಹ್ಮದ ಪ್ರತೀತಿಯ ನಂತರ, ಘಟೋಽಸ್ತಿ ಪಟೋಽಸ್ತಿ ಎಂಬ ಅಸ್ತಿತ್ವ ವ್ಯವಹಾರಕ್ಕೆ ಸರ್ವ ಪದಾರ್ಥಗಳು ಯೋಗ್ಯವಾಗುವವು. ಆದಕಾರಣ ಸಮಸ್ತ ವ್ಯವಹಾರ ಸಿದ್ಧಿಯು ಬ್ರಹ್ಮದಿಂದಲೇ ಆಗುವದು. ಅದೆಂತೆಂದರೆ;—

ಶ್ಲೋ॥ ಸರ್ವೋಽಪಿ ವ್ಯವಹಾರಸ್ತು ಬ್ರಹ್ಮಣಾ ಕ್ರಿಯತೇ ಜನೈಃ ।
ಅಜ್ಞಾನಾನ್ನವಿಜಾನಂತಿ ಮೃದೇವಹಿ ಘಟಾದಿಕಂ ॥
ಸದೈವಾತ್ಮಾ ವಿಶುದ್ಧೋಽಸ್ತಿ ಹ್ಯಶುದ್ಧೋ ಭಾತಿವೈಸದಾ ।
ಯಥೈವ ದ್ವಿವಿಧಾ ರಜ್ಜು ಜ್ಞಾನಿನೋಽಜ್ಞಾನಿನೋಽನಿಶಂ

ಇದರ ಅರ್ಥವೇನೆಂದರೆ;—ಜನಗಳಿಂದಾಗುವ ಸರ್ವ ವ್ಯವಹಾರವು ಬ್ರಹ್ಮದಿಂದಲೇ ಮಾಡಲ್ಪಡುವದು. ಎಂತೆಂದರೆ;—ಮೃತ್ತಿಕೆಯಿಂದ ಘಟದ ಸ್ವರೂಪ ಸಿದ್ಧಿಯೂ, ವ್ಯವಹಾರಸಿದ್ಧಿಯೂ ಸಹ ಆಗುವದು. ಆದರೂ ಮೂಢಜನಗಳು ತಿಳಿಯುವದಿಲ್ಲ.

ಮತ್ತು ಜ್ಞಾನಿಗೆ ಆತ್ಮನು ಶುದ್ಧನಾಗಿ ಪ್ರಕಾಶಿಸುವನು. ಅಜ್ಞಾನಿಗೆ ಭ್ರಾಂತಿಯಿಂದ ಅಶುದ್ಧನಾಗಿ ಭಾಸಿಸುವನು. ಎಂತೆಂದರೆ;—ರಜ್ಜುವು ಎರಡು ವಿಧವಾಗಿ ಭಾಸಿಸುವಂತೆ. ಅಂದರೆ, ರಜ್ಜುವಿನ ಸ್ವರೂಪವನ್ನು ತಿಳಿದಂಥಾ ಜ್ಞಾನಿಗೆ ಸರ್ಪಾಭಾವದಿಂದ ನಿರ್ವಿಷಯವಾಗಿ ಭಯವನ್ನುಂಟುಮಾಡದಿರುವದು. ಮತ್ತು ಅಜ್ಞಾನಿಗೆ ಭ್ರಮದಿಂದ ಸರ್ಪರೂಪವಾಗಿ, ರಾತ್ರಿಯಲ್ಲಿ ಭಯವನ್ನುಂಟುಮಾಡುವದು. ಇದರಿಂದ ಏನು ಸಿದ್ಧವಾಯಿತೆಂದರೆ; ಜಗತ್ತು ಪರ

ಪರಮಾರ್ಥವಾಗಿಲ್ಲ; ಆದರೂ ರಜ್ಜುಸರ್ಪದಂತೆ ತೋರಿಕೆ ಮಾತ್ರವಾಗಿರುವದು. ಅದು ಅಧಿಷ್ಠಾನರೂಪವಾದ ಬ್ರಹ್ಮದ ಜ್ಞಾನದಿಂದ ಬಾಧಿಸಿಕ್ಕೊಳ್ಳುವದು. ಈ ಅರ್ಥವನ್ನು ಮೂರನೇ ಪಾದದಿಂದ ಪೇಳುವರು.

**||೧೭|| ಅಧಿಷ್ಠಾನಜ್ಞಾನದಿಂದ ಜಗತ್ತು ಬಾಧಿಸಿಕ್ಕೊಳ್ಳುವದು.**

**(ಯದಾಲೋಚಿತೇ ಇತಿ)** "ಯದಾಲೋಚಿತೆ" ಅಂದರೆ; ಯಾವ ಬ್ರಹ್ಮವನ್ನು ವಿಚಾರಿಸಿದ್ದೇ ಆದರೆ, ಇತರವಾದ ಸಮಸ್ತ ಜಗತ್ತು "ಹೇಯ" ಅಂದರೆ, ತ್ಯಾಗಕ್ಕೆ ವಿಷಯವಾಗುವದೋ, ಇಲ್ಲಿ ಮೂರುಕಾಲದಲ್ಲಿಯೂ, ಮಿಥ್ಯಾತ್ವ ದರ್ಶನವೇ ತ್ಯಾಗವೆನಿಸುವದು. ಆಕಾಶದಲ್ಲಿ ಗಂಧರ್ವನಗರ ಮೂರುಕಾಲದಲ್ಲಿಯೂ, ಇಲ್ಲದಂತೆ ಆತ್ಮನಲ್ಲಿ ಜಗತ್ತು ಕೂಡ, ಮೂರು ಕಾಲದಲ್ಲಿಯೂ ಇಲ್ಲ. ಅದೆಂತೆಂದರೆ ;—

**ಶ್ಲೋ|| ಗಂಧರ್ವ ನಗರಂ ಯದ್ವನ್ನಾಸೀದಸ್ತಿ ಭವಿಷ್ಯತಿ ।**
**ಗಗನೇ ತದ್ವದೇವೇದಂ ವಿಶ್ವಮಾತ್ಮನಿ ಸರ್ವದಾ ॥**

ಇದರ ಅರ್ಥ ;—ಗಗನದಲ್ಲಿ ಗಂಧರ್ವನಗರವು ಹ್ಯಾಗೆ ಹಿಂದೆ ಉಂಟಾಗಲಿಲ್ಲವೋ, ಈಗಿಲ್ಲವೋ, ಮುಂದುಂಟಾಗುವದಿಲ್ಲವೋ. ಹಾಗೆ ಆತ್ಮನಲ್ಲಿ ವಿಶ್ವವು ಸರ್ವದಾ ಅಭಾವವಾಗಿದೆ. ತಾತ್ಪರ್ಯವೇನಂದರೆ;—ಗಂಧರ್ವನಗರದಂತೆ ಆಕಾಶಾದಿ ಭೂತಗಳು ಸ್ಥಾವರಜಂಗಮಗಳು ಈ ಸರ್ವಭೌತಿಕ ಪ್ರಪಂಚವು ಮಿಥ್ಯವಾಗಿ ತೋರುವದು. ಚೇತನಸತ್ತೆಯು ವಿಚಾರದಿಂದ ವಿಂಗಡಿಸಿದರೆ, ಆಕಾಶಾದಿ ಭೂತಗಳೂ ಭೌತಿಕವೂ ಸಹ ನಿಸ್ತತ್ವವಾಗುವದು. ಆ ವಿಚಾರವು ಭೂತವಿವೇಕ ಸಂಜ್ಞಕ ಗ್ರಂಥದಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಗ್ರಂಥವಿಸ್ತಾರವಾಗುವದೆಂಬ ಭಯದಿಂದ ಇಲ್ಲಿ ಅದನ್ನು ಬರೆಯಲಿಲ್ಲ. ಇದರಿಂದ ಏನು ಸಿದ್ಧವಾಯಿತೆಂದರೆ ;—ಸತ್ಯಸ್ವರೂಪವಾದ ಬ್ರಹ್ಮದ ಆಲೋಚನೆಯಿಂ ಪುಟ್ಟಿದ ಸಮ್ಯಕ್ ಜ್ಞಾನದಿಂದ ವಿಶ್ವಕ್ಕೆ ಬಾಧೆಯಾಗುವದು [ಅಪರೋಕ್ಷ ಮಿಥ್ಯಾತ್ವನಿಶ್ಚಯದ ಪೆಸರು ಬಾಧೆ ಎನಿಸುವದು.] ಅದನ್ನು ಪೇಳುವರು. **"ಅಧ್ಯಸ್ಯ ಮಾನಂ ನಾಸ್ತೀತಿ ಬಾಧ ಇತ್ಯುಚ್ಯತೇಬುಧೈಃ"** ಇದರ ಅರ್ಥ— ಅಧ್ಯಸ್ಯಮಾನವಾದ ಪ್ರಪಂಚವು ಪರಮಾರ್ಥವಾಗಿಲ್ಲ. ಇಂತೆಂಬ ನಿಶ್ಚಯಕ್ಕೆ ಪಂಡಿತರಿಂದ ಬಾಧೆ ಎಂದು ಪೇಳಲ್ಪಡುವದು.

**ಶಂಕಾ;**—ತತ್ವಜ್ಞಾನದಿಂದ ಸಮೂಲಪ್ರಪಂಚಕ್ಕೆ ಬಾಧೆಯಾದರೆ, ಜ್ಞಾನಿಗೆ ವ್ಯವಹಾರ ಲೋಪ ಪ್ರಸಂಗವಾದೀತು ?

ಸಮಾಧಾನ:—ಜ್ಞಾನಿಯದೃಷ್ಟಿಯಲ್ಲಿ ವ್ಯವಹಾರದ ವಿಲ್ಲವೂ ಇಲ್ಲ; ಲೌಕಿಕ ದೃಷ್ಟಿಯಿಂದೇನಾದರು ಹೇಳುವದಾದರೆ, ಆಗ ಪ್ರಾರಬ್ಧನಿಮಿತ್ತದಿಂ ಶರೀರವಿರುವವರಿವಿಗೂ ಪ್ರತಿಭಾಸಮಾತ್ರವಾಗಿ, ಲೌಕಿಕ ವೈದಿಕಗಳ ವ್ಯವಹಾರ ವಾಗುವದು. ಇದರಿಂದ ವಿದ್ಯೋಪದೇಶರೂಪವಾದ ಸಂಪ್ರದಾಯ ವ್ಯವಹಾರಕ್ಕೆ ಲೋಪವೂ ಆಗುವದಿಲ್ಲ. ಮತ್ತು ಅದರಿಂದ ಜ್ಞಾನಿಗೆ ಹಾನಿಯೂ ಆಗುವದಿಲ್ಲ. ಯಾಕೆಂದರೆ;—ತತ್ವಜ್ಞಾನದಿಂದ ಸರ್ವ ಅನರ್ಥಗಳಿಗೆ ನಿವರ್ತ ವಾಗಿರುವದು; ಜ್ಞಾನದಿಂದ ಸರ್ವ ಅನರ್ಥಗಳ ನಿವೃತ್ತಿಯು ವಿದ್ವಾಸುಗಳ ಅನುಭವಸಿದ್ಧವಾಗಿದೆ. ಮತ್ತು

“ ಜ್ಞಾತ್ವಾ ದೇವಂ ಸರ್ವ ಪಾಶಾಪಹಾನಿಃ |
ಕ್ಷೀಣೈಃ ಕ್ಲೇಶೈರ್ಜನ್ಮ ಮೃತ್ಯು ಪ್ರಹಾಣಿಃ ” ||

ಈ ಶೃತಿಯೂ ಕೂಡ, ಪರಮಾತ್ಮದೇವನ ಜ್ಞಾನದಿಂದ ಸರ್ವ ಪಾಶಗಳ ಹಾನಿಯನ್ನೂ ಮತ್ತು ಕ್ಲೇಶಗಳ ಕ್ಷೀಣತೆಯಿಂದ ಜನ್ಮಾದಿ ಅನರ್ಥಗಳಿಗೆ ಅತ್ಯಂತ ನಿವೃತ್ತಿಯನ್ನೂ ಪ್ರಸಿದ್ಧವಾಗಿ ಹೇಳಿರುವದು. ಆದರೆ ಶೃತಿಯು ಜ್ಞಾನದಿಂದ ಪಾಶ ಮತ್ತು ಕ್ಲೇಶಗಳಿಗೆ ನಿವೃತ್ತಿಯಂ ಹೇಳಿದ್ದರಲ್ಲಿ ಆ ಪಾಶವು ಚತುರ್ವಿಧವಾಗಿರುವದೆಂದು ತಿಳಿಯತಕ್ಕದ್ದು.

ಶ್ಲೋ|| ಪಾಶಾಶ್ಚತುರ್ವಿಧಾಶ್ಚೈವ ಶಾಸ್ತ್ರೇಷು ಪ್ರತಿಪಾದಿತಾಃ |
ಮಲೋಮಾಯಾ ಕರ್ಮ ತತ್ವತಿರೋಧಾನಂ ಚ ತೇ ಮತಾಃ

ಇದರ ಅರ್ಥವೇನೆಂದರೆ— ಪಾಶವು ಚತುರ್ವಿಧವೆಂದು ಶಾಸ್ತ್ರಗಳಲ್ಲಿ ಪ್ರತಿಪಾದಿಸಿರುವದು.

(೧) ಮಲ,
(೨) ಮಾಯಾ,
(೩) ಕರ್ಮ,
(೪) ತತ್ವತಿರೋಧಾನ. ಈ ನಾಲ್ಕನ್ನು ಅಂಗೀಕರಿಸಿದಾರೆ.

೧—ಜ್ಞಾನಕ್ರಿಯಾ ಶಕ್ತಿಗಳನ್ನಾಚ್ಛಾದಿಸುವಂಥಾ ಒಂದು ಬಗೆಯಾದ ದೋಷವು ‘ಮಲ’ ವೆನಿಸುವದು.

೨—ರಾಗದ್ವೇಷಾದಿಗಳಿಗೆ ಹೇತುವಾದ್ದು ‘ಮಾಯಾ’ ಎನ್ನಲ್ಪಡುವದು.

೩—ಪುಣ್ಯ, ಪಾಪ, ಮಿಶ್ರವೆಂಬ ತ್ರಿವಿಧವು ‘ಕರ್ಮ’ ವೆನ್ನಲ್ಪಡುವದು.

೪—ಮೂಢರಿಂದ ‘ತತ್ವತಿರೋಧಾನ’ ವೆಂಬುದು ಸರ್ವರಿಗೂ ಅನುಭವಸಿದ್ಧವಾಗಿರುವದು.

ಮತ್ತು ಕ್ಲೇಶವೂ ಕೂಡ ಅವಿದ್ಯಾಮೊದಲುಗೊಂಡು ಐದುಬಗೆಯಾಗಿರುವದು. ಅದನ್ನು

**ಸೂ॥ ಅವಿದ್ಯಾಽಸ್ಮಿತಾ ರಾಗದ್ವೇಷಾಭಿನಿವೇಶಾಃ ಪಂಚಕ್ಲೇಶಾಃ ॥**

ಈ ಸೂತ್ರದಲ್ಲಿ ಪತಂಜಲಿ ಭಗವಂತನು ಪ್ರಸಿದ್ಧವಾಗಿ ಪೇಳಿರುವನು. ಅವುಗಳಲ್ಲಿ ಅವಿದ್ಯೆ ಎಂಬುವದು ನಾಲ್ಕು ವಿಧವಾಗಿರುವದೆಂದು ಪೇಳಿರುವನು.

[೧] ಅನಿತ್ಯದಲ್ಲಿ ನಿತ್ಯಬುದ್ಧಿ,
[೨] ಅಶುಚಿಯಲ್ಲಿ ಶುಚಿಬುದ್ಧಿ,
[೩] ದುಃಖದಲ್ಲಿ ಸುಖಬುದ್ಧಿ,
[೪] ಅನಾತ್ಮದಲ್ಲಿ ಆತ್ಮಬುದ್ಧಿ, ಅದು ಸಹ,

**"ಅನಿತ್ಯಾಶುಚಿದುಃಖಾನಾತ್ಮಸು ನಿತ್ಯಶುಚಿಸುಖಾತ್ಮಖ್ಯಾತಿ"**

ಈ ಸೂತ್ರದಲ್ಲಿ ಪೇಳಿರುವನು. ಅನಿತ್ಯರೂಪವು ಜಗತ್ತಾಗಿರುವದು. ಅದನ್ನು ಸರ್ವ ಶ್ರುತಿ ಸ್ಮೃತಿಗಳು ಪೇಳಿರುವವು. ವಿದ್ವಾನುಗಳ ಅನುಭವಸಿದ್ಧವೂ ಆಗಿರುವದು. ಮತ್ತು ಪ್ರತ್ಯಕ್ಷಾದಿ ಪ್ರಮಾಣಗಳಿಂದಲೂ ಪ್ರಪಂಚದ ಅನಿತ್ಯತ್ವವು ಸಿದ್ಧವಾಗುವದು. ಎಂತೆಂದರೆ—

॥ ೧ ॥

೧—(೧) ಗಂಧರ್ವನಗರದಂತೆಯೂ, ಸ್ವಪ್ನದಂತೆಯೂ ದೃಷ್ಟನಷ್ಟವಾದ್ದರಿಂದ ಪ್ರತ್ಯಕ್ಷಪ್ರಮಾಣದಿಂದ ಅನಿತ್ಯ.

(೨) ಜ್ಞಾನದಿಂ ನಿವೃತ್ತಿಸಲ್ಪಡುವದ್ದರಿಂದ ರಜ್ಜುಸರ್ಪದಂತೆ ಅನುಮಾನದಿಂದಲೂ ಅನಿತ್ಯ.

(೩) "ನೇಹನಾನಾಸ್ತಿ—ನೇತಿನೇತಿ" ಇತ್ಯಾದಿ ಶ್ರುತಿರೂಪವಾದ ಶಬ್ದಪ್ರಮಾಣದಿಂದಲೂ ಅನಿತ್ಯ.

(೪) "ಸ್ವಪ್ನೋಪಮಮಿದಂ ಸರ್ವಂ" ಇತ್ಯಾದಿ ಉಪಮಾನದಿಂದಲೂ ಅನಿತ್ಯ.

(೫) ಆತ್ಮಜ್ಞಾನದಿಂದ ನಿವೃತ್ತಿಯಾಗುವದು. ನಿತ್ಯವಸ್ತುವಿಗೆ ಜ್ಞಾನದಿಂದ ನಿವೃತ್ತಿಯಾಗುವದಿಲ್ಲ; ಅದ್ದರಿಂದ ಅರ್ಥಾಪತ್ತಿಯಿಂದಲೂ ಜಗವನಿತ್ಯ.

(೬) ಪರಮಾರ್ಥವಾಗಿ ಜಗತ್ತು ನಿತ್ಯವಾಗಿದ್ದರೆ, ವ್ಯವಹಾರೀಪ್ರತೀತಿಯಂತೆ ಪರಮಾರ್ಥವಾಗಿ ತೋರುತ್ತಿರಬೇಕು. ಹಾಗೆ ತೋರುವದಿಲ್ಲವಾದಕಾರಣ ಅನುಪಲಬ್ಧಿಯಿಂದಲೂ ಪ್ರಪಂಚವನಿತ್ಯ; ಅದರಲ್ಲಿ ನಿತ್ಯತ್ವಬುದ್ಧಿಯೇ ಅವಿದ್ಯವು.

ಸುಖದುಃಖಗಳಿಗೆ ಜೀವಸೃಷ್ಟಿಯೇ ಕಾರಣವಲ್ಲದೆ ಈಶ್ವರಸೃಷ್ಟಿ ಅಲ್ಲ; ಅಹಂತಾ ಮಮತಾಧ್ಯಾಸವೂ, ಜಾಗ್ರದಾದಿ ಮೋಕ್ಷಪರ್ಯಂತವಾದ ಸರ್ವ ಸಂಸಾರವೂ ಜೀವನ ಸೃಷ್ಟಿಯೇ ಆಗಿದೆ. ಮತ್ತು ಈಕ್ಷಣಾದಿ ಪ್ರವೇಶಾಂತ ವರೆಗೂ ಈಶ್ವರ ಸೃಷ್ಟಿಯಾಗಿದೆ. ಆ ಜೀವೇಶ್ವರರ ಸೃಷ್ಟಿಯು ದ್ವೈತವಿವೇಕ ವೆಂಬ ಗ್ರಂಥದಲ್ಲಿ ಮಣಿ ಮತ್ತು ದೂರದೇಶಗಾಮಿಯಾದ ಪುತ್ರಾದಿಗಳ ದೃಷ್ಟಾಂತದಿಂದ ಸ್ಪಷ್ಟವಾಗಿ ಪ್ರತಿಪಾದನೆ ಮಾಡಲ್ಪಟ್ಟಿದೆ.

ಮತ್ತು ಜೀವದ್ವೈತದ ಅವಾಂತರ ಭೇದವು ಶಾಸ್ತ್ರೀಯ ಅಶಾಸ್ತ್ರೀಯ ವೆಂದೂ, ಅಶಾಸ್ತ್ರೀಯವೂ ಕೂಡ ಮಂದತೀವ್ರವೆಂದೂ ಅಲ್ಲಿ ಹೇಳಿರುವದು. ಇಲ್ಲಿ ವಿಸ್ತಾರಭಯದಿಂದ ಬರೆಯಲಿಲ್ಲ. ಆ ಅನರ್ಥಕರವಾದ ಜೀವದ್ವೈತವು ನಿವೃತ್ತಿಯಾಗಿ, ಈಶ್ವರಸೃಷ್ಟಿಯನ್ನು ಮಿಥ್ಯವೆಂದು ನಿಶ್ಚೈಸಿ, ಶರೀರ ಪ್ರಾರಬ್ಧ ಕ್ಷಯ ಪರ್ಯಂತರ ಬಾಧಿತಾನುವೃತ್ತಿಯಿಂದ ಶರೀರ ನಿರ್ವಾಹಕವಾದ ಲೌಕಿಕ ಮತ್ತು ವಿದ್ಯೋಪದೇಶಾದಿ ಶಾಸ್ತ್ರೀಯ ವ್ಯವಹಾರದಿಂದ ಜ್ಞಾನವುಳ್ಳವನಿಗೆ ಯಾವ ಹಾನಿಯೂ ಆಗುವದಿಲ್ಲ. ಹಾನಿಕರವಾದ ಅವಿದ್ಯವು ಜ್ಞಾನಕಾಲದಲ್ಲಿ ಬಾಧಿಸಲ್ಪಟ್ಟಿರುವದು. ಮತ್ತು ಅದರ ಕಾರ್ಯವಾದ ಪ್ರಪಂಚವು ಸೋಪಾಧಿಕ ಭ್ರಮೆಯಾಗಿರುವದ್ದರಿಂದ ಮೃಗ ತೃಷ್ಣೆಯ ಜಲದಂತೆ ಪ್ರತಿಭಾಸ ಮಾತ್ರವಾಗಿ ತೋರುತ್ತಿದ್ದರೂ, ಅದರಲ್ಲಿ ಸತ್ಯತ್ವಭ್ರಮೆಯೂ, ಅಥವಾ ನಿಜ ಸ್ವರೂಪದಲ್ಲಿ ದ್ವೈತಾಪತ್ತಿಯೂ ಜ್ಞಾನಿಗೆ ಆಗುವದಿಲ್ಲ. ಇದರಿಂದ ಏನು ಸಿದ್ಧವಾಯಿತೆಂದರೆ;—ಅಧಿಷ್ಠಾನಬ್ರಹ್ಮವು ಸಾಕ್ಷಾತ್ಕಾರವಾಗಲು ಇತರವಾದ ಸರ್ವವೂ 'ಹೇಯ' ಅಂದರೆ, ಬಾಧೆಯಾಗುವದು. ಆದಕಾರಣ ಯಾವ ಬ್ರಹ್ಮದ ಲೇಶಾನಂದದಿಂದ ವಿಶ್ವವು ಆನಂದ ಉಳ್ಳದ್ದಾಗಿರುವದೋ, ಮತ್ತು ಯಾವದರ ಸತ್ತಾಸ್ಫೂರ್ತಿಯಿಂದ ಜಗತ್ತಿಗೆ ಭಾನವಾಗುವದೋ, ಇನ್ನು ಯಾವದರಲ್ಲಿ ಸರ್ವಪ್ರಪಂಚವು ಬಾಧೆಯಂ ಪೊಂದುವದೋ, ಆ ಬಾಧಾವಧಿಯಾದ ನಿತ್ಯಪರಂ ಬ್ರಹ್ಮನಾನಾಗಿರುವೆನು.' ಇದು ಆರನೇ ಶ್ಲೋಕದ ಅರ್ಥವು. ||೬||

ಇತ್ಯನುಭವೋ(ದ್ಗಾರಾಭಿಧ) ಟೀಕಾಯಾಂ ದ್ವಿತೀಯೋಪದೇಶಃ ||೨||

---

ಅ—ಹಿಂದೆ ಜ್ಞೇಯವಸ್ತುವೆನಿಪ ಬ್ರಹ್ಮವಂ ಪ್ರತಿಪಾದಿಸಿದರು. ಅದನ್ನೇ ಈಗ ಸ್ವರೂಪಲಕ್ಷಣದಿಂದಲೂ, ತಟಸ್ಥಲಕ್ಷಣದಿಂದಲೂ ಇನ್ನು ವಿಚಾರಾಕ್ಷಮಕ್ಕೆ ಉಪಾಯಾಂತರ ಗಮ್ಯತ್ವದಿಂದಲೂ, ಈ ಶ್ಲೋಕದಲ್ಲಿ ಆಚಾರ್ಯರು ಪ್ರತಿಪಾದಿಸುವರು:—

145



|| ಶ್ರೀ ಗಣಪತಿ ಶಾರದಾ ಗುರುಭ್ಯೋನಮಃ ||

—: ಅಥತೃತೀಯ ಅನುಭೂತ್ಯುಪದೇಶಃ || ೩ || :—

—: ಅನಂತಮಿತಿ :—

ಮೂ|| ಅನಂತಂ ವಿಭುಂ ಸರ್ವಯೋನಿಂ ನಿರೀಹಂ |
ಶಿವಂ ಸಂಗಹೀನಂ ಯದೋಂಕಾರಗಮ್ಯಂ ||
ನಿರಾಕಾರ ಮತ್ಯುಜ್ವಲಂ ಮೃತ್ಯುಹೀನಂ |
ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ || ೭ ||

ಯಾವದು ಅನಂತವಾಗಿಯೂ, ವ್ಯಾಪಕವಾಗಿಯೂ, ಸರ್ವಕಾರಣವಾಗಿಯೂ, ನಿರೀಹವಾಗಿಯೂ, ಶಿವರೂಪವಾಗಿಯೂ, ಸಂಗದಿಂ ಹೀನವಾಗಿಯೂ, ಓಂಕಾರದಿಂ ಗಮ್ಯವಾಗಿಯೂ ಇರುವದೋ, ಮತ್ತು ನಿರಾಕಾರವಾಗಿ, ಅತಿ ಉಜ್ವಲವಾಗಿ, ಮೃತ್ಯುರಹಿತವಾಗಿರುವದೋ, ಆ ನಿತ್ಯಪರಂಬ್ರಹ್ಮ ನಾನಾಗಿರುವೆನು. ಇದು ಪದದ ಅರ್ಥ. || ೭ ||

|| ೧ || ಜ್ಞೇಯಬ್ರಹ್ಮದ ಸ್ವರೂಪಲಕ್ಷಣ ||

[೧] ಬ್ರಹ್ಮ ಅನಂತ ;—

ಟೀಕಾ :—ಯಾವ ಬ್ರಹ್ಮವು ‹ ಅನಂತ › ಅಂದರೆ ;— ಈಯತ್ತೆ ಇಲ್ಲದ್ದಾಗಿರುವದೋ, [ಇಷ್ಟೇಯೆಂಬ ಪ್ರಮಾಣಕ್ಕೆ ಈಯತ್ತೆಯೆಂದೆನ್ನುವರು.] ಇಲ್ಲಿ ಈಯತ್ತೆ ಅಂದರೆ, ಪರಿಚ್ಛೇದಕ್ಕೆ ಪೆಸರು. ಆ ಪರಿಚ್ಛೇದವು ಮೂರು ಬಗೆಯಾಗಿರುವದು. ಅದರ ಲಕ್ಷಣ ಪೂರ್ವದಲ್ಲಿ ಪೇಳಲ್ಪಟ್ಟಿರುವದು. ಆ ಮೂರು ಪರಿಚ್ಛೇದ ಅಂದರೆ;—‹ ಅಂತ › ಬ್ರಹ್ಮದಲ್ಲಿ ಇಲ್ಲ; ಆದ್ದರಿಂದ ಅನಂತವೆನಿಸುವದು. ಅದೆಂತೆಂದರೆ :—

ಶ್ಲೋ॥ ನವ್ಯಾಪಿತ್ವಾದ್ದೇಶತೋಂತೋ ನಿತ್ಯತ್ವಾನ್ನಾಪಿ ಕಾಲತಃ।
ನವಸ್ತುತೋಪಿ ಸರ್ವಾತ್ಮ್ಯಾದಾನಂತ್ಯಂ ಬ್ರಹ್ಮಣಿ ತ್ರಿಧಾ॥

ಇದರ ಅರ್ಥ ;—

(೧) ಬ್ರಹ್ಮವು ಸರ್ವವ್ಯಾಪಿಯಾದ್ದರಿಂದ ಅದಕ್ಕೆ ದೇಶದಿಂದಂತವಿಲ್ಲ.

(೨) ನಿತ್ಯವಾದ್ದರಿಂದ ಕಾಲದಿಂದದಕ್ಕೆ ಅಂತವಿಲ್ಲ;

(೩) ಸರ್ವಾತ್ಮವಾಗಿರುವದ್ದರಿಂದ ವಸ್ತುವಿನಿಂದಲೂ ಅದಕ್ಕೆ ಅಂತವಿಲ್ಲ ಆದಕಾರಣ ಮೂರು ಪ್ರಕಾರದಿಂದಲೂ, ಬ್ರಹ್ಮದಲ್ಲಿ ಅನಂತತ್ವವಿರುವದು.

ಯಾವದು ಅನಂತವೋ, ಅದೇ ಸತ್ಯಸ್ವರೂಪ, ಮತ್ತು ಜ್ಞಾನಸ್ವರೂಪ ವಾಗಿರುವದು. ಆದ್ದರಿಂದ ಬ್ರಹ್ಮವು ಸತ್ಯಜ್ಞಾನಾನಂತರೂಪವೆನಿಸುವದು. ಈ ಮಾತು "ಸತ್ಯಂ ಜ್ಞಾನಮನಂತಂ ಬ್ರಹ್ಮ" ಈ ಶೃತಿಯಲ್ಲಿ ಪ್ರಸಿದ್ಧವಾಗಿ ಹೇಳಿರುವದು. ಆ ಸತ್ಯಜ್ಞಾನ ಅನಂತತ್ವವು ಬ್ರಹ್ಮದ ಸ್ವರೂಪ ಲಕ್ಷಣವಾಗಿದೆ.

ಯಾವದು ಮತ್ತೊಂದರಿಂದ ವ್ಯಾವೃತ್ತಕವೆನಿಸಿ, ಸ್ವಲಕ್ಷ್ಯಕ್ಕೆ ಸ್ವರೂಪವೇ ಆಗುವದೋ, ಅದು ಸ್ವರೂಪಲಕ್ಷಣವೆನ್ನಲ್ಪಡುವದು. ಹ್ಯಾಗೆಂದರೆ— ಧವಳತ್ವಾದಿಯು ಗೃಹದ ಸ್ವರೂಪವೇ ಆದ್ದರಿಂದ ಆ ಧವಳಾದಿಯು ಗೃಹದ ಸ್ವರೂಪಲಕ್ಷಣವೆನಿಸುವಂತೆ, ಸತ್ಯಜ್ಞಾನ ಅನಂತಾದಿಗಳೂ ಕೂಡ, ಬ್ರಹ್ಮದ ಸ್ವರೂಪವೇ ಆದ್ದರಿಂದ ಸ್ವರೂಪ ಲಕ್ಷಣವೆನಿಸುವದು. ಯಾತರಿಂದ ಅಂದರೆ, ಅನೃತಾದಿಗಳ ವ್ಯಾವೃತ್ತಕವಾದ್ದರಿಂದ.

[೨] ಬ್ರಹ್ಮವಿಭು :—(ವಿಭು) ವೆಂದರೆ, ವ್ಯಾಪಕರೂಪವಾದದ್ದು. ಮತ್ತು ಆ ಬ್ರಹ್ಮವು,

॥ ೨ ॥ ಬ್ರಹ್ಮದ ತಟಸ್ಥಲಕ್ಷಣ :—

[೩] (ಸರ್ವಯೋನಿಂ) ಅಂದರೆ—ಸರ್ವಪ್ರಪಂಚಕ್ಕೆ ಕಾರಣವಾಗಿರುವದು. ಈ ಮಾತು—

ಬ್ರ॥ ಸೂ—ಜನ್ಮಾದ್ಯಸ್ಯಯತಃ ॥

ಅಂದರೆ, ಯಾವ ಬ್ರಹ್ಮದಿಂದ ಈ ಜಗತ್ತಿಗೆ ಜನ್ಮಾದಿಗಳಾಗುವವೋ, ಈ ವ್ಯಾಸಸೂತ್ರದಲ್ಲಿಯೂ, ಮತ್ತು "ಯತೋವಾ ಇಮಾನಿ ಭೂತಾನಿ ಜಾಯಂತೆ" ಅಂದರೆ, ಯಾವ ಬ್ರಹ್ಮದಿಂದ ಈ ಭೂತಪ್ರಾಣಿಗಳು

ಭೃಟ್ಟುವವೋ, ಇತ್ಯಾದಿ ಶೃತಿಗಳಲ್ಲಿಯೂ, ಬ್ರಹ್ಮಕ್ಕೆ ಜಗತ್ತಿನ ಕಾರಣವನ್ನು ಪ್ರಸಿದ್ಧವಾಗಿ ಪೇಳಿರುವದು.

ಹ್ಯಾಗೂ ಶುದ್ಧಬ್ರಹ್ಮದಲ್ಲಿ ಕಾರಣತ್ವವಂ ಪೇಳಲು ಅಸಂಭವವೆನಿಸು ವದು. ಹಾಗಾದರೂ ಶಬಲಬ್ರಹ್ಮದಲ್ಲಿ ಆ ಕಾರಣತ್ವ ಸಂಭವಿಸುವದು; ಅದು ಒಂದು ಉಪಾದಾನಕಾರಣ.

ಮತ್ತೊಂದು ನಿಮಿತ್ತಕಾರಣ, ಈ ಭೇದದಿಂದ ಎರಡು ಬಗೆಯಾಗಿರು ವದು, ಅದರಲ್ಲಿ

೧—ಯಾವದು ಕಾರ್ಯದಲ್ಲಿ ಪ್ರವೇಶಿಸುವದೋ, ಅದನ್ನು ಉಪಾದಾನ ಕಾರಣವೆನ್ನುವರು. ಎಂತೆಂದರೆ;—ಘಟವಾಗುವ ಕಾರ್ಯದಲ್ಲಿ ಮೃತ್ತಿಕೆಯ ಪ್ರವೇಶವಿರುವದರಿಂದ ಮೃತ್ತಿಕೆ ಉಪಾದಾನ ಕಾರಣವೆನಿಸುವದು.

೨—ಯಾವದು ಕಾರ್ಯದಲ್ಲಿ ಪ್ರವೇಶಿಸದೆ ತಟಸ್ಥವಾಗಿದ್ದು ಕಾರ್ಯ ವನ್ನು ರಚಿಸುವದೋ, ಅದನ್ನು ನಿಮಿತ್ತಕಾರಣವೆನ್ನುವರು. ಎಂತೆಂದರೆ;— ಘಟದ ಕಾರ್ಯದಲ್ಲಿ ಕುಲಾಲನು ನಿಮಿತ್ತಕಾರಣನಾಗಿರುವನು.

ಇಲ್ಲಿ ಜಗತ್ತಿಗೆ ಉಪಾದಾನ, ನಿಮಿತ್ತ ಎರಡು ಪ್ರಕಾರದಿಂದಲೂ ಒಬ್ಬ ಪರಮೇಶ್ವರನೇ ಕಾರಣನಾಗಿರುವನು. ಹ್ಯಾಗೆ ಬಲೆಯ ರಚನೆಗೆ ಉಪಾದಾನ, ನಿಮಿತ್ತವೆರಡು ಒಂದು ನೇಯಿಗೆ ಹುಳುವಾಗಿರುವದೋ, ಮತ್ತು ಮುಖ್ಯ ದೃಷ್ಟಾಂತ ಸ್ವಪ್ನಕ್ಕೂ ಇರುವದೋ, ಹಾಗೆ ಜಗತ್ತಿಗೆ ಉಪಾದಾನ ನಿಮಿತ್ತ ವೆರಡೂ ಒಬ್ಬ ಈಶ್ವರನಾಗಿರುವನು. ಅವನು ಮಾಯೆಯಿಂದ ಉಪಾದಾನನೂ ಮತ್ತು ಚೇತನದಿಂದ ನಿಮಿತ್ತನೂ ಆಗಿರುವನು. ಅಲ್ಲಿ ಶೃತಿ—

"ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಂ" ಇದರ ಅರ್ಥ—ಮಾಯೆಯನ್ನು ಉಪಾದಾನವೆಂದು ತಿಳಿಯಬೇಕು. ಮಾಯಾಪತಿಯನ್ನು 'ಮಹೇಶ್ವರ' ಅಂದರೆ, ನಿಮಿತ್ತನೆಂದು ತಿಳಿಯಬೇಕು. ಬಳಿಕ

೧—ಸಾಂಖ್ಯಶಾಸ್ತ್ರದವರು ಯಾವ ಕೇವಲ ಪ್ರಧಾನವನ್ನು ಜಗತ್ತಿಗೆ ಕಾರಣವೆಂದು ಪೇಳಿರುವರೋ, ಅದನ್ನು ಸೂತ್ರಕಾರರು (ವ್ಯಾಸರು) ಭಾಷ್ಯ ಕಾರರು (ಶಂಕರಾಚಾರ್ಯರು) ಖಂಡನೆಯಂ ಮಾಡಿರುವರು.

ಮತ್ತು "ಸತ್ಯಾನೃತೇ ಮಿಥುನೀಕರೋತಿ" ಈ ಶೃತಿಯು ಸತ್ಯಪರಮಾ, ಅನೃತಮಾಯಾ, ಮಿಥುನಾ-ಜಗತ್ತಿಗೆ ಕಾರಣವೆಂದು ಪೇಳಿರುವದು.

ಚೇತನದ ಸತ್ತೆಯಂ ಪೊಂದಿದ ತಮಃಪ್ರಾಧಾನವಾದ ಮಾಯೆಯಿಂದ ಮೊದಲು ಶಬ್ದಗುಣ ಸಹಿತವಾದ ಆಕಾಶ ಉಂಟಾದುದು. ಅದರಿಂದ ವಾಯು, ಅದರಿಂದ ಅಗ್ನಿ, ಅದರಿಂದ ಜಲ, ಆ ಜಲದಿಂದ ಪೃಥ್ವಿ. ಈ ಪಂಚ ಭೂತಗಳು ಗುಣಸಹಿತವಾಗಿ ಪುಟ್ಟಿರುವವು. ಆ ಪಂಚ ಭೂತಗಳಿಂದ ಸೂಕ್ಷ್ಮ ಸ್ಥೂಲ ಸೃಷ್ಟಿ ಕ್ರಮವಾಗಿ ಉಂಟಾದವು. ಈ ರೀತಿಯಾಗಿ ಈಶ್ವರನಿಂದ ಜಗತ್ತಿನ ಉತ್ಪತ್ತಿಯು ಶಾಸ್ತ್ರಗಳಲ್ಲಿ ಪೇಳಿರುವದು. ಆದ್ದರಿಂದ ವಿಶ್ವಕ್ಕೆ ಶಬಲ ಬ್ರಹ್ಮ ಕಾರಣವಾಗಿದೆ. ಮತ್ತು

೨—ಇತರರಾದ ಯಾವ ಕಾರಣ ವಾದಿಗಳು ಜಗತ್ಕಾರಣವನ್ನು ವಿವಿಧವಾಗಿ ಕಲ್ಪಿಸಿರುವರೋ, ಅಂದರೆ ;—

(೧) ಅಭಾವವೆಂದು ಕೆಲವರು,
(೨) ಅಸತ್ತೆಂದು ಕೆಲವರು,
(೩) ಶೂನ್ಯವೆಂದು ಕೆಲವರು,
(೪) ಪ್ರಧಾನವೆಂದು ಕೆಲವರು,
(೫) ಪರಮಾಣುವೆಂದು ಕೆಲವರು,
(೬) ಕರ್ಮವೆಂದು ಕೆಲವರು,
(೭) ಕಾಲವೆಂದು ಕೆಲವರು,
(೮) ಕಾಲಾದಿ ಸಂಯೋಗವೆಂದು ಕೆಲವರು,
(೯) ಅಸಂಗಪುರುಷನೆಂದು ಕೆಲವರು,
(೧೦) ಏದೃಚ್ಛೆ ಎಂದು ಕೆಲವರು,
(೧೧) ಕೆಲವರು ಪಂಚಭೂತ ಮೊದಲಾಗಿ, ಅಂಗೀಕರಿಸಿರುವರೋ, ಆ ಸರ್ವಮತವೂ ಅಸಂಗತವೆನಿಸುವದು. ಎಂತೆಂದರೆ ;—

೧—ಅಭಾವದಿಂದ ಕಾರ್ಯವಾಗುವದಿಲ್ಲ ; ಮತ್ತೇನೆಂದರೆ, ಲೋಕದಲ್ಲಿ ಭಾವರೂಪವಾದ ಮೃತ್ತಿಕಾದಿಗಳಿಂದಲೇ ಘಟಾದಿಕಾರ್ಯಗಳ ಉತ್ಪತ್ತಿಯು ಕಾಣ್ಬರುವದು. ಇದರಿಂದ ಅಭಾವ ವಾದದಲ್ಲಿ ಪ್ರತ್ಯಕ್ಷ ವಿರೋಧ ದೋಷವುಂಟು.

೨—ಅಸತ್ತಾದ ವಂಧ್ಯಾಪುತ್ರಾದಿಗಳಿಂದ ಸಂತತಿಯಾಗುವದಿಲ್ಲ, ಇದರಿಂದ ಅಸದ್ವಾದವು ಅಸಂಗತ.

೩—ಶೂನ್ಯವು ನಿಸ್ತತ್ವವಾದ್ದರಿಂದ ಕಾರ್ಯದ ಉತ್ಪತ್ತಿ ಸರ್ವಥಾ ಸಂಭವಿಸುವದಿಲ್ಲ; ಇದರಿಂದ ಶೂನ್ಯವಾದವು ಅಸಂಗತ.

೪—ಪ್ರಧಾನ ಜಡವಾದ್ದರಿಂದ ಅದರಲ್ಲಿ ನಿರಪೇಕ್ಷ ಕಾರ್ಯದ ಉತ್ಪತ್ತಿ ಸಂಭವಿಸುವದಿಲ್ಲ.

೫—ಜಡವಾದ ಪರಮಾಣುಗಳಿಗೆ ಸಂಯೋಗದ ಅಸಂಭವದಿಂದ ಅದರಲ್ಲಿ ಕಾರಣಕಲ್ಪನೆ ಅಸಂಗತವೆನಿಸುವದು.

೬—ಕರ್ಮವು ಸ್ವತಃ ಜಡವಾದ್ದರಿಂದ ಅದರಿಂದ ನಿರಪೇಕ್ಷ ಕಾರ್ಯವಾಗುವದಿಲ್ಲ. ಇದರಿಂದ ಕರ್ಮವಾದವು ಅಸಂಗತವೇ.

೭—ಕಾಲಕ್ಕೆ ಕಾರಣತ್ವಾಂಗೀಕಾರದಿಂದ ಸರ್ವದಾ ಸೃಷ್ಟಿ ಆಗಬೇಕು? ಅದು ಕಾಣಲ್ಪಡುವದಿಲ್ಲ; ಆದ್ದರಿಂದ ಕಾಲವಾದ ಅಸಂಗತವು.

೮—ಕಾಲಾದಿಗಳು ಸ್ವಭಾವದಿಂದಲೇ ಜಡವಾಗಿರುವದ್ದರಿಂದ ಅವಕ್ಕೆ ನಿರಪೇಕ್ಷ ಸಂಗಾದಿಗಳು ಇಲ್ಲದಕಾರಣ ಕರ್ಮೋತ್ಪಾದನತ್ವ ಸಂಭವಿಸುವದಿಲ್ಲ; ಆದ್ದರಿಂದ ಕಾಲಾದಿ ಸಂಯೋಗವಾದ ಅಸಂಗತವು.

೯—ಪುರುಷನು ಅಸಂಗನಾದ್ದರಿಂದ ಅವನಲ್ಲಿ ಕಾರ್ಯಜನನ ವ್ಯಾಪಾರ ಸಂಭವಿಸುವದಿಲ್ಲ; ಇದರಿಂದ ಪುರುಷವಾದ ಅಸಂಗತ. ಮತ್ತು ಜೀವನಿಗೆ ಸರ್ವಜ್ಞತ್ವ ಸ್ವತಂತ್ರಾದಿಗಳಿಲ್ಲದ್ದರಿಂದ ಜಗತ್ತನ್ನು ರಚಿಸುವದರಲ್ಲಿ ಸಾಮರ್ಥ್ಯವಿಲ್ಲ. ಆದರೆ, ಸರ್ವಜ್ಞನಾಗಿ, ಸ್ವತಂತ್ರನಾಗಿ ಇರುವವನಿಂದಲೇ ಜಗತ್ತಿನ ಉತ್ಪತ್ತಿ ಸಂಭವಿಸುವದು. ಆದ್ದರಿಂದ ಜೀವವಾದ ಅಸಂಗತ.

೧೦—ಧರ್ಮಾನಿರಪೇಕ್ಷವು, ಕೇವಲ ಧರ್ಮದಿಂದ ಕಾರ್ಯೋತ್ಪಾದನವಾಗದು; ಆದ್ದರಿಂದ ಯದೃಚ್ಛಾವಾದ ಅಸಂಗತ.

೧೧—ಭೂತಗಳಿಗೆ ಕಾರ್ಯತ್ವವೂ, ಜಡತ್ವವೂ ಇರುವದ್ದರಿಂದ ನಿರಪೇಕ್ಷ ಕಾರ್ಯೋತ್ಪಾದನ ಸಂಭವಿಸುವದಿಲ್ಲವಾಗಿ, ಭೂತವಾದವೂ ಅಸಂಗತವೇ ಆಗಿದೆ. ಹೀಗೆ ಜಗತ್ತಿನ ಕಾರಣವಾದಗಳಲ್ಲಿ ಇನ್ನೂ ಅನೇಕ ದೋಷಗಳನ್ನು ಸಿದ್ಧಾಂತ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಿರುವದು. ಆದ್ದರಿಂದ ಇಲ್ಲಿ ಏನು ಸಿದ್ಧವಾಯಿತೆಂದರೆ:—ಜಗತ್ತಿಗೆ ಒಬ್ಬ ಪರಮೇಶ್ವರನೇ ಕಾರಣನೆಂಬುದು ಸಿದ್ಧವಾಯಿತು.

ಶ್ರೀ—ಮತ್ತು ಶ್ವೇತಾಶ್ವತರೋಪನಿಷತ್ತಿನಲ್ಲಿಯೂ,

ಕಾಲ ೧, ಸ್ವಭಾವ ೨, ನಿಯತಿ ೩, ಎದೃಚ್ಛಾ ೪, ಭೂತಪಂಚಕ ೫, ಪ್ರಧಾನ ೬, ಜೀವ ೭, ಈ ಏಳರಲ್ಲಿ ಕಾರಣತ್ವವನ್ನು ನಿಷೇಧಪಡಿಸಿ, ಮಾಯಾಶಕ್ತಿಯುಳ್ಳ ಪರಮಾತ್ಮನೇ ಜಗತ್ತಿಗೆ ಕಾರಣನೆಂದು ಪೇಳಿರುವದು. ಆದ್ದರಿಂದ ಬ್ರಹ್ಮವು ಸರ್ವಕ್ಕೂ ಯೋನಿಯೆಂದು ಇಲ್ಲಿ ಪೇಳಿರುವದು. ಅದರಿಂದ ಬ್ರಹ್ಮದ ತಟಸ್ಥಲಕ್ಷಣವನ್ನು ತೋರಿಸಿದರು.

(ಟಿ) ಯಾವ ಲಕ್ಷಣವು ಲಕ್ಷ್ಯದ ಯಾವದೋ ಒಂದು ಸ್ಥಾನದಲ್ಲಿ ಮತ್ತು ಯಾವಾಗಲಾದರೂ ಇದ್ದುಕೊಂಡು ತನ್ನ ಲಕ್ಷ್ಯಕ್ಕೆ ಅನ್ಯಗಳಿಂದ ಭಿನ್ನಪಡಿಸಿ ತೋರಿಸುವದೋ, ಅದು 'ತಟಸ್ಥಲಕ್ಷಣ' ವೆನಿಸಿಕೊಳ್ಳುವದು. ಎಂತೆಂದರೆ—'ಕಾಗೆಯುಳ್ಳದ್ದು ದೇವದತ್ತನ ಗೃಹವು.' ಎನ್ನುವಲ್ಲಿ ಇಲ್ಲಿ ಕಾಕಪಕ್ಷಿಯು, ಗೃಹದ ಯಾವದೋ, ಒಂದೆಡೆಯಲ್ಲಿ ಮತ್ತು ಯಾವದೋ, ಒಂದು ಕಾಲದಲ್ಲಿ ಇದ್ದು, ಇತರರಾದ ಯಜ್ಞದತ್ತಾದಿಗಳ ಗೃಹದಿಂದ ದೇವದತ್ತನ ಗೃಹವನ್ನು ಭಿನ್ನಪಡಿಸಿ ತೋರಿಸುವದು. ಇದರಿಂದ ಕಾಗೆಯು ಗೃಹಕ್ಕೆ ತಟಸ್ಥಲಕ್ಷಣವಾಗಿದೆ.

೪—ನ್ಯಾಯಮತದಲ್ಲಿ ಹ್ಯಾಗೆ ಗಂಧವುಳ್ಳದ್ದು ಪೃಥ್ವಿ ಎನಿಸುವದೋ. ಇಲ್ಲಿ ಗಂಧವು ಪೃಥ್ವಿಯ ತಟಸ್ಥಲಕ್ಷಣವಾಗಿದೆ. ಹಾಗೆ ಯಾವದು ಜಗತ್ತಿನ ಕಾರಣವೋ ಅದು ಬ್ರಹ್ಮವು. ಇಲ್ಲಿ ಜಗತ್ತಿನ ಕಾರಣತ್ವವು ಬ್ರಹ್ಮದ ತಟಸ್ಥಲಕ್ಷಣವೆನಿಸುವದು. ಹ್ಯಾಗೆಂದರೆ ;—ಕಾರಣತ್ವವು ಜಗತ್ತಿನ ಉತ್ಪತ್ತಿಕಾಲದಲ್ಲಿರುವದು. ಮತ್ತು ಎಷ್ಟು ಅಂಶದಲ್ಲಿ ಮಾಯೆಯ ಕಲ್ಪನೆಯುಂಟೋ, ಅಷ್ಟು ದೇಶದಲ್ಲಿ ಇರುವದು. ಹ್ಯಾಗೆ ಪೃಥ್ವಿಯ ಯಾವದೋ, ಒಂದೆಡೆಯಲ್ಲಿ ಘಟೋತ್ಪತ್ತಿಗೆ ಯೋಗ್ಯವಾದ ಮೃತ್ತಿಕೆ ಇರುವದಲ್ಲದೆ ಎಲ್ಲಾ ಕಡೆಯೊಳಗೆ ಇಲ್ಲವೋ, ಹಾಗೆ ಸರ್ವತ್ರ ಬ್ರಹ್ಮದಲ್ಲಿ ಕಾರಣತ್ವವಿರುವದಿಲ್ಲ. ಮತ್ತು ಅದು ಇತರ ಪ್ರಧಾನಾದಿ ಕಾರಣಗಳಂ ಬೇರ್ಪಡಿಸಿ ಅವುಗಳಿಂ ಭಿನ್ನವಾದ ಸ್ವಲಕ್ಷ್ಯಬ್ರಹ್ಮವನ್ನು ತಿಳಿಯಪಡಿಸುವದು. ಇದರಿಂದ "ಜಗದ್ಯೋನಿತ್ವ" ವು ಬ್ರಹ್ಮದ ತಟಸ್ಥಲಕ್ಷಣವಾಗಿದೆ. ಅದನ್ನು ಮಂದಬುದ್ಧಿಯುಳ್ಳ ಪುರುಷರ ಬೋಧಾರ್ಥವಾಗಿ ಪರಮದಯಾಳುವಾದ ಆಚಾರ್ಯರು ಇಲ್ಲಿ ತೋರಿಸಿದರು. ಮತ್ತು

೫—ಪರಮಾರ್ಥವಾಗಿ ಬ್ರಹ್ಮದಲ್ಲಿ ಜಗದ್ಯೋನಿತ್ವವಾಗಲಿ, ಅಥವಾ ಸರ್ವಜ್ಞತ್ವಾದಿ ಧರ್ಮಗಳಾಗಲಿ ಯಾವದೂ ಇಲ್ಲ; ಮತ್ತೇನೆಂದರೆ ;—

ಮಾಯೆಯಿಂದ ಆರೋಪಿತವಾಗಿರುವದು. ಅದನ್ನು ಪೇಳುವರು-“**ಮಾಯೋಪಾಧಿ ಜಗದ್ಯೋನಿಃ ಸರ್ವಜ್ಞತ್ವಾದಿಲಕ್ಷಣಃ**” ಇದರ ಅರ್ಥಸ್ಪಷ್ಟವೇ ಇದೆ. ಹೀಗೆ ಅಂಶಕಲ್ಪನೆಯೂ, ಈಕ್ಷಣೆಯೂ, ಪ್ರವೇಶತ್ವ, ನಿಯಾಮಕತ್ವಾದಿ ಎಲ್ಲಾ ಧರ್ಮವೂ ಮಾಯಾಕಲ್ಪಿತವಾಗಿರುವವು. ಮತ್ತು

೬—ತೈತ್ತಿರೀಯೊಪನಿಷತ್ತಿನಲ್ಲಿ ಯಾವ ಕಾಮನಾ, ಲೋಕಜನ ಸೃಷ್ಟತ್ವಭೋಗ್ಯಾಕಾರ ಪರಿಣಾಮ ಪರಮಾತ್ಮನಲ್ಲಿ ಪೇಳಿರುವದೋ, ಅದು ಸತ್ಯತ್ವ ಜ್ಞಾಪಕಕ್ಕೆ ಹೇತುವಾಗಿರುವದು. ಅಲ್ಲದೆ ಆ ಧರ್ಮ ಉಳ್ಳವನೆಂದು ಪೇಳುವದರಲ್ಲಿ ತಾತ್ಪರ್ಯವಿಲ್ಲ; ವಸ್ತುತಃ ಸತ್ತಾಸ್ಫೂರ್ತಿಯಂ ಕೊಡುವದು ಏನಃ ಇತರವಾದ ಯಾವ ಐಶ್ವರ್ಯವೂ ಅದರಲ್ಲಿ ಸಂಭವಿಸುವದಿಲ್ಲ; ಅಲ್ಲಿ ಹೇತುವನ್ನು ಪೇಳುವರು.

[೪] ಬ್ರಹ್ಮನಿರೀಹ;—(ನಿರೀಹಮಿತಿ) ಈಹ ಎಂದರೆ, ಚೇಷ್ಟೆಗೆ ಪೆಸರು. ಆದರಿಂದ ಬ್ರಹ್ಮರಹಿತವಾಗಿರುವದು. ಯಾಕೆಂದರೆ—“**ಯದ್ಯದ್ಧಿ ಕುರುತೇಜಂತು ಸ್ತತ್ತತ್ಕಾಮಸ್ಯಚೇಷ್ಟಿತಂ**” ಈ ನ್ಯಾಯದಿಂದ, ಜೀವರುಗಳಿಗೆ ಕಾಮಮೂಲಕವೇ, ಚೇಷ್ಟೆ ಎಂದು ಪೇಳಿರುವರು. ಮತ್ತು “ಆಪ್ತಕಾಮಸ್ಯಕಾಸ್ಪೃಹಾ” ಈ ನ್ಯಾಯದಿಂದ ಪರಮಾತ್ಮನಲ್ಲಿ ಆಪ್ತಕಾಮತೆಯಿಂ ಸ್ಪೃಹೆಗೆ ಅಭಾವವಂ ಪೇಳಿರುವರು. ಆದ್ದರಿಂದ ಬ್ರಹ್ಮ ನಿರೀಹವೆನಿಸುವದು. ಮತ್ತು ಸರ್ವಭೂತಗಳ ಅಭಿಲಾಷೆಯೂ, ಚೇಷ್ಟೆಯೂ ಕೂಡ, ದುಃಖದ ನಿವೃತ್ತಿ ನಿಮಿತ್ತವಾಗಿಯೂ, ಸುಖದ ಪ್ರಾಪ್ತಿಯ ನಿಮಿತ್ತವಾಗಿಯೂ ಆಗುವದು. ಇನ್ನು ಬ್ರಹ್ಮದಲ್ಲಿಯೋ ದುಃಖದ ಲೇಶವೂ ಇಲ್ಲ; ಆದ್ದರಿಂದ ಸದಾ ಆನಂದಸ್ವರೂಪವಾಗಿರುವದು. ಅದನ್ನು ಈಗ ಐದನೇ ವಿಶೇಷಣದಿಂದ ಆಚಾರ್ಯರು ಪೇಳುತ್ತಾರೆ;—

## [೫] ಬ್ರಹ್ಮಮಂಗಳ ಸ್ವರೂಪ.

(ಶಿವಮಿತಿ) ಶಿವ ಎಂದರೆ. ಮಂಗಲಕ್ಕೆ ಪೆಸರು. ಇದನ್ನು ಕಲ್ಯಾಣವೆಂದು ಪೇಳುವರು. ಆ ಬ್ರಹ್ಮವು ಪರಮಮಂಗಳರೂಪವು. ಅಲ್ಲಿ ಶೃತಿ “ಬ್ರಹ್ಮತನ್ಮಂಗಳಂವಿದುಃ” ಎಂತಲೂ, ಸ್ಮೃತಿ “ಮಂಗಳಾನಾಂಚಮಂಗಳಂ” ಎಂತಲೂ ಪೇಳಿರುವದು. ಇದಕ್ಕೆ ಆ ಬ್ರಹ್ಮವನ್ನು ಮಂಗಳರೂಪವೆಂದು ಮುನಿಯು ತಿಳಿಯುತ್ತಾನೆ. ಮತ್ತು ಮಂಗಳಗಳಿಗೆ ಮಂಗಳವೆಂದರ್ಥ.

ಶಂಕಾ, ಸಮಾಧಾನ—ಯಾವನ್ಹಾದರು ಕೈಲಾಸವಾಸಿಯು 'ಶಿವ' ಎಂದು ಪೇಳಲ್ಪಡುವನೆಂದರೆ;—ಅದನ್ನು ಕೇಳು. ಹ್ಯಾಗೂ ಅದರ ವಿಗ್ರಹಕ್ಕೆ 'ಶಿವ' ಎಂದು ನಾಮವಿಟ್ಟಿರುವರು. ಆದಾಗ್ಯೂ ಆ ವಿಗ್ರಹವು ದೇಶಪರಿಚ್ಛೇದ ಉಳ್ಳದ್ದಾದ್ದರಿಂದ ಶಿವರೂಪವಲ್ಲ ; ಮತ್ತೇನೆಂದರೆ, ಮೂರ್ತಿಯು ಮಾಯಾರಚಿತವೆಂದು ಶಾಸ್ತ್ರದಲ್ಲಿ ಪೇಳಿರುವದು, ಆದ್ದರಿಂದ ಅದರ ನಿಜಸ್ವರೂಪವಾದ ಯಾವ ವ್ಯಾಪಕವುಂಟೋ, ಅದೇ ಶಿವರೂಪವು. ಅಲ್ಲಿ ಶೃತಿ,

" ಸರ್ವವ್ಯಾಪೀಸಭಗವಾನ್ ತಸ್ಮಾತ್ಸರ್ವಗತಃಶಿವಃ "

ಅರ್ಥ—ಆ ಭಗವಂತನು ಸರ್ವವ್ಯಾಪಿಯಾದ್ದರಿಂದ ಸರ್ವಗತ ಶಿವನಾಗಿರುವನು.

ಮತ್ತು ವಾಸಿಷ್ಠಗ್ರಂಥದಲ್ಲಿ ಸ್ವಮುಖದಿಂದಲೇ ಮಹಾದೇವನು ತನ್ನ ನಿರವಯವ ವ್ಯಾಪಕಸ್ವರೂಪವು ಪರಮಪೂಜ್ಯವೆಂದು ಪೇಳಿರುವನು.

ಇನ್ನು ಪುರಾಣಗಳಲ್ಲಿ ಅದರ ಮೂರ್ತಿಗೆ ಅದ್ಭುತಮಹಿಮೆಯಂ ಪೇಳಿರುವದು, ಅದು ಅದರ ಧ್ಯಾನವಂ ಮಾಡುವಂಥಾವರಿಗೆ, ಪರಮತತ್ವದ ಪ್ರಾಪ್ತಿಗೆ ಕಾರಣವಾಗುವದು. ಆದ್ದರಿಂದ ವಿಗ್ರಹಕ್ಕೆ ಪರಮೇಶ್ವರತ್ವವಂ ಪೇಳಿರುವರು. ಮತ್ತು ಕೈವಲ್ಯಶಾಖೆಯಲ್ಲಿಯೂ, ಧ್ಯಾನಕ್ಕೆ ಉತ್ಕೃಷ್ಟವಾದ್ದೆಂದು, ಪೇಳಿರುವದು. ಆದಾಗ್ಯೂ ಅದರ ನಿಜಸ್ವರೂಪವೇ ಶಿವರೂಪವೆಂದು ಪೇಳುವದರಲ್ಲಿ ತಾತ್ಪರ್ಯ. ಅದೇ ಬ್ರಹ್ಮವೆನಿಸುವದು.

ಶಂಕಾ :—ಆ ಬ್ರಹ್ಮವು ಶಿವರೂಪವಾಗಿರಲಿ, ಆದರೂ ಸರ್ವಾಂತರ ವ್ಯಾಪಕವಾದ್ದರಿಂದ ಸಂಗೀಯಾದೀತು ? ಅಂದರೆ;—ಆಚಾರ್ಯರು ಪೇಳುತ್ತಾರೆ.

## [೬] ಬ್ರಹ್ಮ ಅಸಂಗ.

**ಸಮಾಧಾನ:**—(ಸಂಗಹೀನಮಿತಿ) ಸಂಗಹೀನಂ-ಅಂದರೆ, ಆ ಬ್ರಹ್ಮವು ಅಸಂಗಿವಾಗಿರುವದು. ಯಾವದರೊಡನೆಯು ಅದಕ್ಕೆ ಸಂಗವಿಲ್ಲ; ಆದಕಾರಣ ಸಂಗಜನ್ಯವಿಕಾರದಿಂದಲೂ, ನಾಶದಿಂದಲೂ, ರಹಿತವಾಗಿರುವದು. ಎಂತೆಂದರೆ—ಸಂಗವೆರಡುಬಗೆಯಾಗಿರುವದು.

(೧) ಪ್ರತ್ಯಾಸತ್ತಿ ಎಂದು,

(೨) ಸಂಯೋಗಾದಿ ಎಂದು—

೧—ಆ ಎರಡು ಜಡಪದಾರ್ಥಗಳಲ್ಲಿ ಸಂಭವಿಸುವದು. 'ಪ್ರತಿ' ಅಂದರೆ, ಅಭಿಮುಖತ್ವದೊಡನೆ, 'ಆಸತ್ತಿ' ಅಂದರೆ, ಲಾಭ. ಅದಕ್ಕೆ ಪ್ರತ್ಯಾಸತ್ತಿ ಎಂದು ಪೆಸರು. ತಾತ್ಪರ್ಯವೇನಂದರೆ;—ಇತರ ಪ್ರತಿಗುಣೀಭಾವತ್ವದ ಪೆಸರು ಪ್ರತ್ಯಾಸತ್ತಿಯಾಗುವದು. ಎಂತೆಂದರೆ:—ಅಗ್ನಿಸಂಗದಿಂದ ಜಲಕ್ಕೆ ಉಷ್ಣತ್ವದಿಂ ವನ್ಹ್ಯಾತ್ಮಕವಾಗುವದು. ಅದು ಸಜಾತೀಯ, ವಿಜಾತೀಯ, ಸ್ವಗತಸಂಬಂಧ ದಿಂ ಫಲಕಾಲಿಯಾಗುವದು. ಬ್ರಹ್ಮವು ಸಜಾತೀಯಾದಿ ರಹಿತವಾಗಿದೆ.

೨—ಸಂಯೋಗಾದಿ ಸಂಬಂಧವೂ ಕೂಡ, ದ್ರವ್ಯಪದಾರ್ಥಗಳಲ್ಲಿ ಸಂಭವಿಸುವದು. ಅದು ನ್ಯಾಯರೀತಿಯಲ್ಲಿ

೧—ಸಂಯೋಗ,

೨—ಸಮವಾಯ,

೩—ತಾದಾತ್ಮ್ಯ: ಈ ಭೇದದಿಂದ ಮೂರು ಪ್ರಕಾರವಾಗಿರುವದು.

೧—ಅವಚ್ಛೇದಕ ಭೇದದಿಂದ ಸ್ವಾತ್ಯಂತಾಭಾವಾಧಿಕರಣ ವೃತ್ತಿಸಂಯೋಗ ಸಂಬಂಧವೆನಿಸುವದು. ಅದಾದರೂ,

(೧) ಅನ್ಯೋನ್ಯ,

(೨) ಅನ್ಯತರ,

(೩) ಸಂಯೋಗಜ ಸಂಯೋಗ.

(೪) ಸಹಜಸಂಯೋಗ—ಈ ಭೇದದಿಂದ ನಾಲ್ಕು ವಿಧವಾಗಿ ಗ್ರಹಿಸಿರುವರು. ಮತ್ತು

೨—ನಿತ್ಯ ಏಕ ಅನೇಕ ದ್ರವ್ಯಕ್ಕೆ ಸಮವೇತಸಮವಾಯ ಸಂಬಂಧವಂ ಪೇಳಿರುವರು. ಅದೂ ಕೂಡ,

[೧] ಜಾತಿ ವ್ಯಕ್ತಿ,

[೨] ಗುಣ ಗುಣಿ,

[೩] ಕ್ರಿಯಾಕ್ರಿಯಾವಂತನಿಗೆ.

[೪] ಕಾರ್ಯಕಾರಣ—ಈ ಭೇದದಿಂದ, ಸಮವಾಯ ಚತುರ್ವಿಧವೆಂದು ಗ್ರಹಿಸಿರುವರು. ಇಲ್ಲಿ ಕಾರಣ ಪದದಿಂದ ಉಪಾದಾನಕಾರಣವೆಂದು ತಿಳಿಯಬೇಕು. ಮತ್ತು

೩—ಎರಡು ಪದಾರ್ಥಗಳಿಗೆ ಪರಸ್ಪರ ಅಭೇದದ ತೋರಿಕೆಯು ತಾದಾತ್ಮ್ಯ ಸಂಬಂಧವೆನಿಸುವದು. ಅದು ಸಹ

(೧) ಮುಖ್ಯ,

(೨) ಕಲ್ಪಿತಭೇದದಿಂದ, ಎರಡು ಪ್ರಕಾರವಾಗಿರುವದು. ಅದರಲ್ಲಿ—

೧—ಅಗ್ನಿಗೂ ಲೋಹಕ್ಕೂ ಮುಖ್ಯ ತಾದಾತ್ಮ್ಯ ವಾಗುವದು.

೨—ರಜ್ಜುವಿಗೂ ಸರ್ಪಕ್ಕೂ ಕಲ್ಪಿತತಾದಾತ್ಮ್ಯ ವಾಗುವದು.

ಆ ಕಲ್ಪಿತ ತಾದಾತ್ಮ್ಯವನ್ನು ಮಿಥ್ಯಾತಾದಾತ್ಮ್ಯವೆನ್ನುವರು. ಆ ಮಿಥ್ಯಾತಾದಾತ್ಮ್ಯವನ್ನು ಬ್ರಹ್ಮ ಮತ್ತು ಪ್ರಪಂಚಕ್ಕೆ ಅಂಗೀಕರಿಸಿದರೆ, ಅದರಿಂದ ಅಸಂಗತ್ವಕ್ಕೆ ನಿಜವಾಗಿ ಯಾವ ಹಾನಿಯೂ ಆಗುವದಿಲ್ಲ;

ಮತ್ತು ಇತರವಾದ ಮೂರು ಸಂಬಂಧಗಳಿಗೆ, ಬ್ರಹ್ಮದಲ್ಲಿ ಸಂಭವವಿಲ್ಲ. ಯಾಕೆಂದರೆ:—ಅದು ನಿರವಯವವಾಗಿಯೂ, ದ್ರವ್ಯ, ಗುಣ, ಕ್ರಿಯಾಜಾತ್ಯಾದಿಗಳಿಂ ರಹಿತವಾಗಿಯೂ ಇರುವದು. ಈ ಮಾತು "**ನಿಷ್ಕಲಂ ನಿಷ್ಕ್ರಿಯಂ ಶಾಂತಂ-ಕೇವಲೋನಿರ್ಗುಣಶ್ಚ**" ಇತ್ಯಾದಿ ಶ್ರುತಿಯಲ್ಲಿ ಕಲಾವಯವರಹಿತವೆಂದು, ಕ್ರಿಯಾಕ್ಷೋಭರಹಿತವೆಂದು, ಮತ್ತು ನಿರುಪಾಧಿಕನಿರ್ಗುಣವೆಂದು ಪೇಳಿರುವದು. ಇನ್ನು "ಯೋಗ್ಯಂಯೋಗ್ಯೇನ ಸಂಬಂಧ್ಯತೆ" ಈ ನ್ಯಾಯದಿಂದ ಪರಿಚ್ಛಿನ್ನವಾದ ಮೂರ್ತಪದಾರ್ಥಗಳಲ್ಲಿಯೇ, ಸಂಬಂಧ ಸಂಭವಿಸುವದಲ್ಲದೆ ಅಮೂರ್ತವಾದ ಬ್ರಹ್ಮದಲ್ಲಿ ಸಂಭವಿಸುವದಿಲ್ಲ; ಆದ್ದರಿಂದ ಬ್ರಹ್ಮವು ಪ್ರತ್ಯಾಸತ್ತಿ ಮತ್ತು ಸಂಯೋಗಾದಿ ಸಂಗದಿಂ ರಹಿತವಾಗಿರುವದು. ಅದನ್ನು ಪೇಳುವರು—

**"ಪ್ರತ್ಯಾಸತ್ತಿರ್ಭವೇತ್ಸಂಗಃ ಸಂಯೋಗಾದಿ ರಥಾಪಿವಾ |**
**ಮೂರ್ತಿಂ ಹಿ ಸಂಗವದ್ದೃಷ್ಟಂ ಪರಿಚ್ಛಿನ್ನಂ ಚ ವಾದಿಭಿಃ ||**
**ತಸ್ಮಾದ್ವಿಲಕ್ಷಣಸ್ಯಾಸ್ಯ ಸಂಗಃ ಸ್ಯಾತ್ಕೇನ ಹೇತುನಾ |"**

ಇದರ ಅರ್ಥವೇನೆಂದರೆ:—ಪ್ರತ್ಯಾಸತ್ತಿಯೆಂದೂ ಅಥವಾ ಸಂಯೋಗಾದಿಯೆಂದೂ ಸಂಗವುಂಟು; ಅದು ಮೂರ್ತಪದಾರ್ಥ ಮತ್ತು ಪರಿಚ್ಛಿನ್ನ ಇವುಗಳನ್ನೇ ಸಂಗವುಳ್ಳದ್ದಾಗಿ ವಾದಿಗಳಿಂದ ನೋಡಲ್ಪಡುವದು, ಮತ್ತಮಾಮೂರ್ತಪರಿಚ್ಛಿನ್ನಾದಿಗಳಿಂ ವಿಲಕ್ಷಣವಾದಂಥಾ ಅಮೂರ್ತವ್ಯಾಪಕರೂಪವಾದ ಸರ್ವಾಧಿಷ್ಠಾನಕ್ಕೆ ಯಾವ ಹೇತುವಿನಿಂದ ಸಂಗವಾದಿತು? ಅಂದರೆ, ಯಾವ ಪ್ರಕಾರದಿಂದಲೂ ಸಂಗವಿಲ್ಲವೆಂದರ್ಥ. ಮತ್ತು "ಅಸಂಗೋಹ್ಯಯಂಪುರುಷಃ-ಅಸಂಗೋನಸಹಿಸಜ್ಜತೆ" ಇತ್ಯಾದಿ ಶ್ರುತಿಗಳಲ್ಲಿಯೂ, ಪುರುಷ—ಅಂದರೆ, ಪರ

ಮಾತ್ಮನು ಅಸಂಗನು. ಮತ್ತು ಅಸಂಗನು ಯಾವದರೊಡನೆಯೂ ಕೂಡುವದಿಲ್ಲ; ಹೀಗೆ ಸಂಗರಹಿತನೆಂದೇ ಪೇಳಿರುವದು. ಆದ್ದರಿಂದ ಬ್ರಹ್ಮವು ಸಂಗದಿಂ 'ಹೀನ', ಅಂದರೆ, ರಹಿತವಾಗಿರುವದು.

ಅ|| ಈ ಶ್ಲೋಕದಲ್ಲಿ ಆರು ವಿಶೇಷಣಗಳಿಂದ ಜ್ಞೇಯ ವಸ್ತುವಂ ಪ್ರತಿಪಾದಿಸಿದರು. ಈಗ ಮಹಾವಾಕ್ಯ ವಿಚಾರವಂ ಸಹಿಸದ ಪುರುಷರಿಗೋಸುಗ ಪರಮದಯಾಳುವಾದ ಆಚಾರ್ಯರು, ಅದನ್ನು ಧ್ಯೇಯರೂಪದಿಂ ಪ್ರತಿಪಾದಿಸುವರು. ವಿ-ಚಾರ ಅಕ್ಷಮ

## || ೩ || ಧ್ಯೇಯಬ್ರಹ್ಮನಿರೂಪಣೆ.

### (೧) ಸಗುಣೋಪಾಸನೆ.

[೭] (**ಯದೋಂಕಾರಗಮ್ಯಮಿತಿ**) ಓಂಕಾರ ಗಮ್ಯ, ಅಂದರೆ, ಪ್ರಣವೋಪಾಸನೆಯಿಂದಲೂ, ಶೃತಿಯಲ್ಲಿ ಬ್ರಹ್ಮದ ಪ್ರಾಪ್ತಿಯಂ ಪೇಳಿರುವದು; ಆ ಓಂಕಾರಧ್ಯಾನವನ್ನು "**ಪರಂ ಚಾಪರಂ ಚ ಬ್ರಹ್ಮಯದೋಂಕಾರಃ**" ಈ ಶೃತಿಯು

(೧) ಪರಬ್ರಹ್ಮ,

(೨) ಅಪರಬ್ರಹ್ಮರೂಪದಿಂದ ದ್ವಿವಿಧವಾಗಿ ಪೇಳಿರುವದು.

ಅದರಲ್ಲಿ—

೧—ನಿರ್ಗುಣಬ್ರಹ್ಮವನ್ನು "ಪರಬ್ರಹ್ಮ" ವೆನ್ನುವರು.

೨—ಸಗುಣಬ್ರಹ್ಮವನ್ನು "ಅಪರಬ್ರಹ್ಮ" ವೆನ್ನುವರು. ಅದರಲ್ಲಿ ಮೊದಲು ಸಗುಣೋಪಾಸನೆಯನ್ನು ಸಂಕ್ಷೇಪರೀತಿಯಾಗಿ ಪೇಳುವರು. ಆ ಸಗುಣ ಉಪಾಸನೆಯಲ್ಲೂ ಸಪ್ತಸಿದ್ಧಾಂತವುಂಟು.

(೧) ಹಿರಣ್ಯಗರ್ಭನ ಸಿದ್ಧಾಂತ,

(೨) ಕಪಿಲ ಮುನಿಸಿದ್ಧಾಂತ,

(೩) ಅಪಾಂತರ ಮುನಿಸಿದ್ಧಾಂತ,

(೪) ಸನತ್ಕುಮಾರ ಸಿದ್ಧಾಂತ,

(೫) ಬ್ರಹ್ಮನಿಷ್ಠರ ಸಿದ್ಧಾಂತ,

(೬) ಪಶುಪತಿಯ ಸಿದ್ಧಾಂತ,

(೭) ಪಂಚರಾತ್ರರ ಸಿದ್ಧಾಂತ, ಈ ಸಪ್ತಸಿದ್ಧಾಂತಗಳಲ್ಲಿ—

೧:—ಹಿರಣ್ಯಗರ್ಭನ ಸಿದ್ಧಾಂತವೇನೆಂದರೆ;—

೧—ತ್ರಿಮಾತ್ರ,

೨—ತ್ರಿಬ್ರಹ್ಮ,

೩—ತ್ರಿಅಕ್ಷರರೂಪ ಓಂಕಾರವೆಂದು ತಿಳಿದು ಚಿಂತಿಸಬೇಕು.

ಅದರಲ್ಲಿ—

೧—ಅಗ್ನಿ, ವಾಯು, ಸೂರ್ಯ; ಇವು ಮೂರು ಮಾತ್ರೆಗಳು.

೨—ಋಕ್, ಯಜುಸ್, ಸಾಮ; ಇವು ಮೂರು ವೇದರೂಪ ಮೂರು ಬ್ರಹ್ಮಗಳು.

೩—ಅಕಾರ-ಉಕಾರ, ಮಕಾರ; ಇವು ಮೂರು ಅಕ್ಷರಗಳು, ಈ ಸರ್ವವೂ ಓಂಕಾರಸ್ವರೂಪವಾಗಿದೆ. ಆ ಓಂಕಾರ ನನ್ನ ಸ್ವರೂಪವು. ಹೀಗೆ ತಿಳಿದು ಚಿಂತಿಸುವನಾರೋ, ಅವನೇ ವೇದವಿತ್ತೆನಿಸುವನು. ಅದನ್ನು

ಶ್ರು॥ ತ್ರಿಸ್ಥಾನಂಚ ತ್ರಿಮಾರ್ಗಂಚ ತ್ರಿಬ್ರಹ್ಮಚ ತ್ರಿರಕ್ಷರಂ ।
ತ್ರಿಮಾತ್ರಂ ಚಾರ್ಧಮಾತ್ರಂಚ ಯಸ್ತಂವೇದ ಸವೇದವಿತ್ ॥

ಈ ಅಥರ್ವಣ ವೇದಶ್ರುತಿಯಲ್ಲಿ ಪ್ರಸಿದ್ಧವಾಗಿ ಪೇಳಿರುವದು. ॥೧॥

೨:—ಕಪಿಲದೇವನ ಸಿದ್ಧಾಂತವೇನೆಂದರೆ:—

೧—ತ್ರಿಜ್ಞಾನ,

೨—ತ್ರಿಗುಣ,

೩—ತ್ರಿಕರಣರೂಪ ಓಂಕಾರವಾಗಿದೆ. ಅದರಲ್ಲಿ—

೧—ವ್ಯಕ್ತಜ್ಞಾನ-ಅವ್ಯಕ್ತಜ್ಞಾನ, ಜ್ಞೇಯಜ್ಞಾನ, ಇವು ಮೂರು ಜ್ಞಾನಗಳು.

೨—ಸತ್ವ-ರಜ, ತಮ, ಇವು ಮೂರು ಗುಣಗಳು.

೩—ಮನ-ಬುದ್ಧಿ, ಅಹಂಕಾರ, ಇವು ಮೂರು ಕರಣಗಳು.

ಈ ಸರ್ವವೂ ವ್ಯಷ್ಟಿಸಮಷ್ಟಿರೂಪ ಓಂಕಾರವಾಗಿದೆ.

ಆ ಓಂಕಾರ ನನ್ನ ಸ್ವರೂಪವು. ಹೀಗೆ ಚಿಂತಿಸಬೇಕು. ॥ ೨ ॥

೩:—ಅಪಾಂತರ ಮುನಿಯ ಸಿದ್ಧಾಂತವೇನೆಂದರೆ;—

೧—ತ್ರಿಮುಖ,

೨—ತ್ರಿದೇವತಾ,

೩—ತ್ರಿಪ್ರಯೋಜನ ರೂಪ, ಓಂಕಾರವಾಗಿದೆ. ಅದರಲ್ಲಿ—

೧—ಗಾರ್ಹಪತ್ಯಾಗ್ನಿ, ದಕ್ಷಿಣಾಗ್ನಿ, ಆಹವನೀಯಾಗ್ನಿ, ಇವು ಮೂರು ಮುಖಗಳು.

೨—ಬ್ರಹ್ಮ, ವಿಷ್ಣು, ರುದ್ರ ಇವು ಮೂರು ದೇವತೆಗಳು.

೩—ಧರ್ಮ, ಅರ್ಥ, ಕಾಮ, ಇವು ಮೂರು ಪ್ರಯೋಜನಗಳು. ಈ ಸರ್ವವೂ ಓಂಕಾರಸ್ವರೂಪವಾಗಿದೆ. ಆ ಓಂಕಾರಬ್ರಹ್ಮ ನನ್ನ ಸ್ವರೂಪವು||೩||

**೪ :— ಸನತ್ಕುಮಾರರ ಸಿದ್ಧಾಂತವೇನೆಂದರೆ ;—**

೧—ತ್ರಿಕಾಲ,

೨—ತ್ರಿಲಿಂಗ,

೩—ತ್ರಿಸಂಜ್ಞಾರೂಪ, ಓಂಕಾರವಾಗಿದೆ. ಅದರಲ್ಲಿ—

೧—ಭೂತ, ವರ್ತಮಾನ, ಭಾವೀ, ಇವು ಮೂರು ಕಾಲಗಳು.

೨—ಸ್ತ್ರೀ, ಪುರುಷ, ನಪುಂಸಕ, ಇವು ಮೂರು ಲಿಂಗಗಳು.

೩—ವಿಶ್ವ, ತೈಜಸ, ಪ್ರಾಜ್ಞ, ಇವು ಮೂರು ಸಂಜ್ಞೆಗಳು. ಈ ಸರ್ವವೂ ಓಂಕಾರ ರೂಪವಾಗಿದೆ. ಆ ಓಂಕಾರಬ್ರಹ್ಮ ನನ್ನ ಸ್ವರೂಪವು. ಹೀಗೆ ಚಿಂತಿಸಬೇಕು. || ೪ ||

**೫:—ಬ್ರಹ್ಮನಿಷ್ಠರ ಸಿದ್ಧಾಂತವೇನೆಂದರೆ;—**

೧—ತ್ರಿಸ್ಥಾನ,

೨—ತ್ರಿಪದ,

೩—ತ್ರಿಪ್ರಜ್ಞಾರೂಪ, ಓಂಕಾರವಾಗಿದೆ. ಅದರಲ್ಲಿ—

೧—ಹೃದಯ, ಕಂಠ, ತಾಲು, ಇವು ಮೂರು ಸ್ಥಾನಗಳು.

೨—ಜಾಗ್ರತ್, ಸ್ವಪ್ನ, ಸುಷುಪ್ತಿ. ಇವು ಮೂರು ಪದಗಳು.

೩—ಬಹಿಪ್ರಜ್ಞಾ, ಅಂತಃಪ್ರಜ್ಞಾ, ಘನಪ್ರಜ್ಞಾ, ಇವು ಮೂರು ಪ್ರಜ್ಞೆಗಳು. ಈ ಸರ್ವವೂ ಓಂಕಾರ ರೂಪವಾಗಿದೆ. ಆ ಓಂಕಾರಬ್ರಹ್ಮವೇ ನಾನು. ಹೀಗೆ ಚಿಂತಿಸಬೇಕು. || ೫ ||

**೬:—ಪಶುಪತಿಯ ಸಿದ್ಧಾಂತವೇನೆಂದರೆ;—**

೧—ತ್ರಿಅವಸ್ಥಾ,

೨—ತ್ರಿಭೋಗ,

೩—ತ್ರಿಭೋಕ್ತೃರೂಪ, ಓಂಕಾರವಾಗಿದೆ. ಅದರಲ್ಲಿ—

೧—ಶಾಂತ, ಘೋರ, ಮೂಢ, ಇವು ಮೂರು ಅವಸ್ಥೆಗಳು.

೨—ಅನ್ನ, ಜಲ, ಸೋಮ. ಇವು ಮೂರು ಭೋಗಗಳು;

೩—ಪ್ರಾಣ, ಅಗ್ನಿ, ಸೂರ್ಯ, ಇವು ಮೂರು ಭೋಕ್ತೃಗಳು ಈ ಸರ್ವವೂ ಓಂಕಾರ ರೂಪವಾಗಿದೆ. ಆ ಓಂಕಾರಬ್ರಹ್ಮ ನನ್ನ ಸ್ವರೂಪವು. ಹೀಗೆ ಚಿಂತಿಸಬೇಕು. ||೬||

೭:—ಪಂಚರಾತ್ರರ ಸಿದ್ಧಾಂತವೇನೆಂದರೆ:—

೧—ತ್ರಿಆತ್ಮಾ,

೨—ತ್ರಿಸ್ವಭಾವ,

೩—ತ್ರಿವ್ಯವಹಾರರೂಪ, ಓಂಕಾರವಾಗ್ಗಿದೆ. ಅದರಲ್ಲಿ—

೧—ಬಲ, ವೀರ್ಯ, ತೇಜ, ಇವು ಮೂರು ಆತ್ಮಗಳು,

೨—ಜ್ಞಾನ, ಐಶ್ವರ್ಯ, ಶಕ್ತಿ, ಇವು ಮೂರು ಸ್ವಭಾವಗಳು,

೩—ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಇವು ಮೂರು ವ್ಯವಹಾರಗಳು. ಈ ಸರ್ವವೂ ಓಂಕಾರರೂಪವಾಗಿದೆ, ಆ ಓಂಕಾರಬ್ರಹ್ಮ ನನ್ನ ಸ್ವರೂಪವೆ. ಹೀಗೆ ಚಿಂತಿಸಬೇಕು. ||೭||

ಈ ಸಪ್ತಸಿದ್ಧಾಂತಗಳಲ್ಲಿ ಪೇಳಿದ ಅರವತ್ತುಮೂರು (೬೩) ಭೇದಗಳಿಂದ ಸಗುಣಬ್ರಹ್ಮವನ್ನು ಓಂಕಾರರೂಪವಾಗಿ, ಉಪಾಸಿಸಬೇಕೆಂದು ಪೇಳಿರುವರು. ಮತ್ತು ಅರವತ್ತುನಾಲ್ಕ (೬೪) ನೆಯದು ಅಮಾತ್ರರೂಪವಾದ „ ನಿರ್ಗುಣೋಪಾಸನೆ '' ಯಾಗಿರುವದು. ಬಳಿಕ

(೧)—ಮಾತ್ರಾಭೇದದಿಂದಲೂ ಓಂಕಾರದ ಚಿಂತನೆಯು ಬಹು ಪ್ರಕಾರವಾಗಿ ಪೇಳಿರುವರು.

೧—ಬಾಷ್ಕಲಋಷಿ ಏಕಮಾತ್ರೆಯಿಂದ ಚಿಂತನೆ ಗೈದಿರುವನು.

೨—ಶಾಲಋಷಿಯು ದ್ವಿಮಾತ್ರೆಯಿಂದಲೂ,

೩—ನಾರದನು ಸಾರ್ಧದ್ವಿಮಾತ್ರೆಯಿಂದಲೂ,

೪—ಮಾಂಡವ್ಯನು ಮೂರುಮಾತ್ರೆಯಿಂದಲೂ, ಬಹುಋಷಿಗಳು ಸಾರ್ಧತ್ರಿಮಾತ್ರೆಯಿಂದಲೂ,

೫—ಪರಾಶರಾದಿಗಳು ಚತುರ್ಮಾತ್ರೆಗಳಿಂದಲೂ,

೭—ವಸಿಷ್ಠಾದಿಗಳು ನಾಲ್ಕುವರೆ ಮಾತ್ರೆಗಳಿಂದಲೂ,

೭—ಯಾಜ್ಞ್ಯವಲ್ಕ್ಯನು ಅಮಾತ್ರರೂಪದಿಂದಲೂ, ಇತ್ಯಾದಿ ಮಾತ್ರಾ ಭೇದದಿಂದ ಓಂಕಾರದ ಉಪಾಸನೆಯನ್ನು ಪೇಳಿರುವರು. ಅವುಗಳಲ್ಲಿ—

ಏಕಮಾತ್ರೆ ವಿರಾಟಾಗಿದೆ. ದ್ವಿಮಾತ್ರೆ ಜಾಗ್ರತ್ಸ್ವಪ್ನಗಳಾಗಿವೆ. ತ್ರಿಮಾತ್ರೆ ಜಾಗ್ರತ್ಸ್ವಪ್ನ ಸುಷುಪ್ತಿ ಅಥವಾ ವೈಶ್ವಾನರ-ಹಿರಣ್ಯಗರ್ಭ-ಈಶ್ವರನಾಗಿದೆ. ಬಳಿಕ ಸಾರ್ಧದ್ವಿಮಾತ್ರೆಯು ಇದರ ಅಂತರ್ಭೂತವಾಗಿದೆ. ಮೂರುವರೆ ಮಾತ್ರೆಯು ಅಕಾರ-ಉಕಾರ-ಮಕಾರ-ಅರ್ಧಮಾತ್ರೆ ಚೇತನತುರೀಯವಾಗಿದೆ. ನಾಲ್ಕುಮಾತ್ರೆಯು ಜಾಗ್ರದಾದಿ ಮೂರು ಪ್ರಪಂಚ, ಮತ್ತು ನಾದರೂಪ ಶಕ್ತಿಯಾಗಿದೆ. ನಾಲ್ಕುವರೆ ಮಾತ್ರೆಯು ಅಕಾರ-ಉಕಾರ-ಮಕಾರ ರೂಪವಾದ ಸ್ಥೂಲಸೂಕ್ಷ್ಮಕಾರಣ ಪ್ರಪಂಚವಾಗಿ ಮತ್ತು ನಾದವಾಗಿ ಉಳಿದ ಅರ್ಧಮಾತ್ರೆ ಬಿಂದುಚೇತನವಾಗಿದೆ. ಹೀಗೆ ಆರು, ಏಳು, ಎಂಟು, ಮಾತ್ರಾದಿಗಳ ಭೇದದಿಂದ ಸಗುಣೋಪಾಸನೆಯು ಬಹುಪ್ರಕಾರದ್ದಾಗಿರುವದು. ಮತ್ತು

(೨)—ಕಾರ್ಯಬ್ರಹ್ಮ, ಕಾರಣಬ್ರಹ್ಮದ ಸರ್ವ ಉಪಾಸನೆಯೂ ಸಗುಣರೂಪವಾಗಿದೆ. ಆ ಓಂಕಾರದ ಸಗುಣೋಪಾಸನೆಯಿಂದ ಬ್ರಹ್ಮಲೋಕಪ್ರಾಪ್ತಿಯಾಗುವದು. ಮತ್ತು

(೩)—ಆ ಓಂಕಾರಕ್ಕೆ ಶ್ರುತ್ಯುಕ್ತವಾದ ಹತ್ತು ನಾಮಗಳಿರುವವು. ಅವುಗಳನ್ನು ಅರ್ಥಸಹಿತವಾಗಿ ಚಿಂತಿಸಿದರೆ, ಸರ್ವಾಭೀಷ್ಟದ ಲಾಭವಾಗುವದು. ಆ ದಶನಾಮಗಳು ಯಾವವೆಂದರೆ;—

## ಓಂಕಾರದ ಹತ್ತು ನಾಮಗಳು.

ಓಂ ೧, ಪ್ರಣವ ೨, ಸರ್ವವ್ಯಾಪಿ ೩, ಅನಂತ ೪, ತಾರ ೫, ಶುಕ್ರ ೬, ವೈದ್ಯುತ ೭, ಹಂಸ ೮, ತುರೀಯ ೯, ಪರಬ್ರಹ್ಮ ೧೦, * ಇಲ್ಲಿಯವರಿವಿಗೆ ಓಂಕಾರದ ಸಗುಣೋಪಾಸನೆಯ ರೀತಿಯಂ ಪೇಳಿದರು.

ಅ|| ಈಗ ನಿರ್ಗುಣೋಪಾಸನೆಯ ರೀತಿಯಂ ಸಂಕ್ಷೇಪವಾಗಿ ಪೇಳುವರು.

## (೨) ನಿರ್ಗುಣೋಪಾಸನೆ.

ಓಂಕಾರವನ್ನು ಪರಬ್ರಹ್ಮರೂಪವೆಂದು ತಿಳಿದು ಧ್ಯಾನಿಸಬೇಕು. ಎಂತೆಂದರೆ;—ಓಂಕಾರವು ಬ್ರಹ್ಮದ ವಾಚಕವು. ಬ್ರಹ್ಮವು ಅದಕ್ಕೆ ವಾಚ್ಯವು.

* ಇನ್ನೂ ಅನೇಕ ನಾಮಗಳು ಗೀತಾಗೂಢಾರ್ಥ ದೀಪಿಕೆಯಲ್ಲಿ ಬರೆಯಲ್ಪಟ್ಟಿವೆ.

ವಾಚ್ಯವಾಚಕಗಳಿಗೆ ಅಭೇದವಿರುವದು. ಅಥವಾ ಓಂಕಾರವು ಬ್ರಹ್ಮದಂತೆ ಸರ್ವವ್ಯಾಪಿಯಾಗಿರುವದು. ಅದನ್ನು “ ಓಮಿತ್ಯೇತದಕ್ಷರ ಮಿದಂ ಸರ್ವಂ ” ಈ ಶ್ರುತಿಯು ಪ್ರಸಿದ್ಧವಾಗಿ ಪೇಳಿರುವದು. ಇದಲ್ಲದೆ

೧—ಓಂ ಎಂಬ ವರ್ಣವು ಬ್ರಹ್ಮದಲ್ಲಿ ಅಧ್ಯಸ್ತವಾಗಿದೆ. ಅಧ್ಯಸ್ತಕ್ಕೆ ಅಧಿಷ್ಠಾನದೊಡನೆ ಭೇದವಿರುವದಿಲ್ಲ. ಅಥವಾ

೨—ಬ್ರಹ್ಮ ಮತ್ತು ಆತ್ಮನಂತೆ ಓಂಕಾರಕ್ಕೂ ನಾಲ್ಕು ಮಾತ್ರಾರೂಪವಾದ ಪಾದವಿರುವದು. ಆದ್ದರಿಂದ ಬ್ರಹ್ಮಾತ್ಮರೊಡನೆ ಓಂಕಾರವನ್ನು ಅಭೇದರೂಪವಾಗಿ ತಿಳಿದು ಚಿಂತಿಸಬೇಕು. ಅದರ ಸಂಕ್ಷೇಪಪ್ರಕಾರವೆಂತೆಂದರೆ;—

## ಅಭೇದಚಿಂತನಾಕ್ರಮ.

[೧] ವಿರಾಟ್ ೧,
ಹಿರಣ್ಯಗರ್ಭ ೨,
ಈಶ್ವರ ೩,
ಈಶ್ವರಸಾಕ್ಷಿ ೪,

ಈ ನಾಲ್ಕು ಪಾದವು ಬ್ರಹ್ಮದ್ದಾಗಿರುವವು :—

[೨] ವಿಶ್ವ ೧,
ತೈಜಸ ೨,
ಪ್ರಾಜ್ಞ ೩,
ಜೀವಸಾಕ್ಷಿ ೪,

ಈ ನಾಲ್ಕು ಪಾದವು ಆತ್ಮನದಾಗಿರುವವು :—

ಹೀಗೆ—ಓಂಕಾರಕ್ಕೂ

[೩] ಅಕಾರ ೧,
ಉಕಾರ ೨,
ಮಕಾರ ೩, ಅಮಾತ್ರಾರೂಪ
ತುರೀಯ ೪.

ಈ ನಾಲ್ಕು ಮಾತ್ರಾರೂಪ ಪಾದವಂ ತಿಳಿಯಬೇಕು :—

ಅವುಗಳೊಡನೆ ಬ್ರಹ್ಮ ಮತ್ತು ಆತ್ಮನ ಪಾದಗಳನ್ನು ಅಭೇದವಾಗಿ ತಿಳಿದು ಲಯಚಿಂತನೆಯಂ ಮಾಡಬೇಕು.

೧—ಸ್ವರ್ಗಾದಿ ಸಪ್ತಾಂಗಸಹಿತನಾದ ವಿರಾಟನನ್ನು ಹತ್ತೊಂಭತ್ತು ಮುಖವುಳ್ಳ ವಿಶ್ವನಿಗೆ ಅಭೇದವಾಗಿ ತಿಳಿಯಬೇಕು. ಹ್ಯಾಗೆಂದರೆ:—ಇಬ್ಬರೂ ಸಮಷ್ಟಿವ್ಯಷ್ಟಿಸ್ಥೂಲ ಉಪಾಧಿಯುಳ್ಳವರಾಗಿರುವರು. ಮತ್ತು ಪ್ರಥಮಪಾದ ವಾದ ಧರ್ಮವು ಇಬ್ಬರಲ್ಲೂ ಸಮನಾಗಿರುವದು. ವಿಶ್ವನ ಭೋಗಕ್ಕೆ ಸಾಧನ ವಾದ ದಶ ಇಂದ್ರಿಯ, ನಾಲ್ಕು ಅಂತಃಕರಣ, ಐದು ಪ್ರಾಣಗಳು ಮುಖವೆಂದು ಹೇಳಲ್ಪಡುವವು. ಅದರಲ್ಲಿ ದಶ ಇಂದ್ರಿಯ, ನಾಲ್ಕು ಅಂತಃಕರಣ ತ್ರಿಪುಟೀರೂ ಪವಾಗಿರುವದು. ಮತ್ತು ಪ್ರಾಣದಲ್ಲಿ ತ್ರಿಪುಟೀ ಇಲ್ಲ; ಆ ವಿರಾಟ್‌ರೂಪನಾದ ವಿಶ್ವನನ್ನು ಅಕಾರದೊಡನೆ ಅಭೇದವಾಗಿ ತಿಳಿದು ಚಿಂತಿಸಬೇಕು. ಯಾಕೆಂ ದರೆ:—ಮೂರು ಪ್ರಥಮ ಪಾದವಾಗಿರುವದು. ಪ್ರಾಥಮ್ಯ ಧರ್ಮವೂ ಸಮಾ ನವಾಗಿರುವದು. ಇದರಂತೆ

೨—ಹಿರಣ್ಯಗರ್ಭನನ್ನು ತೈಜಸನಿಗೆ ಅಭೇದವಾಗಿ ತಿಳಿಯಬೇಕು; ಎಂತೆಂ ದರೆ;—ಇಬ್ಬರೂ ಸೂಕ್ಷ್ಮ ಉಪಾಧಿಯುಳ್ಳವರಾಗಿರುವರು. ಆ ಹಿರಣ್ಯ ಗರ್ಭರೂಪನಾದ ತೈಜಸನನ್ನು ಉಕಾರರೂಪನೆಂದು ತಿಳಿ. ಯಾಕೆಂದರೆ;— ಮೂರರಲ್ಲೂ ದ್ವಿತೀಯಪಾದವಾಗಿರುವ ಧರ್ಮವು ಸಮಾನವಾಗಿರುವದು. ಇದೇರೀತಿಯಾಗಿ—

೩—ಈಶ್ವರನನ್ನು ಪ್ರಾಜ್ಞನಿಗೆ ಅಭೇದವೆಂದು ತಿಳಿಯಬೇಕು. ಎಂತೆಂ ದರೆ;—ಇಬ್ಬರೂ ಕಾರಣ ಉಪಾಧಿಯುಳ್ಳವರಾಗಿರುವರು. ಆ ಈಶ್ವರ ರೂಪ ನಾದ ಪ್ರಾಜ್ಞನನ್ನು ಮಕಾರರೂಪನೆಂದು ತಿಳಿ. ಯಾಕೆಂದರೆ;—ತ್ರಿತೀಯ ಪಾದವಾಗಿರುವ ಧರ್ಮವು ಮೂರರಲ್ಲೂ ಸಮಾನವಾಗಿರುವದು. ಬಳಿಕ

೪—ಈಶ್ವರಸಾಕ್ಷಿಗೂ, ಜೀವಸಾಕ್ಷಿಗೂ ಸದಾ ಅಭೇದವಿರುವದು. ತವುಗಳನ್ನು ಓಂಕಾರದ ಪರಮಾರ್ಥರೂಪವೆನಿಪ, ತುರೀಯದೊಡನೆ ಅಭೇದ ವೆಂದು ತಿಳಿ. ಯಾಕೆಂದರೆ;—ಸಮಷ್ಟಿ ಮೂರು ಉಪಾಧಿಗಳೊಳಗಣ ವ್ಯಾಪಕ ಚೇತನರೂಪವಾದ ಈಶ್ವರಸಾಕ್ಷಿಯು ಹ್ಯಾಗೆ ಶುದ್ಧವಾಗಿರುವದೋ, ಮತ್ತು ವ್ಯಷ್ಟಿ ಮೂರು ಉಪಾಧಿಗಳೊಳಗೆ ಅನುಸ್ಯೂತಚೇತನರೂಪವಾದ ಜೀವಸಾಕ್ಷಿ ಯೂ ಹ್ಯಾಗೆ ಶುದ್ಧವಾಗಿರುವದೋ, ಹಾಗೆ ಅಕಾರಾದಿ ಮೂರು ಮಾತ್ರೆಗಳಲ್ಲಿ ವ್ಯಾಪಿಸಿರುವ ಚೇತನರೂಪವಾದ ಅಮಾತ್ರವೆಂಬ ತುರೀಯವೂ ಕೂಡ ಶುದ್ಧವಾ ಗಿರುವದು. ಆದ್ದರಿಂದ ಈಶ್ವರಸಾಕ್ಷಿಗೂ, ಜೀವಸಾಕ್ಷಿಗೂ, ತುರೀಯದೊಡನೆ ಮುಖ್ಯ ಅಭೇದವಿದೆ.

ಮತ್ತು ಪೂರ್ವದಲ್ಲಿ ಪೇಳಿದ ಅಕಾರಾದಿಗಳಿಗಾದರೂ, ಅಮಾತ್ರರೂಪವಾದ ತುರೀಯದಲ್ಲಿ ಲಯಚಿಂತನೆಯಂ ಮಾಡಬೇಕು.

೧—ವಿರಾಟ್ ವಿಶ್ವಸಹಿತ ಅಕಾರವನ್ನು ಉಕಾರದಲ್ಲಿ ಲಯಚಿಂತನೆಯಂ ಮಾಡಬೇಕು.

೨—ಹಿರಣ್ಯಗರ್ಭ ತೈಜಸಸಹಿತ ಉಕಾರವನ್ನು ಮಕಾರದಲ್ಲಿ ಲಯಚಿಂತನೆಯಂ ಮಾಡಬೇಕು.

೩—ಈಶ್ವರಪ್ರಾಜ್ಞಸಹಿತ ಮಕಾರವನ್ನು ಅಮಾತ್ರರೂಪವಾದ ತುರೀಯದಲ್ಲಿ ಲಯಚಿಂತನೆಯಂ ಮಾಡಬೇಕು,

ಆ ತುರೀಯರೂಪವಾದ ಶುದ್ಧಬ್ರಹ್ಮವು ನಾನಾಗಿರುವೆನು. ಹೀಗೆ ಗುರುಮುಖದಿಂದ ಚನ್ನಾಗಿ ತಿಳಿದು ಯತ್ನಶೀಲನಾದ ಮುಮುಕ್ಷುವು ಏಕಾಂತದೇಶದಲ್ಲಿ ಓಂಕಾರವಂ ಪರಬ್ರಹ್ಮರೂಪದಿಂದ ಚಿಂತಿಸಿದರೆ, ಅದರಿಂದ ಜ್ಞಾನವಾಗಿ ಕೈವಲ್ಯಮೋಕ್ಷಪ್ರಾಪ್ತಿಯಾಗುವದು. ಮತ್ತು ಯಾವದಾದರೂ ಕಾಮನಾರೂಪವಾದ ಪ್ರತಿಬಂಧವಿದ್ದರೆ; ದೇವಯಾನಮಾರ್ಗದಿಂದ ಬ್ರಹ್ಮಲೋಕದೊಳ್ಪೋಗಿ, ಹಿರಣ್ಯಗರ್ಭನಿಗೆ ಸಮಾನವಾದ ಭೋಗವನ್ನನುಭವಿಸಿ ಅಲ್ಲಿ ಸತ್ವಪ್ರಧಾನದಿಂದ ಜ್ಞಾನವಾಗಿ, ಪಿತಾಮಹನೊಡನೆ ವಿದೇಹಮೋಕ್ಷವಂ ಪೊಂದುವನು. ಈ ಓಂಕಾರದ ಉಪಾಸನೆಯು ಬಹು ಉಪನಿಷತ್ತುಗಳಲ್ಲಿ ಪ್ರತಿಪಾದಿಸಿರುವದು. ಮತ್ತು 'ಮಾಂಡೂಕ್ಯ' ದಲ್ಲಿ ವಿಶೇಷವಾಗಿ ಪೇಳಿರುವದು. ಅವುಗಳೊಳಗಣ ಸಾರವೆಲ್ಲವೂ ಪಂಚೀಕರಣದಲ್ಲಿ ಪೇಳಲ್ಪಟ್ಟಿರುವದು. ಆ ಮೂಲ ಪಂಚೀಕರಣಸೂತ್ರಭೂತವ್ಯಾವದೆಂದರೆ;—

## ಮೂಲ ಪಂಚೀಕರಣಸೂತ್ರ.

ಓಂಕಾರಂ ಸರ್ವವೇದಸಾರಭೂತಂ ಪಂಚೀಕೃತಮಹಾಭೂತಾನಿ ತತ್ಕಾರ್ಯಂಚ ಸರ್ವಂ ವಿರಾಡಿತ್ಯುಚ್ಯತೇ ‖ ಏತತ್ಸ್ಥೂಲ ಶರೀರಮಾತ್ಮನಃ ‖ ಇಂದ್ರಿಯೈರರ್ಥೋಪಲಬ್ಧಿರ್ಜಾಗರಿತಂ ‖ ತದುಭಯಾಭಿಮಾನ್ಯಾತ್ಮಾ ವಿಶ್ವ ಏತತ್ತ್ರಯಮಕಾರಃ ‖ ಅಪಂಚೀಕೃತ ಪಂಚಮಹಾಭೂತಾನಿ ತತ್ಕಾರ್ಯಂ ಚ ಸಪ್ತದಶಕಂ ಲಿಂಗಂ ಭೌತಿಕಂ ಹಿರಣ್ಯಗರ್ಭ ಇತ್ಯುಚ್ಯತೇ ‖ ಏತತ್ಸೂಕ್ಷ್ಮ ಶರೀರಮಾತ್ಮನಃ ಕರಣೇಷೂಪ ಸಂಹೃತೇಷು ಜಾಗರಿತ ಸಂಸ್ಕಾರಜಃ ಪ್ರತ್ಯಯಃ ಸವಿಷಯಃ ಸ್ವಪ್ನಸ್ತದುಭಯಾಭಿಮಾನ್ಯಾತ್ಮಾ ತೈಜಸಃ ‖ ಏತತ್ತ್ರಯಮುಕಾರಃ ‖ ಶರೀರ

ದ್ವಯಕಾರಣಮಜ್ಞಾನಂ ಸಾಭಾಸಮವ್ಯಾಕೃತಮುಚ್ಯತೇ || ಏತತ್ಕಾರಣ ಶರೀರಮಾತ್ಮನಃ || ತಚ್ಚನಸನ್ನಾಸನ್ನಾಪಿ ಸದಸನ್ನಭಿನ್ನಂ ನಾಭಿನ್ನಂ ನಾಪಿಭಿ ನ್ನಾಭಿನ್ನಂ ಕುತಶ್ಚಿನ್ನ ನಿರವಯವಂ ನಸಾವಯವಂ ನೋಭಯಂ || ಕಿಂತುಕೇವ ಲ ಬ್ರಹ್ಮಾತ್ಮೈಕತ್ವಜ್ಞಾನಾಪನೋದ್ಯಂ || ಸರ್ವಪ್ರಕಾರ ಜ್ಞಾನಾನಾಮುಪ ಸಂಹಾರೋ ಬುದ್ಧೇ ಕಾರಣಾತ್ಮನಾವಸ್ಥಾನಂ ಸುಷುಪ್ತಿ||ತದುಭಯಾಭಿಮಾನ್ಯಾ ತ್ಮಾಪ್ರಾಜ್ಞಃ || ಏತತ್ತ್ರಯಂ ಮಕಾರಃ || ಅಕಾರ ಉಕಾರೇ ಉಕಾರೋಮಕಾರೆ ಅಹಮಾತ್ಮಾ ಸಾಕ್ಷೀಕೇವಲಶ್ಚಿನ್ಮಾತ್ರಸ್ವರೂಪೋ ನಾಜ್ಞಾನಂ ತತ್ಕಾರ್ಯಂಚ|| ಕಿಂತು ನಿತ್ಯಶುದ್ಧಬುದ್ಧಮುಕ್ತಸತ್ಯ ಪರಮಾನಂದಾದ್ವಯಮ್ || ಬ್ರಹ್ಮೈವಾ ಹಮಸ್ಮ್ಯಹಂ ಬ್ರಹ್ಮಾಸ್ಮೀತ್ಯಭೇದೇನಾವಸ್ಥಾನಂ ಸಮಾಧಿಃ || ಅಯಮಾ ತ್ಮಾ ಬ್ರಹ್ಮೇತ್ಯಾದಿ ಶೃತಿಭ್ಯಃ || ಇತಿ ಶ್ರೀಮೂಲ ಪಂಚೀಕರಣಮ್ ||

ಇದು ಜಿಜ್ಞಾಸುಗಳು ಕಂಠಪಾಠವಂ ಮಾಡುವ ನಿಮಿತ್ತ ಬರೆದಿರುವದು. ಇದರ ಅರ್ಥ ವಿಸ್ತಾರವಾಗಿದೆ. ತಿಳಿಯಲಪೇಕ್ಷೆಯುಳ್ಳವರು ಅದರ ಟೀಕೆಯ ನ್ನೋದಬಹುದು. ಅಥವಾ ಗುರುಮುಖದಿಂದ ಕೇಳಬಹುದು.

ಈ ರೀತಿಯಾಗಿ ಬ್ರಹ್ಮವು ಓಂಕಾರಗಮ್ಯವೆಂದು ಶೃತಿ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು.

ಪುನಃ ಆ ಬ್ರಹ್ಮವು ಎಂತಿರುವದೆಂದರೆ;—

## [೮] ಬ್ರಹ್ಮನಿರಾಕಾರ.

(ನಿರಾಕಾರಮಿತಿ) ' ನಿರಾಕಾರ ' ಅಂದರೆ;—ಆಕಾರದಿಂ ರಹಿತವಾಗಿರುವದು. ಹೀಗೆ ಪೇಳಿದ್ದರಿಂದ ನಿತ್ಯ ನಿರ್ವಿಕಾರ ರೂಪವನ್ನು ತಿಳಿಯಪಡಿಸಿದರು. ಎಂತೆಂದರೆ;—ಸಾಕಾರ ಪದಾರ್ಥವು ವಿನಾಶೀ ಮತ್ತು ವಿಕಾರೀಯಾಗಿಹುವದು. ಅದನ್ನು " ಸಾಕಾರಮನೃತಂ ವಿದ್ಧಿ ನಿರಾಕಾರಂತು ನಿಶ್ಚಲಂ " ಇದರಿಂದ ತಿಳಿಯತಕ್ಕದ್ದು.

ಪುನಃ ಆ ಬ್ರಹ್ಮ ವೆಂತಿರುವದೆಂದರೆ;—

## [೯] ಬ್ರಹ್ಮ ಅತಿ ಉಜ್ವಲ.

(ಅತ್ಯುಜ್ವಲಮಿತಿ) ಅತಿ ಉಜ್ವಲ— ಅಂದರೆ;—ಅತಿಶಯದಿಂದ ಸ್ವಚ್ಛವಾಗಿಯೂ, ಸದಾ ದೃಶ್ಯಿಸ್ವರೂಪವಾಗಿಯೂ, ಸರ್ವದೋಷ ರಹಿತವಾಗಿಯೂ ಇರುವದು. ಅದನ್ನು " ನಿರವದ್ಯಂ ನಿರಂಜನಂ " ಇತ್ಯಾದಿ ಶೃತಿಯಲ್ಲಿಯೂ, ಪೇಳಿರುವದು.

ಪುನಃ ಆ ಬ್ರಹ್ಮವೆಂತಿರುವದೆಂದರೆ :—

## [೧೦] ಬಹ್ಮ—ಅಮೃತಸ್ವರೂಪ.

(ಮೃತ್ಯುಹೀನಮಿತಿ) ಮೃತ್ಯುಹೀನವೆಂದರೆ—ಮೃತ್ಯುವಿನಿಂದ ರಹಿತವಾಗಿರುವದು. ಅದನ್ನು "ಯೋ ವೈ ಭೂಮಾ ತದಮೃತಂ" ಈ ಶೃತಿಯಲ್ಲಿ ಬ್ರಹ್ಮವು ಮೃತ್ಯುಧರ್ಮರಹಿತವೆಂದು ಪ್ರಸಿದ್ಧಪಡಿಸಿರುವದು. ಮತ್ತು ಯಾವಪದಾರ್ಥವು ಜನ್ಮಉಳ್ಳದ್ದೋ, ಅದಕ್ಕೆ ಮೃತ್ಯುವುಂಟು; ಬ್ರಹ್ಮವು ಜನ್ಮವಿಲ್ಲದಾದ್ದರಿಂದ ಮೃತ್ಯು ಸಂಭವಿಸುವದಿಲ್ಲ. ಇಷ್ಟೇ ಅಲ್ಲ; "ತಮೇವ ವಿದಿತ್ವಾತಿಮೃತ್ಯುಮೇತಿ" ಈ ಶೃತಿಯಲ್ಲಿ ಪೇಳಲ್ಪಟ್ಟಂತೆ ಯಾವದನ್ನು ತಿಳಿದುಕೊಂಡು ಜ್ಞಾನಿಯು ಮೃತ್ಯುವನ್ನತಿಕ್ರಮಿಸುವನೋ, ಆ ಬ್ರಹ್ಮವು ಮೃತ್ಯುಧರ್ಮರಹಿತವೆನ್ನುವದರಲ್ಲಿ ಪೇಳತಕ್ಕದ್ದೇನು ? ಹೀಗೆ ಕೈಮುತಿಕನ್ಯಾಯದಿಂದಲೂ, ಮೃತ್ಯುರಹಿತವೆಂದು ಸಿದ್ಧವಾಗುವದು. ಇದೂ ಅಲ್ಲದೆ "ಮೃತ್ಯುರ್ವೈತಮಃ" ಈ ಶೃತಿಯಲ್ಲಿ ಪೇಳಲ್ಪಟ್ಟ ಮೃತ್ಯುವೆಂಬ ಶಬ್ದಕ್ಕೆ ತಮವೆಂದು ಹೆಸರಾಗುವದು. ಆ ತಮವೆಂಬ ನಾಮವು ಅಜ್ಞಾನಕ್ಕಾಗುವದು. ಆ ಅಜ್ಞಾನರೂಪವಾದ ಮೃತ್ಯುವಿನಿಂದ ಬ್ರಹ್ಮವು ರಹಿತವಾಗಿರುವದು. ಅದನ್ನು "ತಮಸಃ ಪರಸ್ತಾತ್" ಇತ್ಯಾದಿ ಶೃತಿಯು ತಮದಿಂ ಪರವೆಂದು ಸ್ಪಷ್ಟವಾಗಿ ಪೇಳಿರುವದು. ಹೀಗೆ ಅನಂತಾದಿ ಮೃತ್ಯುಹೀನಪರ್ಯಂತವಾದ ಹತ್ತು ವಿಶೇಷಣಗಳಿಂದೊಡಗೂಡಿದ ಯಾವ ನಿತ್ಯಪರಂಬ್ರಹ್ಮವುಂಟೋ, ಅದೆ ನಾನಾಗಿರುವೆನು, ಈ ಮಾತು

ದೃಶಿಸ್ವರೂಪಂ ಗಗನೋಪಮಂ ಪರಂ
ಸಕೃದ್ವಿಭಾತಂ ತ್ವಜಮೇಕಮಕ್ಷರಂ ||
ಅಲೇಪಕಂ ಸರ್ವಗತಂ ಯದದ್ವಯಂ
ತದೇವಚಾಹಂ ಸಕಲಂ ವಿಮುಕ್ತಂ ||

ಇತ್ಯಾದಿ ಸಚ್ಛಾಸ್ತ್ರದಲ್ಲಿಯೂ ಪೇಳಿರುವದು. ಇಲ್ಲಿಗೆ ಏಳನೇ ಶ್ಲೋಕದ ಅರ್ಥವು ಪೂರ್ಣವಾಯಿತು. || ೭ ||

ಅ—ಹಿಂದೆ ಸಾಧನೆಯಿಂದೊಡಗೂಡಿದ ತತ್ವಜ್ಞಾನವನ್ನೂ ಮತ್ತು ಜ್ಞೇಯಬ್ರಹ್ಮವನ್ನೂ ಪ್ರತಿಪಾದಿಸಿದರು ಈಗ ಉತ್ತಮಭೂಮಿಕಾರೂಢನಾದ ಪುರುಷನಿಂದ ಅನುಭವಿಸಲ್ಪಟ್ಟದ್ದಾಗಿಯೂ, ಸರ್ವ ಸುಖಕ್ಕೂ ನಿಲುಕಡೆಯಾ

ಶ್ರೇಯ

ಗಿಯೂ, ಮತ್ತು ನಿರ್ವಿಶೇಷರೂಪವಾಗಿಯೂ ಇರುವ ಭೂಮಾನಂದವನ್ನು ಈ ಎಂಟನೇ ಶ್ಲೋಕದಿಂದ ಶ್ರೀಮದಾಚಾರ್ಯರು ವರ್ಣನೆಯಂ ಮಾಡುತ್ತಾರೆ.

## ॥ ೮ ॥ ನಿರ್ವಿಶೇಷ ಭೂಮಾನಂದ ಸ್ವರೂಪ :—

—॥ ಯದಾನಂದ ಸಿಂಧಾವಿತಿ ॥—

**ಮೂ— ಯದಾನಂದ ಸಿಂಧೌ ನಿಮಗ್ನಃ ಪುಮಾನ್**
**ಸ್ಯಾದವಿದ್ಯಾವಿಲಾಸಃ ಸಮಸ್ತಪ್ರಪಂಚಃ ॥**
**ತದಾ ನ ಸ್ಫುರತ್ಯದ್ಭುತಂ ಯನ್ನಿಮಿತ್ತಂ**
**ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೮ ॥**

ಯಾವ ಆನಂದಸಮುದ್ರದಲ್ಲಿ ಜೀವನ್ಮುಕ್ತ ಪುರುಷನು ಯಾವಾಗ ನಿಮಗ್ನನಾಗುವನೋ, ಆಗ ಅದ್ಭುತವಾಗಿದೆ, ಯಾವುದರ ನಿಮಿತ್ತದಿಂದ ಇಂಥಾ ಅವಿದ್ಯೆಯ ವಿಲಾಸವೆನಿಪ ಸಮಸ್ತ ಪ್ರಪಂಚವು ಅವನಿಗೆ ಸ್ಫುರಿಸುವದಿಲ್ಲವೋ ಇಂಥಾ ಸುಖಸಾಗರವಾದ ಯಾವ ನಿತ್ಯಪರಂಬ್ರಹ್ಮವುಂಟೋ, ಅದೇ ನಾನಾಗಿರುವೆನು. ಇದು ಪದದ ಅರ್ಥ. ॥ ೮ ॥

## [೧] ಪುರುಷೋತ್ಕರ್ಷ :—

**ಟೀಕಾ:—** ಪುರುಷಸಾಧ್ಯ ಪ್ರಯೋಜನವಾದ ಕೈವಲ್ಯಮೋಕ್ಷವನ್ನು ಸಂಪಾದಿಸಬೇಕು. ಅಥವಾ—ಶರೀರವೆಂಬ ಪುರಿಯಲ್ಲಿ ಪೂರ್ಣಜ್ಞಾನದಿಂದ ಇರುವವನೇ '**ಪುಮಾನ್**' ಅಂದರೆ;—ಪುರುಷಶಬ್ದಕ್ಕೆ ಅರ್ಥವು. ಈ ಮಾತು "**ಸಂಪಾದಯತಿಕೈವಲ್ಯಂ ಸಏವ ಪುರುಷೋತ್ತಮಃ**" ಈ ಶಾಸ್ತ್ರದಲ್ಲಿ ಹೇಳಿರುವದು. ಆ ಪುರುಷನಿಂದಿತರರಾದವರೆಲ್ಲರೂ, ನಪುಂಸಕರು. ಅಥವಾ ಸ್ತ್ರೀಯರೆನಿಸುವರು. ಅದೆಂತೆಂದರೆ;—"**ನಪುಂಸಕಃ ಪುಮಾನ್‌ಜ್ಞೇಯೋ ಯೋನವೇತ್ತಿಹೃದಿಸ್ಥಿತಂ**" ಇದರ ಅರ್ಥವೇನೆಂದರೆ;—ಯಾವನು ತನ್ನ ಹೃದಯದಲ್ಲಿರುವ ಆನಂದರೂಪನಾದ ಆತ್ಮನನ್ನು ತಿಳಿಯದಿರುವನೋ ಆ ಪುರುಷನನ್ನು ನಪುಂಸಕನೆಂದು ತಿಳಿಯಬೇಕು. ಅಥವಾ ಜ್ಞಾನವಿಲ್ಲದೆ ಪರತಂತ್ರತ್ವದಿಂದಲೂ, ಚರ್ಮಧಾತು ರೇತರೂಪವಾದ ಗರ್ಭಯುಕ್ತರಾದ್ದರಿಂದಲೂ, ಅಥವಾ "**ಸ್ತ್ಯಾಯತೇಃ**" ಎಂಬ ವ್ಯುತ್ಪತ್ತಿಯಿಂದ ನಾನಾ ಅಧ್ಯಾಸಿಕ ಶಬ್ದಜಾಲದಿಂದಲೂ ಎಲ್ಲಾ ಅಜ್ಞಪುರುಷರು ಸ್ತ್ರೀಯರೆನಿಸುವರು. **ಬಟ್ಟ ಜ್ಞಾನಿಯೋ ಪುರುಷನೆನ್ನಲ್ಪಡುವನು. ಅವರಲ್ಲಿಯೂ ಯಾವನೋ ಬಟ್ಟ ಬ್ರಹ್ಮ**

ನಿತ್ಯನು ಸಮಾಧಿಯ ಯತ್ನದಿಂದ ಉತ್ತಮ ಭೂಮಿಕಾರೂಢನಾಗಿ, ಬ್ರಹ್ಮಾನಂದರೂಪವಾದ ಸಮುದ್ರದಲ್ಲಿ ಮಹಾಮಕರದಂತೆ ನಿಮಗ್ನನಾಗಿರುವನೋ, ಅವನ ಭೂಮಿಕೆಯನ್ನು ತಿಳಿಯಪಡಿಸಲೋಸುಗ, ಪ್ರಸಂಗಶಃ ವಾಸಿಷ್ಠದಲ್ಲಿ ಪೇಳಿದ ಸಪ್ತಜ್ಞಾನ ಭೂಮಿಕೆಯನ್ನು ತೋರಿಸುತ್ತಾರೆ.

## [೨] ಸಪ್ತಜ್ಞಾನ ಭೂಮಿಕಾ :—

ಶ್ಲೋ॥ ಜ್ಞಾನಭೂಮಿಃ ಶುಭೇಚ್ಛಾಖ್ಯಾ ಪ್ರಥಮಾ ಪರಿ ಕೀರ್ತಿತಾ ।
ವಿಚಾರಣಾ ದ್ವಿತೀಯಾಸ್ಯಾ ತೃತೀಯಾ ತನುಮಾನಸಾ ॥
ಸತ್ವಾಪತ್ತಿಶ್ಚತುರ್ಥೀಸ್ಯಾ ತ್ತತೋಽಸಂಸಕ್ತಿನಾಮಿಕಾ ।
ಪದಾರ್ಥಾಭಾವನೀ ಷಷ್ಠೀ ಸಪ್ತಮೀ ತುರ್ಯಗಾ ಸ್ಮೃತಾ ॥

ಅರ್ಥ :—ಶುಭೇಚ್ಛಾ ಎಂಬುದು ಪ್ರಥಮಭೂಮಿಕೆ ಎಂದು ಪೇಳುವರು. (೧). ವಿಚಾರಣಾ ದ್ವಿತೀಯವು (೨). ತನುಮಾನಸಾ ತೃತೀಯವು (೩). ಸತ್ವಾಪತ್ತಿ ಎಂಬುದು ಚತುರ್ಥಭೂಮಿಯು (೪). ಅದರ ಬಳಿಕ ಅಸಂಸಕ್ತಿ ಎಂಬ ನಾಮವುಳ್ಳದ್ದು ಪಂಚಮೀ (೫). ಪದಾರ್ಥಾಭಾವನೀ ಷಷ್ಠೀ (೬). ಮತ್ತು ತುರ್ಯಗಾ ಎಂಬ ಪೆಸರುಳ್ಳದ್ದು ಸಪ್ತಮೀ (೭). ಈ ಏಳು ಜ್ಞಾನ ಭೂಮಿಕೆಯು ಬುದ್ಧಿಯದಾಗಿರುವವು. ಅವುಗಳ ಸ್ವರೂಪವಂ ಪೇಳುವರು.

(೧)—ವಿವೇಕ, ವೈರಾಗ್ಯ, ಶಮದಮಾದಿ ಸಹಿತವಾದ ಮೋಕ್ಷೇಚ್ಛೆಯೂ, ತತ್ಸಾಧ್ಯವಾದ ಗುರೂಪಸತ್ತಿಪೂರ್ವಕ, ಶ್ರವಣರೂಪವೂ ಸಹ ಶುಭೇಚ್ಛೆಯೆಂಬ ಮೊದಲನೇ ಭೂಮಿ ಎನಿಸುವದು.

(೨)—ಸ್ವಯುಕ್ತಿಯಿಂದ ತತ್ವಚಿಂತನರೂಪವಾದ ಮನನದ ಅಪರಪರ್ಯಾಯ ವಿಚಾರವು ವಿಚಾರಣೇ ಎಂಬ ಭೂಮಿ ಎನಿಸುವದು.

(೩.)—ಮನನವಾದ ಬಳಿಕ ನಿದಿಧ್ಯಾಸನದಿಂದ ಮನಕ್ಕೆ ‹ ತನುತಾ ’ ಅಂದರೆ;—ಸೂಕ್ಷ್ಮ ಅವಸ್ಥೆಯುಂಟಾಗುವದು. ಆದ್ದರಿಂದ ನಿದಿಧ್ಯಾಸನಕ್ಕೆ ತನುಮಾನಸಾಭೂಮಿ ಎಂದು ಪೆಸರು.

(೪)—ಶುದ್ಧತತ್ವ ಸಾಕ್ಷಾತ್ಕಾರ ರೂಪವಾದದ್ದು ಸತ್ವಾಪತ್ತಿ ಭೂಮಿ ಎನಿಸುವದು.

(೫)—ಸಮಾಧಿಯಿಂದ ಮನಕ್ಕೆ ನಿರ್ವಿಕಲ್ಪಾವಸ್ಥೆಯುಂಟಾಗಿ, ರಾಗಾಭಾಸವು ಸಂಕ್ಷಯವಾಗಲು ಅದಕ್ಕೆ ಅಸಂಸಕ್ತಿ ಭೂಮಿ ಎಂದು ಪೆಸರು. ಬಳಿಕ

(೬)—ಸಮಾಧಿಯ ದೃಢತೆಯಿಂದ ಸರ್ವಪದಾರ್ಥಗಳ ವಾಸನೆಗಳಿಗೆ ಸಂಕ್ಷಯವಾದರೆ, ಅದಕ್ಕೆ ಪದಾರ್ಥಾಭಾವನೀ ಭೂಮಿ ಎಂದು ಪೆಸರು.

(೭)—ಪರಮಪ್ರಕಾಶವಾದ ಆನಂದಘನದಲ್ಲಿ ವೃತ್ತಿವಿಲಯವಾಗಿ, ಪುನಃ ಅದು ಏಳದಿರಲು ಅದಕ್ಕೆ ತುರ್ಯಗಾಭೂಮಿ ಎಂದು ಪೆಸರು.

ಈ ಏಳು ಭೂಮಿಕೆಗಳಲ್ಲಿ ಮೊದಲನೆಯ ಮೂರು ಜಾಗ್ರದವಸ್ಥೆಯೆನಿಸಿ ಕೊಳ್ಳುವದು. ಎಂತೆಂದರೆ;—

**"ಭೂಮಿಕಾತ್ರಿತಯಂ ತ್ವೇತತ್ ರಾಮ ಜಾಗ್ರದಿತಿಸ್ಥಿತಂ"**

ಇದಕ್ಕೆ ಎಲೈ ರಾಮನೇ! ಈ ಮೂರು ಭೂಮಿಕೆಗಳು ಜಾಗ್ರತ್ತಿನಲ್ಲಿರುವವು ಎಂದರ್ಥ. ತಾತ್ಪರ್ಯವೇನೆಂದರೆ;—ಯಾವ ವರಿವಿಗೆ ಭೇದಬುದ್ಧಿ ಇರುವದೋ, ಆ ವರಿವಿಗೆ ಜಗತ್ ಜಾಗ್ರದ್ರೂಪವಾಗಿಯೇ ನೋಡಲ್ಪಡುವದು. ಆ ಮೂರು ಭೂಮಿಕೆಗಳಲ್ಲಿ ದ್ವೈತ ಪ್ರತೀತಿಯಾಗುವದು. ನಾಲ್ಕನೇ ಭೂಮಿಕೆಯು ಸ್ವಪ್ನ ರೂಪವೆಂದು ಪೇಳಲ್ಪಡುವದು. ಎಂತೆಂದರೆ;—"**ಪಶ್ಯಂತಿ ಸ್ವಪ್ನವಲ್ಲೋಕಂ ಚತುರ್ಥೀಭೂಮಿಕಾಮತಾ**" || ಅರ್ಥ—ಸರ್ವ ಜಗತ್ತು ಸ್ವಪ್ನ ದಂತೆ ನೋಡಲ್ಪಡುವದಾವುದೋ, ಅದು ನಾಲ್ಕನೇ ಭೂಮಿಕೆ ಎಂದು ಅಂಗೀ ಕರಿಸುವರು. ತಾತ್ಪರ್ಯವೇನೆಂದರೆ;—ಬ್ರಹ್ಮದ ಅಪರೋಕ್ಷ ಜ್ಞಾನವಾಗಲು ಪ್ರಪಂಚವು ಸ್ವಪ್ನದಂತೆ ಮಿಥ್ಯವೆಂದು ಜ್ಞಾನಿಯು ತಿಳಿಯುವನು. ಮತ್ತು ಪಂಚಮೀ, ಷಷ್ಠೀ, ಭೂಮಿಕೆಗಳು ಸುಷುಪ್ತಿ, ಗಾಢಸುಷುಪ್ತಿ ಎಂದು ಪೇಳಲ್ಪ ಡುವವು. ಎಂತೆಂದರೆ;—

**ಪಂಚಮೀಭೂಮಿಕಾಮೇತ್ಯ ಸುಷುಪ್ತಿಪದನಾಮಿಕಾಂ |**
**ಷಷ್ಠೀಂ ಗಾಢಸುಷುಪ್ತ್ಯಾಖ್ಯಾಂ ಕ್ರಮಾತ್ಪತತಿಭೂಮಿಕಾಂ ||**

ಅರ್ಥಸ್ಪಷ್ಟವಾಗಿದೆ:—ಮತ್ತು ಜಾಗ್ರತ್ಸ್ವಪ್ನ ಸುಷುಪ್ತಿರೂಪವಾದ ಆರು ಭೂ ಮಿಕೆಗಳ ಅಪೇಕ್ಷೆಯಿಂದ ಏಳನೇ ಭೂಮಿಕೆಯು ತುರ್ಯಗಾ ಎನಿಸಿಕೊಳ್ಳು ವದು. ಅದನ್ನು ಪೇಳುವರು. "**ತುರ್ಯಾತುರ್ಯಾಃ ಘನಾನಂದೋ ವೈದೇಹೀಮುಕ್ತಏವಸಃ**" ಇದರ ಅರ್ಥ ಸ್ಪಷ್ಟವಾಗಿದೆ. ಭಾವವೇನೆಂ ದರೆ;—ಐದನೇ ಭೂಮಿಕೆಯುಳ್ಳವನು ಸಮಾಧಿಯಿಂದ ಸ್ವತಃ ಪ್ರಾರಬ್ಧದಿಂ ಪ್ರೇರಿತನಾಗಿ ಉತ್ಥಾನನಾಗುವಂತೆಯೂ, ಆರನೇ ಭೂಮಿಕೆಯವನು ಪರಪ್ರಯ ತ್ನದಿಂದ ಕದಾಚಿತ್ ಉತ್ಥಾನನಾಗುವಂತೆಯೂ 'ತುರ್ಯ' ಅಂದರೆ,

ನಾಲ್ಕನೇ ಅವಸ್ಥಾಸಂಜ್ಞಕವಾದ "ತುರ್ಯಗಾ" ಅಂದರೆ, ಏಳನೇ ಭೂಮಿಕಾರೂಢನು ಸ್ವತಃ ಅಲ್ಲದೆ ಪರಪ್ರಯತ್ನದಿಂದಲೂ ಉತ್ಥಾನನಾಗುವದಿಲ್ಲ. ಆದ್ದರಿಂದವನು ಪರಮಾನಂದಸ್ವರೂಪವಾದ ವಿದೇಹಮುಕ್ತನೇ ಎಂದು ಪೇಳಲ್ಪಡುವನು. ಮತ್ತು

೧:—ಪೂರ್ವದ ಮೂರು ಭೂಮಿಕೆಯಲ್ಲಿರುವವನು- ಬ್ರಹ್ಮಜಿಜ್ಞಾಸುವೆನಿಸಿಕ್ಕೊಳ್ಳುವನು.

೨:—ನಾಲ್ಕನೆ ಭೂಮಿಕೆಯಲ್ಲಿರುವವನು ಬ್ರಹ್ಮವಿತ್ತೆನ್ನಲ್ಪಡುವನು.

೩:—ಮೇಲಣ ಪಂಚಮೀ, ಷಷ್ಠೀ, ಸಪ್ತಮೀ ಭೂಮಿಕಾರೂಢರು ಕ್ರಮದಿಂದ ವರ-ವರೀಯಾನ್-ವರಿಷ್ಠರೆನಿಸಿಕ್ಕೊಳ್ಳುವರು. ಮತ್ತು

೪:—ಮೂರು ಭೂಮಿಕೆಯಲ್ಲಿದ್ದವನಿಗೆ ದೇಹಪಾತವಾಗಲು ಜ್ಞಾನವಿಲ್ಲದ್ದರಿಂದ ಮೋಕ್ಷವಾಗುವದಿಲ್ಲ; ಆದರೆ ಯೋಗಭ್ರಷ್ಟನಾಗುವನು. ಅವನು ಉತ್ತರಜನ್ಮದಲ್ಲಿ ಜ್ಞಾನವಂ ಪಡದು ಮೋಕ್ಷವಂ ಪೊಂದುವನು. ಈ ವಿಷಯ ವಾಸಿಷ್ಠಗ್ರಂಥದಲ್ಲೂ, ಗೀತೆಯಲ್ಲೂ ಪ್ರಸಿದ್ಧವಾಗಿ ಪೇಳಿರುವದು. [ಈ ಗ್ರಂಥದಲ್ಲಿ ಅನೇಕ ಸ್ಥಲಗಳೊಳ್ ಗೀತಾಶಬ್ದ ಬಂದಿರುವದು ಆದ್ದರಿಂದ ಕೃಷ್ಣಾರ್ಜುನರ ಸಂವಾದರೂಪವಾದ ಭಗವದ್ಗೀತೆ ಎಂದು ತಿಳಿಯತಕ್ಕದ್ದು] ಇನ್ನು

೫:—ನಾಲ್ಕನೇ ಭೂಮಿಕಾರೂಢನಾದ ವಿದ್ವಾನುವಿಗಾದರೋ, ಪುನಃ ಜನ್ಮವಾಗುವದಿಲ್ಲ. ಯಾಕೆಂದರೆ;—"ಅವಿದ್ಯಾಕಾಮಕರ್ಮಾಣಿ ಜನ್ಮಾರಂಭಾಣಿಹೇತವಃ" ಈ ಶಾಸ್ತ್ರದಲ್ಲಿ ಅವಿದ್ಯಾ, ಕಾಮ, ಕರ್ಮಗಳು ಜನ್ಮಕ್ಕೆ ಹೇತುವೆಂದು ಪೇಳಲ್ಪಟ್ಟಿರುವದು. ಅವು ಜ್ಞಾನದಿಂದವನಿಗೆ ನಿವರ್ತ್ಯವಾಗಿರುವವು. ಆ ಅವಿದ್ಯವು

(೧) ಮೂಲಾ,

(೨) ತೂಲಾ, ಈ ಭೇದದಿಂದ ಎರಡು ಪ್ರಕಾರವಾಗಿರುವದು. ಅದರಲ್ಲಿ—

೧—ಸ್ವರೂಪಾವರಕವಾದ್ದು 'ಮೂಲಾ ಅವಿದ್ಯಾ' ಅದು ಜ್ಞಾನದಿಂದ ನಿವರ್ತ್ಯಯಾಗುವದು. ಅವಿದ್ಯಾ-ಅಜ್ಞಾನ-ಮಾಯಾ ಇವೆಲ್ಲಾ ಪರ್ಯಾಯಶಬ್ದಗಳು. ಪದಾರ್ಥವೇನೊ ಒಂದೆ. ಇನ್ನು

೨—ಕಾರ್ಯಾವರಕವಾದ್ದು 'ತೂಲಾ ಅವಿದ್ಯಾ' ಎನಿಸುವದು. ಅದು ಅಕಿಂಚಿತ್ಕರವಾದ್ದರಿಂದ ಜನ್ಮಕ್ಕೆ ಹೇತುವಲ್ಲ.

[೧] ಕಾರ್ಯಕ್ಷಮವಾದ್ದು, ಮೂಲಾವಿದ್ಯವು; ಅದು ಅಪರೋಕ್ಷ ಜ್ಞಾನದಿಂದ ನಾಶವಾಗುವದು. ಈ ಮಾತು "**ಕಾರ್ಯಕ್ಷಮಂ ನಶ್ಯತಿ ಚಾಪರೋಕ್ಷತಃ**" ಈ ಶೃತಿಯಲ್ಲೂ ಸ್ಪಷ್ಟವಾಗಿ ಪೇಳಿರುವದು. ಹೀಗೆ

[೨] ಕಾಮವು ಅನೇಕ ಪ್ರಕಾರವಾಗಿರುವದು. ಅದೂ ಕೂಡ ತತ್ವ ಜ್ಞಾನೋದಯವಾಗಲು ಸಂಪೂರ್ಣವಾಗಿ ಅಳಿದುಹೋಗುವದು. ಅದನ್ನು "**ಕಿಮಿಚ್ಛನ್ ಕಸ್ಯಕಾಮಾಯ**" ಈ ಶೃತಿಯು ಕಾಮ್ಯಕಾಮುಕವೆಂಬೆರಡನ್ನು ನಿಷೇಧಿಸಿರುವದು. ಈ ಶೃತಿಯ ವ್ಯಾಖ್ಯಾನರೂಪವೆಲ್ಲ ತೃಪ್ತಿದೀಪವಾಗಿದೆ. ಮತ್ತು

[೩] ಕರ್ಮವು ಮೂರು ಬಗೆಯಾಗಿರುವದು.

(೧) ಸಂಚಿತ,
(೨) ಪ್ರಾರಬ್ಧ,
(೩) ಆಗಾಮಿ, ಎಂದು.

೧—ಯಾವದು ಪೂರ್ವ ದೇಹಾಂತರದಲ್ಲಿ ಮಾಡಲ್ಪಟ್ಟದ್ದಾಗಿಯೂ, ಫಲಾರಂಭವಂ ಮಾಡದಿರುವದಾಗಿಯೂ, ಭಾವೀಜನ್ಮಕ್ಕೆ ಹೇತುವಾಗಿಯೂ ಇರುವದೋ, ಅದು ಸಂಚಿತಕರ್ಮವೆನ್ನಲ್ಪಡುವದು.

೨—ಪೂರ್ವ ಮಾಡಲ್ಪಟ್ಟಿದ್ದು ವರ್ತಮಾನ ಶರೀರದ ಸ್ಥಿತಿಗೆ ಹೇತುವಾದ ಫಲಾರಂಭಕಕರ್ಮವು ಪ್ರಾರಬ್ಧವೆನಿಸಿಕೊಳ್ಳುವದು. ಅದೂ ಕೂಡ,

೧—ಇಚ್ಛಾ,
೨—ಅನಿಚ್ಛಾ,
೩—ಪರೇಚ್ಛಾ; ಈ ಭೇದದಿಂದ ಮೂರು ವಿಧವಾಗಿ ಪೇಳಲ್ಪಡುವದು.

ಎಂತೆಂದರೆ;—"**ಇಚ್ಛಾನಿಚ್ಛಪರೇಚ್ಛಾಚ ಪ್ರಾರಬ್ಧಂ ತ್ರಿವಿಧಂ ಸ್ಮೃತಂ**" ಎಂದು ಪೇಳಿರುವರು. ಬಳಿಕ

೩—ಯಾವದು ವರ್ತಮಾನ [ಈಗಿನ] ಶರೀರದಲ್ಲಿ ಮಾಡಲ್ಪಟ್ಟು ಭಾವೀ [ಮುಂದಣ] ಜನ್ಮಕ್ಕೆ ಹೇತುವಾಗುವದೋ, ಅದು ಆಗಾಮಿ ಕರ್ಮವೆನಿಸಿಕೊಳ್ಳುವದು. [ಇದನ್ನೇ ಕ್ರಿಯಮಾಣವೆಂದೆನ್ನುವರು.] ಆ ತ್ರಿವಿಧ ಕರ್ಮಗಳಲ್ಲೂ,

(೧) ಬ್ರ—ಸೂ|| **ತದಧಿಗಮೇ ಉತ್ತರಪೂರ್ವಾರ್ಧಯೋರಶ್ಲೇಷ ವಿನಾಶೌ ||**

ಈ ವ್ಯಾಸಸೂತ್ರದಲ್ಲಿ ಆ ಬ್ರಹ್ಮ ಸಾಕ್ಷಾತ್ಕಾರವುಳ್ಳ ವಿದ್ವಾಂಸನಿಗೆ, ಪೂರ್ವ ಶಬ್ದವಾಚಿಯಾದ ಸಂಚಿತಕರ್ಮಕ್ಕೆ ನಾಶವಂ ಪೇಳಿರುವದು. ಮತ್ತು ಉತ್ತರ ಶಬ್ದವಾಚಿಯಾದ ಆಗಾಮಿ ಕರ್ಮಕ್ಕೆ ಅಶ್ಲೇಷ [ನಿರ್ಲೇಪ] ವಂ ಪೇಳಿರುವದು. ಹಾಗೆಯೇ

**ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತ**
**ಯಥಾ ಪುಷ್ಕರಪಲಾಶ ಆಪೋನಶ್ಲಿಷ್ಯತೇ ||**

ಈ ಛಾಂದೋಗ್ಯದ ನಾಲ್ಕು ಐದನೆ ಪ್ರಪಾಠಕದ ಶೃತಿಯಲ್ಲಿಯೂ ಅಗ್ನಿಯಲ್ಲಿ ಹಾಕಲ್ಪಟ್ಟ ಇಷೀಕಾತೂಲದಂತೆ ಸಂಚಿತಕರ್ಮಕ್ಕೆ ನಾಶವೂ ಮತ್ತು ಜಲಗತ ಪದ್ಮಪತ್ರದಂತೆ ಕ್ರಿಯಮಾಣಕರ್ಮಕ್ಕೆ ಅಶ್ಲೇಷವೂ ಸ್ಪಷ್ಟವಾಗಿ ಪೇಳಿರುವದು. ತಾತ್ಪರ್ಯವೇನೆಂದರೆ;—

(೨)—ಆಗಾಮಿ ಕರ್ಮದ ಸ್ಪರ್ಶವು ಜ್ಞಾನಿಗೆ ಆಗುವದಿಲ್ಲ; ಏನುಕಾರಣವೆಂದರೆ;—ಶುಭಕರ್ಮದ ಫಲವು ಪ್ರಿಯವಾದಿಯಾದ ಭಕ್ತನಿಗೂ, ಅಶುಭ ಕರ್ಮದ ಫಲವು ದ್ವೇಷಿಗೂ ಆಗುವದು. ಈ ಮಾತು "**ಸುಹೃದಃಸಾಧುಕೃತ್ಯಾಂ ದ್ವಿಷಂತಃಪಾಪಕೃತ್ಯಾಂ—ತದ್ವೇಷೀಪ್ರಿಯವಾದಿನಃ**" ಇತ್ಯಾದಿ ಶೃತಿಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಬಳಿಕ

(೩)—ಪ್ರಾರಬ್ಧಕರ್ಮಕ್ಕಾದರೋ, ಭೋಗದಿಂದಲೇ ನಾಶವಾಗುವದು. ಅಲ್ಲಿ ವ್ಯಾಸಸೂತ್ರ

**ಬ್ರ— ಸೂ|| ಭೋಗೇನತ್ವಿತರೇಕ್ಷಪಯಿತ್ವಾಸಂಪದ್ಯತೇ ||**

**ಅರ್ಥ**—ಇತರೇ—ಅಂದರೆ, ಸಂಚಿತಾಗಾಮಿಗಳಿಂ ಭಿನ್ನವಾದ ಪ್ರಾರಬ್ಧ ಕರ್ಮವು; ಅದನ್ನು ವಿದ್ವಾನ್ ಭೋಗದಿಂದ ಮುಗಿಸಿಕೊಂಡು ಕೈವಲ್ಯಮೋಕ್ಷವಂ ಪೊಂದುವನು.

ಆದ್ದರಿಂದ ಪ್ರಾರಬ್ಧಕರ್ಮವು ಬಿಡಲ್ಪಟ್ಟ ಬಾಣದಂತೆ ಫಲವಂ ಕೊಟ್ಟಲ್ಲದೆ ನಾಶವಾಗುವದಿಲ್ಲ; ಅದನ್ನು "**ನಾಭುಂಕ್ತೆಕ್ಷೀಯತೇಕರ್ಮ—ಪ್ರಾರಬ್ಧಂಭೋಗತೋನಶ್ಯೇತ್**" ಇತ್ಯಾದಿ ಶಾಸ್ತ್ರಗಳಲ್ಲಿಯೂ ಪ್ರಸಿದ್ಧವಾಗಿ ಪೇಳಿರುವದು. ಆದರೆ ಇದು ವಾದಿಗಳ ಶಂಕಾಪರಿಹಾರಾರ್ಥವಾದ ಲಿಖಿತವಾಗಿದೆ.

ಇನ್ನು ಜ್ಞಾನಿಯ ದೃಷ್ಟಿಯಿಂದಲೂ, ಅಥವಾ "**ಕ್ಷೀಯಂತೇಚಾಸ್ಯಕರ್ಮಾಣಿ—ಜ್ಞಾನಾಗ್ನಿಸ್ಸರ್ವಕರ್ಮಾಣಿ**" ಈ ಶೃತಿ ಸ್ಮೃತಿಗಳ

ತಾತ್ಪರ್ಯವಿಚಾರದಿಂದಲೂ, ಅದ್ವಯಬ್ರಹ್ಮದ ಜ್ಞಾನವಾಗಲು ಪ್ರಾರಬ್ಧಕ್ಕೂ ಸಂಭವವಿಲ್ಲ; ಮತ್ತು ಪ್ರಾರಬ್ಧವನ್ನಂಗೀಕರಿಸಿದರೆ;—ಅನೇಕ ದೋಷಗಳ ಪ್ರಾಪ್ತಿಯಾಗುವವು. ಅದನ್ನು ಆಚಾರ್ಯರು ಸಿದ್ಧಾಂತ ಗ್ರಂಥಗಳಲ್ಲಿ ಸ್ಪಷ್ಟವಾಗಿ ಹೇಳಿದಾರೆ. ಇದರಿಂದ ಏನು ಸಿದ್ಧವಾಯಿತೆಂದರೆ;—ಚತುರ್ಥೀಭೂಮಿಕಾರೂಢನಾದ ಬ್ರಹ್ಮವಿತ್ತುವಿಗೆ ಪುನಃ ಸಂಸಾರವಾಗುವದಿಲ್ಲ; ಮತ್ತೇನೆಂದರೆ ವಿದೇಹಮೋಕ್ಷವಾಗುವದು.

ಹ್ಯಾಗೂ ಮೋಕ್ಷವಿಷಯದಲ್ಲಿ ಸಂದೇಹವಿಲ್ಲ; ಆದಾಗ್ಯೂ ಸಮಾಧಿಯ ಅಭಾವದಿಂದಲೂ, ಮತ್ತು ವಿಕ್ಷೇಪಶಕ್ತಿಯ ಸದ್ಭಾವದಿಂದಲೂ, ಅವನಿಗೆ ಜೀವನ್ಮುಕ್ತಿಯ ವಿಲಕ್ಷಣ ಸುಖದ ಲಾಭವಾಗುವದಿಲ್ಲ; ಆ ವೃತ್ತಿಜನ್ಯವಾದ ವಿಶೇಷ ಸುಖವು ಉತ್ತರಭೂಮಿಕೆ ಉಳ್ಳವನಿಗೇ ಆಗುವದು. ಎಂತೆಂದರೆ;—ಅವನು

(೧) ವೈರಾಗ್ಯ,

(೨) ಬೋಧ,

(೩) ಉಪರತಿ; ಈ ಮೂರನ್ನು ಫಲಾವಧಿ ಪರ್ಯಂತರ ಸಂಪಾದನೆಗೈದಿರುವನು. ಮತ್ತು

೧—ತತ್ವಬೋಧ,

೨—ಮನೋನಾಶ,

೩—ವಾಸನಾಕ್ಷಯ, ಇವು ಮೂರನ್ನು ಬಹುಕಾಲ ಒಟ್ಟಿಗೆ ಅಭ್ಯಾಸ ಮಾಡಿರುವನು. ಆದ್ದರಿಂದ ಸಮಾಧಿಯುಕ್ತನಾದ ಜೀವನ್ಮುಕ್ತನು ಸದಾ ಬ್ರಹ್ಮಾನಂದದಲ್ಲಿ ನಿಮಗ್ನನಾಗಿರುವನು.

ಅ|| ಈಗ ವೈರಾಗ್ಯಾದಿ ಮೂರಕ್ಕೆ ಹೇತು, ಸ್ವರೂಪ, ಫಲ, ಅವಧಿಯನ್ನು ತೋರಿಸುವರು.

## ೧—ವೈರಾಗ್ಯಕ್ಕೆ ಹೇತ್ವಾದಿಗಳು :—

(೧) ವಿಷಯಗಳಲ್ಲಿ ದೋಷದೃಷ್ಟಿಯು ವೈರಾಗ್ಯಕ್ಕೆ ಹೇತುವೆನಿಸುವದು.

(೨) ವಿಷಯಗಳ ತ್ಯಾಗದ ಇಚ್ಛೆಯು ವೈರಾಗ್ಯಕ್ಕೆ ಸ್ವರೂಪವೆನಿಸುವದು.

(೩) ಪುನಃ ಭೋಗಗಳಲ್ಲಿ ದೀನತೆಯಂ ಪಡೆಯದೆ ಇರುವದು ವೈರಾಗ್ಯಕ್ಕೆ ಫಲವೆನಿಸುವದು.

೧—ವಿಷಯಗಳ ದೋಷವ್ಯಾವದೆಂದರೆ;—ಒಂದೊಂದು ವಿಷಯದ ಸಂಬಂಧದಿಂದಲೆ ಮೃಗ, ಮಾತಂಗ, ಪತಂಗ, ಭೃಂಗಾದಿಗಳಿಗೆ ಮೃತ್ಯುವುಂಟಾ

ಯಿತು. ಹೀಗಾದ ಬಳಿಕ ಒಬ್ಬ ಪುರುಷನು ಐದು ವಿಷಯಗಳನ್ನ ಸೇವಿಸಿದರೆ ಅವನು ನಾಶವಾಗುವನು ಯೆಂಬುವದರಲ್ಲಿ ಪೇಳತಕ್ಕದ್ದೇನು ? ಈ ಮಾತು "ಏಕಪ್ರಮಾಥೀಸಕಥಂ ನಹನ್ಯತೇ ಯಃ ಸೇವತೇ ಪಂಚಭಿರೇವ ಪಂಚ" ಇತ್ಯಾದಿ ವಾಕ್ಯಗಳಿಂದ ಶಾಸ್ತ್ರಗಳಲ್ಲಿ ಪ್ರಸಿದ್ಧಪಡಿಸಿರುವದು. ಮತ್ತು

೨—ವಿಷಯಗಳ ಧ್ಯಾನದಲ್ಲಿ "ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ" ಇತ್ಯಾದಿ ವಾಕ್ಯಗಳಿಂದ ಗೀತೆಯಲ್ಲಿ ವಿಷಯಗಳ ಧ್ಯಾನ ಮಾತ್ರದಿಂದ ಗುಣತ್ವ ಬುದ್ಧಿ ಎಂಬ ಸಂಗವೂ, ಅದರಿಂದ ಕಾಮ ಕ್ರೋಧಾದಿ ಆರು ಮಹಾ ಅನರ್ಥವೂ ಪೇಳಿರುವದು.

೩—ಹಾಗೆಯೇ ಅದರ ಸಾಧನವಾದ ಸ್ತ್ರೀಪುತ್ರ ಧನಾದಿಗಳಲ್ಲಿಯೂ ಬಹಳವಾದ ದೋಷವನ್ನು ಶಾಸ್ತ್ರಗಳಲ್ಲಿ ಪೇಳಿರುವದು. ಅದೆಂತೆಂದರೆ—

### (೧) ಸ್ತ್ರೀಯಲ್ಲಿ ದೋಷಃ—

"ಅನೃತಂ ಸಾಹಸಂ ಮಾಯಾ" ಇತ್ಯಾದಿವಾಕ್ಯದಿಂದ (೧) ಅನೃತ (೨) ಸಾಹಸ (೩) ಮಾಯಾ (೪) ಕಪಟ (೫) ಮೂರ್ಖತ್ವ (೬) ಅತಿಲೋಭಿತ್ವ (೭) ಅಶೌಚತ್ವ (೮) ನಿರ್ದಯತ್ವ, ಇವು ಸ್ವಾಭಾವಿಕವಾಗಿ ಸ್ತ್ರೀಯರ ಅಷ್ಟದೋಷಗಳೆನಿಸುವವು. ಮತ್ತು ಧರ್ಮ, ಅರ್ಥ, ಮೋಕ್ಷಗಳನ್ನು ಹಾಳು ಮಾಡುವರೆಂದು ಪೇಳಿರುವದು.

### (೨) ಪುತ್ರನಲ್ಲಿ ದೋಷಃ—

"ಅಲಭ್ಯಮಾನಸ್ತನಯಃ ಪಿತರೌ ಕ್ಲೇಶಯೇಚ್ಚಿರಂ" ಇತ್ಯಾದಿ ವಾಕ್ಯಗಳಿಂದ ಪುತ್ರನು ಲಾಭವಾಗದಿದ್ದರೆ, ಮಾತಾಪಿತೃಗಳಿಗೆ ಬಹುಕಾಲ ದುಃಖ ಮೊದಲುಗೊಂಡು ಗರ್ಭಪಾತದಿಂದಲೂ, ಜನ್ಮಕಷ್ಟದಿಂದಲೂ, ವಿಪರೀತ ಗ್ರಹಗಳಿಂದಲೂ, ರೋಗಾದಿ ನಿಮಿತ್ತದಿಂದಲೂ, ಅಪರಿಶುದ್ಧತೆಯಿಂದಲೂ, ಅಥವಾ ವ್ಯಸನಾದಿಗಳಿಂದಲೂ, ಬಳಿಕ ವಿವಾಹವಿಲ್ಲದ್ದರಿಂದಲೂ, ವಿವಾಹವಾದರೂ ಸಂತತಿಯ ಅಭಾವದಿಂದಲೂ, ಅಥವಾ ಬಹು ಕುಟುಂಬಿಯಾದರೆ, ಧನ ಹೀನತೆಯಿಂದಲೂ, ಧನವಿದ್ದರೆ ಸ್ವವಶಾಭಾವದಿಂದಲೂ, ವಶದಲ್ಲಿದ್ದರೆ ಮೃತ್ಯುವಿನಿಂದಲೂ ದೊಡ್ಡ ದುಃಖವಾಗುವದು. ಇತ್ಯಾದಿ ಅನೇಕ ದೋಷಗಳನ್ನು ಪುತ್ರನ ವಿಷಯದಲ್ಲಿ ಪೇಳಿರುವದು.

### (೩) ದ್ರವ್ಯದಲ್ಲಿ ಅನರ್ಥ:—

" ಅರ್ಥಾನಾಮಾರ್ಜನೇ ದುಃಖಂ " ಇತ್ಯಾದಿ ವಾಕ್ಯಗಳಿಂದ ದ್ರವ್ಯದ ಸಂಪಾದನೆಯಲ್ಲಿಯೂ, ಪಾಲನೆಯಲ್ಲಿಯೂ, ವ್ಯಯದಲ್ಲಿಯೂ, ವಿನಾಶದಲ್ಲಿಯೂ ದುಃಖವಂ ಪೇಳಿರುವದು. ಮತ್ತು ಭಿಕ್ಷುಗೀತೆಯಲ್ಲಿ ಹಿಂಸಾದಿ ಪಂಚದಶ ಅನರ್ಥವಂ ದ್ರವ್ಯದಲ್ಲಿ ಪೇಳಿರುವದು.

### (೪) ಇಹಲೋಕ ದುಃಖ:—

" ಜನ್ಮಮೃತ್ಯುಜರಾವ್ಯಾಧಿ ದುಃಖ ದೋಷಾನು ದರ್ಶನಂ " ಈ ಗೀತಾವಾಕ್ಯದಿಂದ ಜನ್ಮಿಸಿದ್ದು ಮೊದಲುಗೊಂಡು ಬಾಲ್ಯ, ಯೌವನ, ಮುಪ್ಪು, ಜ್ವರ ಮೃತ್ಯು, ಸಪ್ತಧಾತು ಪ್ರವೇಶ, ಗರ್ಭವಾಸ, ನರಕಾದಿ ದುಃಖಗಳು ಪದೇ ಪದೇ ಆಗುವವು. ಇತ್ಯಾದಿ ದೋಷಗಳು ಗರ್ಭೋಪನಿಷತ್ತಿನಲ್ಲಿಯೂ, ಮತ್ತು ಆತ್ಮಪುರಾಣದಲ್ಲಿಯೂ, ಪೇಳಿರುವದು.

### (೫) ಪರಲೋಕ ದುಃಖ:—

ಮತ್ತು ಸ್ವರ್ಗಾದಿ ಭೋಗಗಳಲ್ಲಿಯೂ, " ಕ್ಷಯಾತಿಶಯ ದೋಷೇಣ ಸ್ವರ್ಗೋಹೇಯೋಯದಾತದಾ " ಇತ್ಯಾದಿ ವಾಕ್ಯಗಳಿಂದ ಅನೇಕ ದೋಷವಂ ಪೇಳಿರುವದು. ಆ ಸಮಸ್ತ ದೋಷಗಳ ದರ್ಶನವು ವೈರಾಗ್ಯಕ್ಕೆ ಹೇತುವಾಗುವದು.

ಅಥವಾ ವಿವೇಕ, ಅಥವಾ ಸ್ವಧರ್ಮ, ಅಥವಾ ಪರಮೇಶ್ವರಾನುಗ್ರಹವೂ ಕೂಡ, ವೈರಾಗ್ಯಕ್ಕೆ ಹೇತುವೆನಿಸುವದು.

ಆ ವೈರಾಗ್ಯವು (೧) ಮಂದ (೨) ತೀವ್ರ (೩) ತೀವ್ರತರ ಈ ಭೇದದಿಂದ ಮೂರು ವಿಧವಾಗಿರುವದು. ಅವುಗಳಲ್ಲಿ ತೀವ್ರತರವನ್ನು ಇಲ್ಲಿ ಅಂಗೀಕರಿಸಿದೆ. ಅಥವಾ:—

(೧) ಪರ,

(೨) ಅಪರ, ಈ ಭೇದದಿಂದ, ವೈರಾಗ್ಯವು ಎರಡು ಪ್ರಕಾರವಾಗಿರುವದು. ಅದರಲ್ಲಿ ಅಪರವೆಂಬುದು ಪುನಃ ನಾಲ್ಕು ಪ್ರಕಾರವಾಗಿದೆ,

೧—ಯತಮಾನ,

೨—ವ್ಯತಿರೇಕ,

೩—ಏಕೇಂದ್ರಿಯ,

೪—ವಶೀಕಾರ. ಅವುಗಳಲ್ಲಿ—

[೧] ತ್ಯಾಗದ ನಿಮಿತ್ತ ಉದ್ಯೋಗೋತ್ಕರ್ಷಕ್ಕೆ « ಯತಮಾನ » ವೆಂದು ಪೆಸರು. (ಇದನ್ನೇ ಮಂದ ವಿವೇಕವೆಂದೆನ್ನುವರು)

[೨] ವಿದ್ಯಮಾನ ದೋಷಗಳ ಭಾವಾಭಾವ ವಿವೇಕಕ್ಕೆ « ವ್ಯತಿರೇಕ » ವೆಂದು ಪೆಸರು.

[೩]—ಬಾಹ್ಯವಿಷಯುಗಳನ್ನು ತ್ಯಾಗವಾಡಿದರೂ, ತೃಷ್ಣೆಯು ಔತ್ಸುಕ್ಯಮಾತ್ರಮನದಲ್ಲಿರುವದಕ್ಕೆ « ಏಕೇಂದ್ರಿಯ » ವೆಂದು ಪೆಸರು.

[೪]—ಸರ್ವಥಾ ಆಶೆ ಇಲ್ಲದೆ ಇರುವದಕ್ಕೆ « ವಶೀಕಾರ ವೈರಾಗ್ಯ » ವೆಂದು ಪೆಸರು. ಈ ವಾತು

ಯೋ—ಸೂ॥ ದೃಷ್ಟಾನುಶ್ರಾವಿಕ ವಿಷಯ ವಿತೃಷ್ಣಸ್ಯ
ವಶೀಕಾರ ಸಂಜ್ಞಾವೈರಾಗ್ಯಂ॥

ಈ ಸೂತ್ರದಿಂಡ ಪತಂಜಲಿ ಭಗವಂತನು ಪ್ರಸಿದ್ಧವಾಗಿ ಪೇಳಿರುವನು.

ಈ ವಶೀಕಾರ ವೈರಾಗ್ಯವು ಸಂಪ್ರಜ್ಞಾತ ಸಮಾಧಿಗೆ ಅಂತರಂಗ ಸಾಧನವಾಗಿರುವದು. ಆದ್ದರಿಂದ ಯೋಗಿಯು ಇದನ್ನು ಜ್ಞಾನಪ್ರಸಾದವೆಂದೆನ್ನುವನು.

ಅ॥ ಈಗ ಪರ ವೈರಾಗ್ಯವನ್ನು ತೋರಿಸುವರು.

## ಪರವೈರಾಗ್ಯ:—

ತ್ರಿಗುಣಾತ್ಮಕ ಪ್ರಧಾನದಿಂ ಪೃಥಕ್ಕಾದ ಪುರುಷನ ಸಾಕ್ಷಾತ್ಕಾರವಾಗಿ ಸರ್ವಮಾಯಾ ಗುಣಗಳಲ್ಲಿ ಆಶೆ ಇಲ್ಲದೆ ಇರುವದಕ್ಕೆ ಪರ ವೈರಾಗ್ಯವೆಂದು ಪೆಸರು. ಅದು ಅಸಂಪ್ರಜ್ಞಾತ ಸಮಾಧಿಗೆ ಅಂತರಂಗ ಸಾಧನವಾಗಿರುವದು. ಅದನ್ನೂ ಕೂಡ, ಯೋಗಶಾಸ್ತ್ರದಲ್ಲಿ ಪೇಳಿರುವದು. ಆ ವೈರಾಗ್ಯವಂತನಿಗೆ ಚಕ್ರವರ್ತಿ ರಾಜನೇ ಆದಿಯಾಗಿ, ಬ್ರಹ್ಮನ ಪರ್ಯಂತವಾದ ಶತಶತ ಗುಣ ಸುಖಾತಿಶಯದಿಂದ ಉತ್ತರೋತ್ತರ ಸುಖಕ್ಕೋಸುಗ ಸರ್ವರಿಗೂ ಯಾವ ದೀನತ್ವವಾಗುವದೋ, ಅದು ಆಗುವದಿಲ್ಲ; ಇದು ವೈರಾಗ್ಯಕ್ಕೆ ಫಲವು.

ಅ॥ ಈಗ ಜ್ಞಾನದ ಹೇತು, ಸ್ವರೂಪ, ಫಲಗಳನ್ನು ತೋರಿಸುವರು.

## ೨—ಜ್ಞಾನದ ಹೇತ್ವಾದಿಗಳು:—

(೧)—ವೇದಾಂತ ಶಾಸ್ತ್ರವಿಚಾರವು ಜ್ಞಾನಕ್ಕೆ ಹೇತುವಾಗಿರುವದು. ಅದನ್ನು ಪೇಳುವರು.

" ವೇದಾಂತಾರ್ಥವಿಚಾರೇಣ ಜಾಯತೇ ಜ್ಞಾನಮಾತ್ರಮಂ "

ಶಂಕಾ, ಸಮಾಧಾನ:—ಯಾವನಾದರು ಒಬ್ಬನು ಇತರ ಶಾಸ್ತ್ರಗಳಿಂದ ಜ್ಞಾನವ್ಯಾಕೆ ಆಗುವದಿಲ್ಲವೆಂದರೆ;—ಅದನ್ನು ಕೇಳು !

ಬ್ರಹ್ಮಾತ್ಮರ ಏಕತ್ವಜ್ಞಾನವು ಇತರ ಶಾಸ್ತ್ರಗಳಿಂದ ಉಂಟಾಗುವದಿಲ್ಲ; ಯಾಕೆಂದರೆ;—

ಶ್ಲೋ॥ ಕರ್ಮಶಾಸ್ತ್ರೇಕುತೋಜ್ಞಾನಂ ತರ್ಕೇನೈವಾಸ್ತಿನಿಶ್ಚಯಃ ||
ಸಾಂಖ್ಯಯೋಗೌಭಿದಾಪನ್ನಾ ಶಾಬ್ದಿಕಾ ಶಬ್ದತತ್ಪರಾಃ ||
ಅನ್ಯೇಪಾಖಂಡಿನಃ ಸರ್ವೇ ಜ್ಞಾನವಾರ್ತಾಸುದುರ್ಬಲಾಃ||
ಏಕವೇದಾಂತವಿಜ್ಞಾನ ಸ್ವಾನುಭೂತ್ಯಾವಿರಾಜತೇ ||

ಇತ್ಯಾದಿ ವಾಕ್ಯಗಳಿಂದ ಗ್ರಂಥಾಂತರದಲ್ಲಿ ಅವುಗಳಂ ನಿಷೇಧಿಸಿರುವದು. ಆದಕಾರಣ ಕೇವಲ ವೇದಾಂತ ವಿಚಾರದಿಂದಲೇ ಅದ್ವಯ ಜ್ಞಾನವಾಗುವದು.

ಆ ವೇದಾಂತವಾಕ್ಯವು ಎರಡು ಬಗೆಯಾಗಿರುವದು.

೧—ಅವಾಂತರವಾಕ್ಯ,

೨— ಮಹಾವಾಕ್ಯ. ಅದರಲ್ಲಿ—

(೧) ಅವಾಂತರ ವಾಕ್ಯವಾದರೂ, ಕೆಲವು ತ್ವಂಪದದ ಅರ್ಥವಂ ಬೋಧಿಸುವವು. ಕೆಲವು ತತ್ಪದದ ಅರ್ಥವಂ ಬೋಧಿಸುವವು.

೧—" ಯ ಏಷ ಹೃದ್ಯಂತರ್ಜ್ಯೋತಿಃ ಪುರುಷಃ " ಇತ್ಯಾದಿಗಳು ತ್ವಂಪದದ ಅರ್ಥದ ಬೋಧಕವಾಗಿರುವದು.

೨—ತತ್ಪದದ ಅರ್ಥವಂ ಬೋಧಿಸುವದಾದರೂ,

೧—ಸವಿಕಲ್ಪ,

೨— ನಿರ್ವಿಕಲ್ಪ,

೩—ಪ್ರಕೃತಿ. ಈ ಭೇದದಿಂದ ಮೂರು ವಿಧವಾಗಿ ಪೇಳಿರುವದು.

(೧) " ಯತೋವಾ ಇಮಾನಿ ಭೂತಾನಿ ಜಾಯಂತೆ " ಇತ್ಯಾದಿಗಳು ಸವಿಕಲ್ಪ ವಾಕ್ಯವೆನಿಸುವವು.

(೨) " ಸತ್ಯಂಜ್ಞಾನಮನಂತಂಬ್ರಹ್ಮ " ಇತ್ಯಾದಿಗಳು ನಿರ್ವಿಕಲ್ಪವಾಕ್ಯವೆನಿಸುವವು.

(೩) " ಸೋಽಯಮಾತ್ಮಾ " ಇತ್ಯಾದಿಗಳು ಪ್ರಕೃತಿ ವಾಕ್ಯವೆನಿಸುವವು.

[೧] ಈ ಅವಾಂತರ ವಾಕ್ಯಗಳಿಂದ ಪರೋಕ್ಷ ಜ್ಞಾನವಾಗುವದಲ್ಲದೆ ಅಪರೋಕ್ಷ ಜ್ಞಾನವಾಗುವದಿಲ್ಲ; ಅದನ್ನು ಹೇಳುವರು. " ಅವಾಂತರೇಣ ವಾಕ್ಯೇನ ಪರೋಕ್ಷ ಬ್ರಹ್ಮಧೀರ್ಭವೇತ್ " ಬ್ರಹ್ಮ ಇದೆ ಎಂದು ತಿಳಿಯುವದಕ್ಕೆ ಪರೋಕ್ಷ ಜ್ಞಾನವೆಂದು ಹೆಸರು. ಅದನ್ನು ಹೇಳುವರು. " ಅಸ್ತಿ ಬ್ರಹ್ಮೇತಿಚೇದ್ವೇದ ಪರೋಕ್ಷ ಜ್ಞಾನಮೇವತತ್ "

[೨] ಮಹಾವಾಕ್ಯದಿಂದ ಅಪರೋಕ್ಷ ಜ್ಞಾನವಾಗುವದು. ಆ ಮಹಾವಾಕ್ಯಗಳ ಅರ್ಥವು ಹಿಂದೆ ಹೇಳಲ್ಪಟ್ಟಿರುವದು. ನಾನು ಬ್ರಹ್ಮವಾಗಿದೇನೆ. ಹೀಗೆ ತಿಳಿಯುವದಕ್ಕೆ ಅಪರೋಕ್ಷ ಜ್ಞಾನವೆಂದು ಹೆಸರು. ಅದನ್ನು ಹೇಳುವರು. " ಅಹಂ ಬ್ರಹ್ಮೇತಿಚೇದ್ವೇದ ಸಾಕ್ಷಾತ್ಕಾರಃ ಸ ಉಚ್ಯತೆ" ಆದ್ದರಿಂದ ಅದ್ವಯ ಜ್ಞಾನಕ್ಕೆ ಶ್ರೋತ್ರ ಸಂಬಂಧಿಯಾದ ಮಹಾವಾಕ್ಯದ ಶ್ರವಣವೇ ಹೇತುವೆನಿಸುವದು.

ಮತ್ತು ಅಪರೋಕ್ಷ ಜ್ಞಾನದ ದೃಢತೆಗೋಸುಗ ಆ ಶ್ರವಣಾದಿಗಳನ್ನು ಅಭ್ಯಾಸಿಸಬೇಕು. ಪುನಃ ಪುನಃ ಆವೃತ್ತಿಗೈಯುವದಕ್ಕೆ ಅಭ್ಯಾಸವೆಂದು ಹೆಸರು. ಈ ಮಾತು

ಬ್ರ— ಸೂ|| ಆವೃತ್ತಿ ರಸಕೃದುಪದೇಶಾತ್ ||

ಈ ವ್ಯಾಸ ಸೂತ್ರದಲ್ಲಿಯೂ, ವಿಧಾನ ಗೈದಿರುವದು. ಮತ್ತು " ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ " ಈ ಶೃತಿಯೂ ಕೂಡ ಜ್ಞಾನಕ್ಕೋಸುಗ ಶ್ರವಣ, ಮನನ, ನಿದಿಧ್ಯಾಸನದ ವಿಧಾನವಂ ಮಾಡಿರುವದು. ಆದ್ದರಿಂದ ಮಹಾವಾಕ್ಯ ಶ್ರವಣ—ಅಥವಾ ಶ್ರವಣಾದಿ ಮೂರು ಜ್ಞಾನಕ್ಕೆ ಹೇತುವಾಗಿರುವದು.

(೨) ಇನ್ನು ತಥ್ಯಮಿಥ್ಯಾ ವಿವೇಚನದ ಪೂರ್ವಕ ಅದ್ವಯ ನಿಶ್ಚಯವು ಜ್ಞಾನಕ್ಕೆ ಸ್ವರೂಪವೆನಿಸುವದು (೩). ಆ ಜ್ಞಾನದಿಂದ ಅಹಂಗ್ರಂಥಿಯ ಭೇದನವಾಗುವದು. ಅದನ್ನು " ಭಿದ್ಯತೇ ಹೃದಯಗ್ರಂಥಿಃ— ಏತದ್ಯೋವೇದ ನಿಹಿತಂ ಗುಹಾಯಾಂ, ಸೋಽವಿದ್ಯಾಗ್ರಂಥಿಂ ವಿಕಿರತಿ" ಇತ್ಯಾದಿ ಶೃತಿಗಳಲ್ಲಿ ಪ್ರಸಿದ್ಧವಾಗಿ ಹೇಳಿರುವದು. ಆ ಗ್ರಂಥಿಯ ಅನುದಯವೇ ಜ್ಞಾನಕ್ಕೆ ಫಲವು.

(ಟ) ಕರ್ತೃತ್ವ ಧರ್ಮವುಳ್ಳ ಅಹಂಕಾರಕ್ಕೂ ಜ್ಞಾನಸ್ವರೂಪನಾದ ಆತ್ಮನಿಗೂ ತಾದಾತ್ಮ್ಯಾಧ್ಯಾಸವೇ ಅಹಂಗ್ರಂಥಿ ಎನಿಸುವದು. ಅದನ್ನು ಪೇಳುವರು.

**ಅಹಂಕಾರಸ್ಯ ಕರ್ತೃತ್ವಂ ಚಿತ್ಯಧ್ಯಸ್ಯ ತಥಾ ಚಿತಃ ||**
**ಸ್ಫುರತಿಂ ಚಾಕೃತೌ ಗ್ರಂಥಿಂ ಕುರ್ಯಾನ್ಮಾಯಾತಯೋ ರ್ದೃಢಂ ||**

ಆ ಕಲ್ಪಿತಾಧ್ಯಾಸವು ಜ್ಞಾನದಿಂದ ನಿವೃತ್ತಿಯಾಗುವದು. ಎಂತೆಂದರೆ;— ಅಹಂಕಾರದ ತಾದಾತ್ಮ್ಯವು ಮೂರು ವಿಧವಾಗಿ ಪೇಳಲ್ಪಡುವದು.

೧—ಭ್ರಮಜ,
ಅಹಂಕಾರಮುನಸು ೨—ಕರ್ಮಜ,
೩—ಸಹಜ.

(೧) ಸಾಕ್ಷಿಯೊಡನೆ ಅಹಂಕಾರಕ್ಕೆ ಭ್ರಮಜ ತಾದಾತ್ಮ್ಯವು,

(೨) ದೇಹದೊಡನೆ ಕರ್ಮಜ ತಾದಾತ್ಮ್ಯವು,

(೩) ಆಭಾಸದೊಡನೆ ಸಹಜ ತಾದಾತ್ಮ್ಯವೂ ವುಂಟು. ಅವುಗಳಲ್ಲಿ ಜ್ಞಾನದಿಂದ್ದ ಭ್ರಮಜ ತಾದಾತ್ಮ್ಯದ ನಿವೃತ್ತಿಯಾಗುವದು. ಮತ್ತು ದೇಹ ಪಾತದವರಿವಿಗೆ ಉಳಿದ ಎರಡೂ ಇರುತ್ತಿರುವವು; ಅವುಗಳಲ್ಲಿ ಮಿಥ್ಯಾತ್ವವಂ ನಿಶ್ಚಯಿಸಿರುವ ಜ್ಞಾನವಂತನಿಗೆ ಏನೂ ಕ್ಷತಿಯಾಗುವದಿಲ್ಲ.

ತಾತ್ಪರ್ಯವೇನೆಂದರೆ ;—ಅಹಂಶಬ್ದದ ಅರ್ಥವು.

ಒಂದು ಮುಖ್ಯ, ಮತ್ತೊಂದು
ಅಮುಖ್ಯವೆಂದು ಎರಡು ವಿಧವಾಗಿರುವದು.

[೧] ಕೂಟಸ್ಥ–ಆಭಾಸ–ದೇಹ ಇವು ಮೂರನ್ನು ವಿವೇಚನೆಮಾಡದೆ ಏಕೀಭಾವದಿಂದ ಯಾವ "ಅಹಂ" ಎಂಬುವದುಂಟೊ, ಅದು ಮುಖ್ಯವೆನಿಸುವದು. ಅದರಲ್ಲಿ ಮೂಢನು ಸಿಕ್ಕಿಕೊಳ್ಳುವನು. ಅದನ್ನು ಪೇಳುವರು.

**ಅನ್ಯೋನ್ಯಾಧ್ಯಾಸರೂಪೇಣ ಕೂಟಸ್ಥಾಭಾಸಯೋರ್ವಪುಃ ||**
**ಏಕೀಭೂಯ ಭವೇನ್ಮುಖ್ಯ ಸ್ತತ್ರಮೂಢೈಃಪ್ರಯುಜ್ಯತೇ ||**

[೨] ಬಳಿಕ ಅಹಂಶಬ್ದದ ಅಮುಖ್ಯಾರ್ಥವು ದ್ವಿವಿಧವಾಗಿರುವದು. ಅದರಲ್ಲಿ ಪರ್ಯಾಯದಿಂದ ವಿದ್ವಾನ್ ವ್ಯವಹಾರಗೈಯ್ಯುವನು.

೧—'ಅಹಂಗಚ್ಛಾಮಿ' ಇತ್ಯಾದಿ ಲೌಕಿಕವ್ಯವಹಾರ ಕಾಲದಲ್ಲಿ ವಿದ್ವಾನ್ ಅಹಂಶಬ್ದದ ಅರ್ಥವನ್ನು ಆಭಾಸನಲ್ಲಿ ಜೊತೆಗೊಳಿಸುವನು.

೨—'ಅಸಂಗೋಽಹಂ, ಶಿವೋಽಹಂ, ಶುದ್ಧೋಽಹಂ' ಈ ವೈದಿಕ ವ್ಯವಹಾರದಲ್ಲಿ ಅಹಂಶಬ್ದದ ಅರ್ಥವನ್ನು ಕೂಟಸ್ಥನಲ್ಲಿ, ಯೋಜನೆಗೊಳಿಸುವನು. ಅಂದರೆ ;—[ಶರೀರಾದಿ ಬಾಹ್ಯವ್ಯಾಪಾರದಲ್ಲಿ ಆಭಾಸನಿಗೂ, ಸ್ವರೂಪವಿಚಾರದಲ್ಲಿ ಸಾಕ್ಷಿಚೇತನಕ್ಕೂ ಅಹಂಶಬ್ದದ ಅರ್ಥವಂ ತಿಳಿಯುವನು.]

ಆದ್ದರಿಂದ ಗ್ರಂಥಿಭೇದನವಾಗಲು ಪುನಃ ಅಹಂಕಾರಾದಿ ದೃಶ್ಯವರ್ಗದೊಡನೆ ದಧಿಯಿಂದುದ್ಧೃತವಾದ ಸರ್ಪಿಯಂತೆ ತಾದಾತ್ಮ್ಯಾಧ್ಯಾಸವಾಗುವದಿಲ್ಲ ; ಅದನ್ನು ಪೇಳುವರು—

**ಕ್ಷೀರಾತ್ಸರ್ಪಿರ್ಯಥೋದ್ಧೃತ್ಯ ಕ್ಷಿಪ್ತಂ ತಸ್ಮಿನ್ನಪೂರ್ವವತ್ ||**
**ಬುದ್ಧ್ಯಾದೇರ್ಜ್ಞಸ್ತಥಾಽಸತ್ಯಾ ನ್ನದೇಹಿಪೂರ್ವವದ್ಭವೇತ್ ||**

ಇದರಿಂದ ಏನು ಸಿದ್ಧವಾಯಿತೆಂದರೆ ;—ಪುನಃ ಗ್ರಂಥಿ ಉಂಟಾಗದಿರುವದೇ ಜ್ಞಾನಕ್ಕೆ ಫಲವೆನಿಸುವದು.

ಹೀಗೆ ಜ್ಞಾನಕ್ಕೆ ಹೇತು-ಸ್ವರೂಪ-ಫಲ ಸಹ ನಿರೂಪಿಸಿದರು. ಅದನ್ನು

**ಶ್ಲೋ|| ಶ್ರವಣಾದಿತ್ರಯಂ ತದ್ವತ್ ತತ್ತ್ವಮಿಥ್ಯಾವಿವೇಚನಂ ||**
**ಪುನರ್ಗ್ರಂಥಿರನುದಯೋ ಬೋಧಸ್ಯೈತೇ ತ್ರಯೋ ಮತಾಃ||**

ಈ ವಾಕ್ಯದಲ್ಲಿ ಪೇಳಲ್ಪಟ್ಟಿರುವದು.

ಅ|| ಈಗ ಉಪರತಿಗೆ ಹೇತ್ವಾದಿತ್ರಯವಂ ತೋರಿಸುವರು.

**೩—ಉಪರತಿಗೆ ಹೇತ್ವಾದಿಗಳು :—**

(೧)—ಯಮಾದಿ ಎಂಟು ಯೋಗಾಂಗಗಳು ಉಪರತಿಗೆ 'ಹೇತು' ವಾಗಿರುವದು.

(೨)—ಬುದ್ಧಿಯ ನಿರೋಧವು ಉಪರತಿಗೆ 'ಸ್ವರೂಪ' ವಾಗಿರುವದು.

(೩)—ವ್ಯವಹಾರದ ಪರಿಕ್ಷಯವು ಉಪರತಿಗೆ 'ಫಲ' ವೆನಿಸುವದು. ಅದನ್ನು "ಯಮಾದಿರ್ಧೀಂನಿರೋಧಶ್ಚ ವ್ಯವಹಾರಸ್ಯಸಂಕ್ಷಯಃ" ಇದರಲ್ಲಿ ಪೇಳಿರುವದು.

**ಯಮಾದಿ ಯೋಗಾಂಗವೆಂಟು, ಯಾವವೆಂದರೆ ;—**

(೧) ಯಮ, (೨) ನಿಯಮ, (೩) ಆಸನ, (೪) ಪ್ರಾಣಾಯಾಮ, (೫) ಪ್ರತ್ಯಾಹಾರ, (೬) ಧಾರಣಾ, (೭) ಧ್ಯಾನ, (೮) ಸಮಾಧಿ. ಅವುಗಳಲ್ಲಿ—

೧—(೧) ಅಹಿಂಸಾ, (೨) ಸತ್ಯ, (೩) ಅಸ್ತೇಯ, (೪) ಬ್ರಹ್ಮಚರ್ಯ, (೫) ಅಪರಿಗ್ರಹ, ಈ ಭೇದದಿಂದ ಯಮವು ಐದು ಪ್ರಕಾರದ್ದಾಗಿರುವದು.

೨—(೧) ಸ್ವಾಧ್ಯಾಯ, (೨) ತಪ, (೩) ಶೌಚ, (೪) ಸಂತೋಷ, (೫) ಈಶ್ವರಪ್ರಣಿಧಾನ. ಇವೈದು ನಿಯಮವೆನ್ನಲ್ಪಡುವದು. ಎಂತೆಂದರೆ;—

ಅಹಿಂಸಾಂ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹಾಃ ।
ಸ್ವಾಧ್ಯಾಯಸ್ತಪಃ ಶೌಚಮೀಶ್ವರ ಧ್ಯಾನಮತೃಷ್ಣತಾ ॥

ಇಲ್ಲಿ ಸ್ವಾಧ್ಯಾಯವೆಂದರೆ, ಪ್ರಣವಾದಿ ಜಪಕ್ಕೆ ಪೆಸರು. ಅಸ್ತೇಯವೆಂದರೆ ಪರದ್ರವ್ಯದಿಂ ಪೃಥಕ್ಕಾಗಿರುವದಕ್ಕೆ ಪೆಸರು. ಉಳಿದ ಅರ್ಥಗಳು ಸ್ಪಷ್ಟವೇ ಇವೆ.

೩—“ಪದ್ಮಸ್ವಸ್ತಿಕಾದೀನಿ ಪ್ರೋಕ್ತಾನ್ಯಾಸನಾನಿಚ” ಇತ್ಯಾದಿ ಶಾಸ್ತ್ರೋಕ್ತವಾದ ಆಸನಗಳಿರುವವು. ಮತ್ತು ಯೋಗ ಗ್ರಂಥಗಳಲ್ಲಿ ಎಂಭತ್ತುನಾಲ್ಕು ಆಸನಗಳನ್ನು ಪೇಳಿರುವದು. ಅವುಗಳಲ್ಲಿ ಪದ್ಮಾದಿ ಆಸನ ಪ್ರಧಾನವು.

೪—“ಪೂರಕಃ ಕುಂಭಕಸ್ತದ್ವದ್ರೇಚಕಶ್ಚ ತ್ರಿಧಾಸ್ಮೃತಃ” ಹೀಗೆ ಶಾಸ್ತ್ರದಲ್ಲಿ ಪೇಳಲ್ಪಟ್ಟ (೧) ರೇಚಕ, (೨) ಪೂರಕ, (೩) ಕುಂಭಕವೆಂದು ಮೂರು ಬಗೆ ಪ್ರಾಣಾಯಾಮವಿರುವದು. ಅದರಲ್ಲಿ—ಕುಂಭಕವು ಅಂತರ ಬಾಹ್ಯ ಭೇದದಿಂದ ಎರಡು ಪ್ರಕಾರವಾಗಿರುವದು. ಮತ್ತು

(೧) ಸಗರ್ಭ,

(೨) ಅಗರ್ಭ, ಈ ಭೇದದಿಂದಲೂ ಪ್ರಾಣಾಯಾಮವೆರಡು ವಿಧವಾಗಿರುವದು. ಅದರಲ್ಲಿ—

(೧) ಓಂಕಾರೋಚ್ಚಾರ ಸಹಿತವಾದ್ದು ಸಗರ್ಭವೆನ್ನಲ್ಪಡುವದು.

(೨) ಅದಿಲ್ಲದ್ದರ ಪೆಸರು ಅಗರ್ಭವೆನ್ನಲ್ಪಡುವದು. ಅವುಗಳಲ್ಲಿ ಸಗರ್ಭ ಪ್ರಾಣಾಯಾಮವು ಉತ್ತಮವಾದದ್ದು.

೫—“ ಪ್ರತ್ಯಾಹಾರಃ ಸವಿಜ್ಞೇಯ ಇಂದ್ರಿಯಾಣಾಂ ವಿನಿಗ್ರಹಃ ” ಹೀಗೆ ಶಾಸ್ತ್ರದಲ್ಲಿ ಹೇಳಿದಂತೆ ವಿಷಯಗಳಿಂದ ಇಂದ್ರಿಯಗಳನ್ನು ನಿರೋಧಿಸುವದು ಪ್ರತ್ಯಾಹಾರವೆನ್ನಲ್ಪಡುವದು.

೬—“ ಧಾರಣಾ ಮನಸೋಜ್ಞೇಯಾ ಬಂಧನಂ ಬ್ರಹ್ಮಸದ್ಮನಿ ” ಈ ಶ್ಲೋಕದಲ್ಲಿ ಹೇಳಿದಂತೆ ಬ್ರಹ್ಮದಲ್ಲಿ ಮನದ ಸಂಯೋಜನವು ಧಾರಣೆ ಎನ್ನಲ್ಪಡುವದು. ಇಲ್ಲಿ ಷಟ್ ಚಕ್ರಗಳಲ್ಲಿ ಆಗಲೀ, ಅಥವಾ ತತ್ವಗಳಲ್ಲಿ ಆಗಲೀ ಚಿತ್ತಸ್ಥಾಪನೆಯ ಅಪೇಕ್ಷೆ ಇಲ್ಲ.

೭—“ ಧ್ಯಾನಂ ಪ್ರತ್ಯಯ ಸಂತಾನಃ ” ಹೀಗೆ ಶಾಸ್ತ್ರದಲ್ಲಿ ಹೇಳಿದಂತೆ ಮನದ ಪ್ರತ್ಯಯ ಸಂತಾನ, ಅಂದರೆ;—ನಿರಂತರ ಬ್ರಹ್ಮಾಕಾರ ವೃತ್ತಿಯ ಪ್ರವಾಹವೇ ಧ್ಯಾನವೆನಿಸುವದು. ಮತ್ತು “ ಪ್ರತ್ಯಯೈಕತಾನತಾಧ್ಯಾನಂ ” ಈ ಯೋಗಸೂತ್ರದಲ್ಲಿಯೂ, ಇದೇ ಲಕ್ಷಣವಂ ಹೇಳಿರುವದು.

೮—ಸಮಾಧಿಯ ಲಕ್ಷಣವು ಪೂರ್ವದಲ್ಲಿಯೇ ಹೇಳಲ್ಪಟ್ಟಿದೆ. ಸವಿಕಲ್ಪಸಮಾಧಿಯನ್ನು ಇಲ್ಲಿ ಎಂಟನೇ ಅಂಗವೆಂದು ತಿಳಿಯತಕ್ಕದ್ದು.

ಈ ಎಂಟು ಅಂಗಗಳು ಉಪರತಿಗೆ ಹೇತುವಾಗಿವೆ. ಮತ್ತು ಸ್ವರೂಪ, ಫಲ ಈ ಎರಡೂ ಹಿಂದೆಯೇ ಹೇಳಲ್ಪಟ್ಟಿದೆ.

### [೪] ಈಗ (೧) ವೈರಾಗ್ಯ (೨) ತತ್ವಬೋಧ, (೩) ಉಪರತಿಗೆ ಅವಧಿಯನ್ನು ತೋರಿಸುವರು.

೧—ಬ್ರಹ್ಮಲೋಕವನ್ನೂ ಕೂಡ ಶುಷ್ಕತೃಣದಂತೆ ತುಚ್ಛವೆಂದರಿಯುವದು ವೈರಾಗ್ಯಕ್ಕೆ ಅವಧಿಯು.

೨—ದೇಹಾತ್ಮಜ್ಞಾನದಂತೆ ಪರಮಾತ್ಮನಲ್ಲಿ ದೃಢವಾದ ಅಭೇದನಿಶ್ಚಯವು ಜ್ಞಾನಕ್ಕೆ ಅವಧಿಯು.

೩—ಸುಷುಪ್ತಿಯಂತೆ ಸಮಸ್ತವನ್ನು ಮರೆಯುವದು ಉಪರತಿಗೆ ಅವಧಿಯು. ಅದನ್ನು

ವೆ.ಪಂ.ಅ. ಬ್ರಹ್ಮಲೋಕತೃಣೀಕಾರೋ ವೈರಾಗ್ಯಸ್ಯಾವಧಿರ್ಮತಃ ||
ದೇಹಾತ್ಮವತ್ಪರಾತ್ಮತ್ವ ದಾರ್ಢ್ಯಬೋಧಸ್ಸಮಾಪ್ಯತೇ ||
ಸುಷುಪ್ತಿವದ್ವಿಸ್ಮೃತಿಃ ಸೀಮಾ ಭವೇದುಪರಮಸ್ಯಹಿ ||

ಈ ವಾಕ್ಯದಲ್ಲಿ ಹೇಳಿರುವದು.

ಈ ವೈರಾಗ್ಯ-ಬೋಧ-ಉಪರತಿ, ಮೂರು ಪರಸ್ಪರ ಸಹಕಾರಿಯಾಗಿರುವವು. ಇವು ಮೂರು ಚನ್ನಾಗಿ ಸಿದ್ಧಿಸಿದರೆ ಮಹಾತಪಸ್ಸಿನ ಫಲವೆನಿಸುವದು. ಅವು ಪರಮೇಶ್ವರನ ಕೃಪೆಯಿಂದಲೂ, ಮಹಾತ್ಮರ ಅನುಗ್ರಹದಿಂದಲೂ ಪ್ರಾಪ್ತವಾಗುವವು.

ಆ ವೈರಾಗ್ಯ-ಬೋಧ-ಉಪರತಿಯ ಲಾಭವಾಗಲು, ಮನೋನಾಶದಿಂದಲೂ, ವಾಸನಾಕ್ಷಯದಿಂದಲೂ, ದೃಢಬೋಧೆಯಿಂದಲೂ ಎಲ್ಲಾ ವಿಕ್ಷೇಪವು ನಿವೃತ್ತಿಸಲ್ಪಟ್ಟು ಗುರುತಿಲ್ಲದಂತೆ ಅಡಗಿಪೋಗುವದು. ಆಗ ಪ್ರಶಾಂತನಾದ ಪುರುಷನು ಅಗಾಧವಾದ ಬ್ರಹ್ಮಾನಂದ ಸಾಗರದಲ್ಲಿ ನಿಮಗ್ನನಾಗುವನು. ಅವನು ಒಂದು ಕಾಲಕ್ಕೂ ಕ್ಷೋಭೆಯಂ ಪಡೆಯುವುದಿಲ್ಲ; ಯಾಕಂದರೆ;—ಕ್ಷೋಭೆಗೆ ನಿಮಿತ್ತವಾದ್ದು ಅಜ್ಞಾನ, ವಾಸನಾ, ಮನಸ್ಸುಗಳಾಗಿವೆ. ಅವು ಅವನ ದೃಢಾಭ್ಯಾಸದಿಂದ ನಿವೃತ್ತವಾಗಿರುವವು. ಆ ಮನೋನಾಶ, ವಾಸನಾಕ್ಷಯ, ತತ್ವಬೋಧ ಇವು ಮೂರು ಪರಸ್ಪರ ಹೇತುವಾಗಿರುವದ್ದರಿಂದ ಅವುಗಳ ಜೊತೆಗೂಡಿದ ಅಭ್ಯಾಸವು ವಾಸಿಷ್ಠದಲ್ಲಿ ಪೇಳಿರುವದು. ಜ್ಞಾನದ ಸ್ವರೂಪವು ಪೂರ್ವದಲ್ಲೇ ಪೇಳಿರುವದು.

## ||೫|| ವಾಸನಾ, ಮನಗಳ ಸ್ವರೂಪ ಮತ್ತು ಅವುಗಳ ನಾಶೋಪಾಯ, ಹಾಗೆ ಅವುಗಳಲ್ಲಿಯೇ ಜೀವನ್ಮುಕ್ತಿ ಮತ್ತು ವಿದೇಹಮುಕ್ತಿಯ ವರ್ಣನೆ:—

ಅ|| ಈಗ ವಾಸನಾಕ್ಷಯದ ನಿಮಿತ್ತವಾಗಿ ವಾಸನೆಯ ಸ್ವರೂಪವಿಭಾಗವನ್ನೂ ಮತ್ತು ಮನೋನಾಶವನ್ನೂ ತೋರಿಸುತ್ತಾ ಮನದ ಸ್ವರೂಪವಂ ಪೇಳುವರು.

(೧) ಸೂಕ್ಷ್ಮಸಂಸ್ಕಾರಕ್ಕೆ ವಾಸನೆ ಎಂದು ಪೆಸರು. ಅಥವಾ ಪೂರ್ವಾಪರ ವಿಚಾರವಿಲ್ಲದೆ ದೃಢಭಾವನೆಯಿಂದ ಯಾವದು ಪದಾರ್ಥವಂ ಪಿಡಿಯುವದೋ, ಅದು 'ವಾಸನೆ' ಎನಿಸಿಕ್ಕೊಳ್ಳುವದು. || ತದುಕ್ತಂ ||

ದೃಢಭಾವನಯಾ ತ್ಯಕ್ತ ಪೂರ್ವಾಪರವಿಚಾರಣಂ ||
ಯದಾದಾನಂ ಪದಾರ್ಥಸ್ಯ ವಾಸನಾ ಸಾಪ್ರಕೀರ್ತಿತಾ ||

ಆ ವಾಸನೆಯು (೧) ಶುದ್ಧ, (೨) ಅಶುದ್ಧ ಈ ಭೇದದಿಂದ ಎರಡು ಪ್ರಕಾರವಾಗಿರುವದು. ಅದನ್ನು ಪೇಳುವರು.

ಯೋಗವಾಸಿಷ್ಠ ೬-೩-೬೬

ಮುಕ್ತಿಕೋಪನಿಷತ್ ೨-೬ ಶ್ಲೋ|| ವಾಸನಾದ್ವಿವಿಧಾ ಪ್ರೋಕ್ತಾ ಶುದ್ಧಾ ಚ ಮಲಿನಾ ತಥಾ ।
ಮಲಿನಾ ಜನ್ಮನೋ ಹೇತುಃ ಶುದ್ಧಾ ಜನ್ಮವಿನಾಶಿನಿ ||

ಆ ಎರಡರಲ್ಲಿ ಮಲಿನವಾಸನೆಯು ಜನ್ಮಕ್ಕೆ ಹೇತುವಾಗಿರುವದು ||೧||. ಶುದ್ಧವು ಜನ್ಮಾದಿ ಸಂಸಾರವನ್ನು ವಿನಾಶ ಮಾಡುವಂಥಾದ್ದಾಗಿರುವದು ||೨||.

ಆ ಮಲಿನವಾಸನೆಯು (೧) ಸುಪ್ತ (೨) ಪ್ರಬುದ್ಧ ಈ ಭೇದದಿಂದ ಎರಡು ವಿಧವಾಗಿರುವದು. ಅದರಲ್ಲಿ—

ವೃಕ್ಷಾದಿಗಳಲ್ಲಿ ಸುಪ್ತವಾಸನೆಯೂ,

ಮನುಷ್ಯಾದಿಗಳಲ್ಲಿ ಪ್ರಬುದ್ಧವಾಸನೆಯೂ ಇರುವದು. ಅದಾದರೂ,

(೧)—ಲೋಕ,

(೨)—ಶಾಸ್ತ್ರ,

(೩)—ದೇಹ, ಈ ಭೇದದಿಂದ ಮೂರು ಬಗೆಯಾಗಿರುವದು. ಇವು ಮೂರು ದೃಢಜ್ಞಾನಕ್ಕೆ ಪ್ರತಿಬಂಧಕವಾದದ್ದು. ಅದನ್ನು ಹೇಳುವದು.

ಮುಕ್ತಿಕೋಪನಿಷತ್ ೨-೨ ಲೋಕವಾಸನಯಾ ಜಂತು ಶಾಸ್ತ್ರವಾಸನಯಾಪಿ ವಾ ।
ದೇಹವಾಸನಯಾ ಜ್ಞಾನಂ ಯಥಾವನ್ನೈವ ಜಾಯತೇ ||

ಇದರ ಅರ್ಥ—ಜಂತುವಿಗೆ ಲೋಕವಾಸನೆಯಿಂದಲೂ, ಶಾಸ್ತ್ರವಾಸನೆಯಿಂದಲೂ, ಮತ್ತು ದೇಹವಾಸನೆಯಿಂದಲೂ ಯಥಾವತ್ ಜ್ಞಾನೋದಯವಾಗುವದಿಲ್ಲ; ಅದರಲ್ಲಿ—

[೧] ಸರ್ವಲೋಕವೂ ನನ್ನಂ ಸ್ತುತಿಸಬೇಕು, ಯಾರೂ ನಿಂದಿಸಕೂಡದು. ಮತ್ತು ಲೋಕದಲ್ಲಿ ನನ್ನ ಪ್ರತಿಷ್ಠೆಯುಂಟಾಗಿರಬೇಕು. ಇಂತೆಂಬುದು ಲೋಕವಾಸನೆ ಎನಿಸುವದು.

[೨] ಶಾಸ್ತ್ರವಾಸನೆಯು (೧) ಪಾಠವಾಸನೆ, (೨) ಅರ್ಥವಾಸನೆ, (೩) ಅನುಷ್ಠಾನವಾಸನೆ, ಈ ಭೇದದಿಂದ ಮೂರು ವಿಧವಾಗಿರುವದು. ಅದು ಭರದ್ವಾಜ—ನಾರದ—ಮತ್ತು ನಿದಾಘನಿಗೆ ಯಥಾಕ್ರಮವಾಗಿ ಮೂರು ವಾಸನೆಗಳು ಶಾಸ್ತ್ರಗಳಲ್ಲಿ ಹೇಳಿರುವವು. ಆ ಮೂವರು ಮೂರು ವಾಸನೆಗಳಂ ತೊರೆದುಕೊಂಡು ಜ್ಞಾನವಂ ಪಡೆದರು.

[೩] ದೇಹವಾಸನೆಯೂ ಕೂಡ, (೧) ಗುಣಾಧಾನ, (೨) ಮಲಾಪನಯನ, ಈ ಭೇದದಿಂದ ಎರಡುಪ್ರಕಾರವಾಗಿರುವದು, ಅದಾದರೂ ಪ್ರತ್ಯೇಕ

ಲೋಕಶಾಸ್ತ್ರ ಭೇದದಿಂದ, ಗುಣಾಧಾನ ಮತ್ತು ಮಲಾಪಸಯನವಾಸನೆ ದ್ವಿವಿಧವಾಗಿರುವದು. ಅವು ಜ್ಞಾನಹೀನನಾದ ವಿಷಯೀ ಪುರುಷನಲ್ಲಿ ಪ್ರಸಿದ್ಧವಾಗಿವೆ. ಮತ್ತು "ಶರೀರ ನಾಶದರ್ಶಿನ್ಯಾ ವಾಸನಾ ನ ಪ್ರವರ್ತತೇ" ಈ ವಚನದಿಂದ ವಿದ್ವಾಂಸುವಿಗೆ ದೇಹವಾಸನೆ ಇರುವದಿಲ್ಲವೆಂದು ಪೇಳಿರುವರು. ಈ ಸರ್ವವಾಸನೆಯು ಮಲಿನವಾದದ್ದು. ಅದು ಶುದ್ಧವಾಸನೆ ಉದಯವಾಗಲು ನಿವೃತ್ತಿಯಾಗುವದು [೧].

ಶುದ್ಧವಾಸನೆಯೂ ಎರಡು ಪ್ರಕಾರವಾಗಿರುವದು.

೧—ಮೈತ್ರೀ ಕರುಣಾ ಮುದಿತಾದಿಯಾದ ದೈವೀಸಂಪದ ರೂಪವಾಗಿಯೂ,

೨—ಅದ್ವೈತವಾದ ಕೇವಲ ಚಿನ್ಮಯವಾಸನಾರೂಪವಾಗಿಯೂ ಇರುವದು. ಅದನ್ನು ಸಮ್ಯಕ್ ಪ್ರಕಾರದಿಂದ ಸಂಪಾದಿಸಿದರೆ, ಮಲಿನವಾಸನೆ ಕ್ಷಯವಾಗುವದು [೨].

## (೨) ಈಗ ಮನೋನಾಶದ ರೀತಿಯನ್ನು ತೋರಿಸುವರು.

ಮನದ ನಾಶವು ಎರಡು ವಿಧವಾಗಿರುವದು.
ಒಂದು ಸ್ವರೂಪನಾಶ, ಮತ್ತೊಂದು
ಅರೂಪನಾಶ, ಅವುಗಳಲ್ಲಿ—

೧—ಸ್ವರೂಪನಾಶವು ಮನಕ್ಕೆ ಜೀವನ್ಮುಕ್ತ ದಶೆಯಲ್ಲಿ ಆಗುವದು. ಅದನ್ನು ಪೇಳುವರು. "ಸ್ವರೂಪೋಽಸೌ ಮನೋನಾಶೋ ಜೀವನ್ಮುಕ್ತಸ್ಯ ವಿದ್ಯತೆ" ತಾತ್ಪರ್ಯವೇನಂಬರೆ;—

**ಮನೋಹಿದ್ವಿವಿಧಂ ಪ್ರೋಕ್ತಂ ಶುದ್ಧಂ ಚಾಶುದ್ಧಮೇವಚ ॥**
**ಅಶುದ್ಧಂ ಕಾಮಸಂಕಲ್ಪಂ ಶುದ್ಧಂ ಕಾಮವಿವರ್ಜಿತಂ ॥**

ಈ ಶಾಸ್ತ್ರವಚನದಿಂದ ಮನವು (೧) ಶುದ್ಧ (೨) ಅಶುದ್ಧ ಈ ಭೇದದಿಂದ ಎರಡು ಪ್ರಕಾರವಾಗಿರುವದು. ಅವುಗಳಲ್ಲಿ ಕಾಮಸಂಕಲ್ಪಸಹಿತವಾದ್ದು ಅಶುದ್ಧಮನವು; ಅದು ಪ್ರಯತ್ನದಿಂದ ನಾಶವಾಗುವದು.

೨—ಕಾಮಾದಿರಹಿತವಾದ್ದು ಶುದ್ಧಮನವು. ಅದು ಅರೂಪವೆಂಬ ನಾಮವುಳ್ಳದ್ದು. ಅದು ವಿದೇಹಮೋಕ್ಷ ಪರ್ಯಂತರ ಇರುತ್ತಿರುವದು. ಆದ್ದರಿಂದ ಜೀವನ್ಮುಕ್ತನ ಮನಸ್ಸಿಗೆ ಸ್ವರೂಪನಾಶವೆಂದು ವೃದ್ಧರು ಪೇಳಿರುವರು.

**ಶಂಕಾ, ಸಮಾಧಾನ**—ಯಾವನಾದರು ಒಬ್ಬನು "ಭೀಷ್ಮೋಽಹಿದೇವಃ-ಚಂಚಲಂ ಹಿಮನಃ ಕೃಷ್ಣ, ವಿಷಮಶ್ಚಿತ್ತನಿಗ್ರಹಃ-ಚಲಚಿತ್ತಂ ಸತಾಮಪಿ-ಸ್ವಭಾವೋದುರತಿಕ್ರಮಃ" ಇತ್ಯಾದಿ ಶೃತಿಸ್ಮೃತಿ ಶಾಸ್ತ್ರಗಳಲ್ಲಿ ಮನವು ಭಯಾನಕ, ಚಂಚಲ, ವಿಷಮ, ಗ್ರಹ, ಚಲ, ಮತ್ತು ಸ್ವಭಾವ ಅಪರಿಹಾರ್ಯವೆಂದು ಪೇಳಿರುವದು. ಆದ್ದರಿಂದ ಬದುಕಿರುವ ಕಾಲದಲ್ಲಿ ಮನದ ನಿರೋಧವು ಸಂಭವಿಸುವದಿಲ್ಲ; ಅಂದರೆ;—ಅದನ್ನು ಕೇಳು! ಮನದಸ್ವಭಾವವು ಹ್ಯಾಗೆ ಶೃತಿಶಾಸ್ತ್ರಗಳು ಪೇಳಿರುವವೋ ಹಾಗೆಯೇ ಸರಿ! ಆದರೂ ಅದರ ನಿಗ್ರಹವು ಉಪಾಯಗಳಿಂದಾಗುವದು.

ಆ ಮನೋನಿಗ್ರಹದ ಉಪಾಯಗಳು ಯಾವವು, ಅಂದರೆ:—ಅದನ್ನು ಕೇಳು! ಈ ಮನಕ್ಕೆ ಎರಡು ಬೀಜಗಳುಂಟು.

ಒಂದು ಪ್ರಾಣಸ್ಪಂದನ,
ಮತ್ತೊಂದು ವಾಸನಾ. ಅದನ್ನು

"**ದ್ವೇಬೀಜೇರಾಮಚಿತ್ತಸ್ಯ ಪ್ರಾಣಸ್ಪಂದನವಾಸನೌ**" ಈ ವಾಕ್ಯದಿಂದ ವಾಸಿಷ್ಠದಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಚಿತ್ತ ಮತ್ತು ಮನವೆಂದರೆ-ಎರಡೂ ಒಂದೆ. ಇವು ಪರ್ಯಾಯಶಬ್ದವು. ಅದರ ನಾಶೋಪಾಯವೂ ಕೂಡ, "**ದ್ವೌಕ್ರಮೌ ಚಿತ್ತನಾಶಸ್ಯ ಯೋಗೋ ಜ್ಞಾನಂಚರಾಘವ**" ಈ ವಚನದಿಂದ ಯೋಗವನ್ನೂ, ಜ್ಞಾನವನ್ನೂ ಪೇಳಿರುವರು. ಅದರಲ್ಲಿ—

೧—ಚಿತ್ತವೃತ್ತಿಯ ನಿರೋಧಕ್ಕೆ ಯೋಗವೆಂದು ಪೆಸರು.

೨—ಸಮ್ಯಕ್ ತತ್ವನಿರೀಕ್ಷಣೆಗೆ ಜ್ಞಾನವೆಂದು ಪೆಸರು.

ಅದನ್ನು ಪತಂಜಲಿ ಭಗವಂತನೂ ಸಹ,

**ಯೋ|| ಸೂ—ಯೋಗಶ್ಚಿತ್ತವೃತ್ತಿನಿರೋಧಃ ||**

ಈ ಸೂತ್ರದಲ್ಲಿ ಯೋಗದ ಲಕ್ಷಣವನ್ನು ಪೇಳಿರುವನು. ಅಲ್ಲಿ ವೃತ್ತಿಯು ಪ್ರಮಾಣ, ವಿಪರ್ಯಯ, ವಿಕಲ್ಪಾದಿಭೇದದಿಂದ ಐದು ಪ್ರಕಾರವಾಗಿ ಪೇಳಿರುವನು. ಇನ್ನು

"**ಅಭ್ಯಾಸೇನತುಕೌಂತೇಯ ವೈರಾಗ್ಯೇಣಚಗೃಹ್ಯತೇ**"

ಈ ಭಗವದ್ವಚನದಿಂದಲೂ, ಮತ್ತು

**ಯೋ—ಸೂ॥ ಅಭ್ಯಾಸವೈರಾಗ್ಯಾಭ್ಯಾಂ ತನ್ನಿರೋಧಃ ॥**

ಈ ಯೋಗಸೂತ್ರದಿಂದಲೂ ಅಭ್ಯಾಸ ಮತ್ತು ವೈರಾಗ್ಯಗಳಿಂದ ಮನಸ್ಸಿನ ನಿರೋಧವಂ ಪೇಳಿರುವದು.

೧—ಪುನಃ ಪುನಃ ಆವೃತ್ತಿಗೆ ಅಭ್ಯಾಸವೆಂದು ಹೆಸರು. ಅದನ್ನು

**ಯೋ—ಸೂ॥ ತತ್ರಸ್ಥಿತೌ ಯತ್ನೋಽಭ್ಯಾಸಃ ॥**

ಈ ಯೋಗ ಸೂತ್ರದಲ್ಲಿ ಅಸಂಗಪುರುಷನೊಳ್ ಚಿತ್ತದ ಸ್ಥಿತಿಯು ನಿಮಿತ್ತ ಯತ್ನ ವಿಶೇಷವು ಅಭ್ಯಾಸದ ಲಕ್ಷಣವೆಂದು ಪೇಳಿರುವದು.

೨—ವೈರಾಗ್ಯವು ಪರ–ಅಪರವಾಗಿರುವ ಎರಡನ್ನು ಪೂರ್ವದಲ್ಲಿಯೇ ಪೇಳಿರುವದು. ಇದೂ ಅಲ್ಲದೆ

**ಅಧ್ಯಾತ್ಮವಿದ್ಯಾಧಿಗಮಃ ಸಾಧುಸಂಗಮ ಏವಚ ।**
**ವಾಸನಾ ಸಂಪರಿತ್ಯಾಗಃ ಪ್ರಾಣಸ್ಪಂದನಿರೋಧನಂ ॥**

ಹೀಗೆ ವಾಸಿಷ್ಠದಲ್ಲಿ ಪೇಳಿದ ಮಾತಿನಿಂದ

(೧) ಅಧ್ಯಾತ್ಮ ವಿದ್ಯೆಯಲಾಭ,

(೨) ಸಾಧು ಸಂಗಮ,

(೩) ವಾಸನೆಯ ತ್ಯಾಗ,

(೪) ಪ್ರಾಣಗತಿಯ ನಿರೋಧ, ಈ ಚತುರ್ವಿಧ ಯುಕ್ತಿಗಳಿಂದ ಮನಸ್ಸಿಗೆ ನಿರೋಧವಾಗುವದು. ಇದಕ್ಕೆ ಶಾಸ್ತ್ರಗಳಲ್ಲಿ ಕ್ರಮನಿಗ್ರಹವೆಂದು ಪೇಳಿರುವದು. ॥೧॥

ಮತ್ತು ಆ ಕ್ರಮನಿಗ್ರಹದಿಂ ಭಿನ್ನವಾದ ತನ್ನ ಮನವನ್ನು ಮುಖಪ್ರಾಣಪೀಡನ, ಚಕ್ಷುರಾದಿಗೋಳಕಗಳ ನಿರೋಧದಿಂದ ನಿಗ್ರಹಿಸುವದಕ್ಕೆ ಹಠ ನಿಗ್ರಹವೆಂದು ಪೇಳಿರುವದು. ॥೨॥

ಆ ಎರಡರಲ್ಲಿ ಕ್ರಮನಿಗ್ರಹಶ್ರೇಷ್ಠವೆನಿಸುವದು. ವೃದ್ಧರುಗಳೂ ಕೂಡ ಕ್ರಮನಿಗ್ರಹವನ್ನಂಗೀಕರಿಸಿರುವರು. ಈ ಪರಿಯಿಂ ನಿಗ್ರಹಿಸಲ್ಪಟ್ಟ ಮನವು "ಬದ್ಧಮುಕ್ತೋಮಹೀಪಾಲ" ಈ ನ್ಯಾಯದಿಂದಲ್ಪವಾದ ದೇಹಯಾತ್ರಾಮಾತ್ರದಿಂದಲೂ, ಸಂತುಷ್ಟವಾಗುವದು.

ಮತ್ತು ನಿಗ್ರಹಿತಮನಕ್ಕೆ ಸಮಾಧಿಯಿಂ ಪುಟ್ಟುವ ಮಹಾಸುಖದ ಲಾಭವಾಗುವದು. ಆದಕಾರಣ ಮನೋನಿಗ್ರಹಕ್ಕೋಸುಗ ಅವಶ್ಯಪ್ರಯತ್ನವಂ ಮಾಡತಕ್ಕದ್ದು.

ಮತ್ತು ಪರಮೇಶ್ವರಾಶ್ರಿತನಾಗಿ ಯತ್ನಗೈಯ್ಯುವನಿಗೆ ಪ್ರತಿಬಂಧ ರಹಿತವಾಗಿ ಅವಶ್ಯಫಲದ ಸಿದ್ಧಿಯಾಗುವದು. ಎಂತೆಂದರೆ;—* ಟಿಟಿಭನೆಂಬ ಪಕ್ಷಿಯು ಯತ್ನಬಲದಿಂದ ಸಾಗರದಿಂದಂಡವಂ ತೆಗೆದುಕೊಂಡಂತೆ. ಅದನ್ನು

**ಉತ್ಸೇಕ ಉದಧೇರ್ಯದ್ವತ್ ಕುಶಾಗ್ರೇಣೈಕ ಬಿಂದುನಾ ।**
**ಮನಸೋ ನಿಗ್ರಹಸ್ತದ್ವತ್ ಭವೇದಪರಿಖೇದತಃ ॥**

ಈ ಮಾಂಡೂಕ್ಯದ ಕಾರಿಕೆಯಲ್ಲಿ ಮನೋನಿಗ್ರಹಾರ್ಥವಾಗಿ, ಉದಾಹರಣೆಯನ್ನು ಪ್ರಸಿದ್ಧಪಡಿಸಿರುವದು. ಮತ್ತು

**॥ ಯಚ್ಛೇದ್ವಾಙ್ಮನಸಿ ಪ್ರಾಜ್ಞ ತದ್ಯಚ್ಛೇದ್ಜ್ಞಾನಮಾತ್ಮನಿ ॥**

ಇತ್ಯಾದಿ ಉಪಾಯಗಳಂ ಶ್ರುತಿಯಲ್ಲಿ ಪೇಳಿರುವದು. ಆದ್ದರಿಂದ ಏನು ಸಿದ್ಧವಾಯಿತೆಂದರೆ;—ಉಪಾಯದಿಂದ ಮನದ ಸ್ವರೂಪ ನಾಶವಾಗುವದು.

(೧) ಆ ಸ್ವರೂಪ ಮನದನಾಶವು ಜೀವನ್ಮುಕ್ತನಿಗೆಂದು ಪೇಳಿರುವರು.

(೨) **“ ಅರೂಪಸ್ತು ಮನೋನಾಶೋ ಮಯೋಕ್ತರಘೂದ್ವಹ ವಿದೇಹಮುಕ್ತಃ ”** ಈ ವಾಸಿಷ್ಠೋಕ್ತಿಯಿಂದ ಅರೂಪ ಮನೋನಾಶವು ವಿದೇಹಮುಕ್ತನಿಗೆಂದು ಪೇಳಿರುವರು.

ಹೀಗೆ ವಾಸನಾಕ್ಷಯವು, ಮನೋನಾಶವು ತೋರಿಸಲ್ಪಟ್ಟಿತು. ಅವುಗಳಿಂದ ದೃಢ ಜ್ಞಾನವಾಗುವದು.

ಮತ್ತು ಜ್ಞಾನದಿಂದಲೂ, ಚನ್ನಾಗಿ ವಾಸನಾಕ್ಷಯದಿಂದಲೂ ಮನೋನಾಶವಾಗುವದು. ಹೀಗೆ ಮೂರು ಪರಸ್ಪರ ಹೇತುಗಳಾಗಿವೆ. ಅವುಗಳಂ ಜೊತೆಗೂಡಿ ಅಭ್ಯಾಸವಂ ಮಾಡಬೇಕು. ಅದನ್ನು

**ತತ್ವಜ್ಞಾನಂ ಮನೋನಾಶೋ ವಾಸನಾಕ್ಷಯ ಏವಚ ।**
**ಮಿಥಃ ಕಾರಣತಾಂ ಗತ್ವಾ ದುಃಸಾಧ್ಯಾನಿ ಸ್ಥಿತಾನ್ಯತಃ ॥**

ಈ ವಾಸಿಷ್ಠ ವಚನದಿಂದ ಪ್ರಸಿದ್ಧವಾಗಿ ಪೇಳಿರುವರು.

೧—ಆ ವಾಸನಾ ನಾಶವಾಗಲು ಚಿಂತಾಕ್ರಿಯಗಳಿಗೂ ನಾಶವಾಗುವದು.

* ಈ ಟಿಟಿಭ ಪಕ್ಷಿಯ ವೃತ್ತಾಂತ ಗೀತಾ ಗೂಢಾರ್ಥದೀಪಿಕೆಯಲ್ಲಿ ಮನೋನಿಗ್ರಹ ಪ್ರಸಂಗದೊಳ್ ಸ್ಪಷ್ಟವಾಗಿ ಬರೆಯಲ್ಪಟ್ಟಿದೆ. ಆತ್ಮಪುರಾಣದಲ್ಲಿ ಇನ್ನೂ ವಿಸ್ತಾರವಾಗಿ ಬರೆಯಲ್ಪಟ್ಟಿದೆ.

೨—ಆ ಕ್ರಿಯಾ ಚಿಂತೆಗಳು ವಾಸನೆಯೆಂಬ ಚಕ್ರದ ವಿಚ್ಛೇದದಿಂ ತ್ರಿವಿಧ ಈಷಣಾರಹಿತನಾಗಿ ಪಾಂಡಿತ್ಯ, ಬಾಲ್ಯ, ಮೌನದಿಂ ವೈರಾಗ್ಯವಂ ಪಡೆದುಕೊಂಡ ಬ್ರಹ್ಮವಿತ್ತಮನು ಭೂಮಾನಂದದಲ್ಲಿ ನಿಮಗ್ನನಾಗುವನು.

೩—ಈ ತ್ರಿವಿಧ ಏಷಣೆಗಳ ಅಭಾವವನ್ನು ವಿದ್ವಾನುವಿಗೆ "ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯ" ಈ ಶೃತಿಯಲ್ಲಿ ಸ್ಪಷ್ಟವಾಗಿ ಪೇಳಲ್ಪಟ್ಟಿದೆ.

(೧) ಪಾಂಡಿತ್ಯ, ಬಾಲ್ಯ, ಮೌನವೆಂಬ ಪದಕ್ಕೆ ಅರ್ಥವನ್ನು ಶ್ರವಣ, ಮನನ, ನಿದಿಧ್ಯಾಸನಗಳಿಂದ ವೈರಾಗ್ಯವಂ ಪೊಂದಿ ಸಮಾಧಿಯಲ್ಲಿರುವ ಬ್ರಹ್ಮವಿತ್ತಮನಿಗೆ

**"ಪಾಂಡಿತ್ಯಂ ನಿರ್ವಿದ್ಯಬಾಲ್ಯೇನತಿಷ್ಠಾಸೆ ಬಾಲ್ಯಂಚ ಪಾಂಡಿತ್ಯಂಚ ನಿರ್ವಿದ್ಯಾಥ ಮುನಿರಮೌನಂಚ ಮೌನಂಚ ನಿರ್ವಿದ್ಯಾಥ ಬ್ರಾಹ್ಮಣಃ"**

ಈ ಶೃತಿಯಲ್ಲಿ ಪೇಳಿರುವದು. ಅರ್ಥವೇನೆಂದರೆ;—ಪಾಂಡಿತ್ಯದಿಂದ ವೈರಾಗ್ಯವಂ ಪಡೆದು ಬಾಲ್ಯಸ್ವಭಾವದಲ್ಲಿ ಸ್ಥಿತನಾಗಿಯೂ, ಮತ್ತು ಬಾಲ್ಯಪಾಂಡಿತ್ಯವೆರಡರಿಂದ ನಿರ್ವೇದವಂ ಪೊಂದಿ, ಅನಂತರ ಮುನಿಯಾಗಿಯೂ ಬಳಿಕ ಮೌನ ಮತ್ತು ಅಮೌನವೆಂದರೆ, ಬಾಲ್ಯಪಾಂಡಿತ್ಯಗಳಂ ಬಿಟ್ಟು ಭೂಮಾನಂದ ಸ್ಥಿತಿ ಲಕ್ಷಣವು ಬ್ರಾಹ್ಮಣನಾಗುವದು.

(೨) ಆ ಭೂಮಾನಂದ ಸಿಂಧುವಿನಲ್ಲಿ ನಿಮಗ್ನನಾದ ಬ್ರಹ್ಮವಿತ್ತಮನಿಗೆ ವಿಕ್ಷೇಪರೂಪವಾದ ಪ್ರಪಂಚವು ಪ್ರತೀತಿಯಾಗುವದಿಲ್ಲ; ಈ ಅರ್ಥವನ್ನು ಈಗ ಶ್ಲೋಕದ ದ್ವಿತೀಯ, ಮತ್ತು ತೃತೀಯ ಪಾದಗಳಿಂದ ಆಚಾರ್ಯರು ಪ್ರತಿಪಾದಿಸುತ್ತಾರೆ.

## ॥ ೬ ॥ ಬ್ರಹ್ಮಾನಂದ ಸಮುದ್ರದಲ್ಲಿ ನಿಮಗ್ನನಾದ ಜೀವನ್ಮುಕ್ತನಿಗೆ ಪ್ರಪಂಚದ ಅಭಾವ.

(ಅವಿದ್ಯಾ ವಿಲಾಸಮಿತಿ) ಈ ಅದ್ಭುತವನ್ನು ನೋಡು! ಯಾವದರ ನಿಮಿತ್ತದಿಂದ ಇಂಥಾ ವಿಚಿತ್ರಗುಣ ಸ್ವಭಾವಕ್ರಿಯೆವುಳ್ಳ ಅವಿದ್ಯೆಯ 'ವಿಲಾಸ' ಅಂದರೆ;—ಕಾರ್ಯವಾದ ಈ ಭೂತ ಭೌತಿಕರೂಪವೆನಿಪ ಪ್ರಪಂಚವು ಆ ಭೂಮಾನಂದ ಸಾಗರದಲ್ಲಿ ನಿಮಗ್ನನಾದ ಜೀವನ್ಮುಕ್ತನಿಗೆ ಪ್ರತೀತವಾಗುವದಿಲ್ಲವೋ.

(ಟ) ಸ್ವಸತ್ತಾಸ್ಫೂರ್ತಿಯನ್ನಿತ್ತು ಬ್ರಹ್ಮವು ಸರ್ವಜಗತ್ತಿಗೆ ನಿರ್ವಾಹಕ ವಾದ್ದರಿಂದ ಇಲ್ಲಿ ನಿಮಿತ್ತವೆಂದು ಹೇಳಿರುವರು. ಎಂತೆಂದರೆ—ಜನಗಳ ಬಾಹ್ಯ ಚೇಷ್ಟೆಗೆ ನಿಮಿತ್ತವಾಗಿ ಸೂರ್ಯನಿರುವಂತೆ ಸರ್ವವ್ಯವಹಾರಕ್ಕೆ ನಿಮಿತ್ತವಾಗಿ ಬ್ರಹ್ಮವಿರುವದು. ಆ ಬ್ರಹ್ಮವು ಸರ್ವವಿಶ್ವವಂ ಧರಿಸಿಕ್ಕೊಂಡಿರುವದು. ಸದಾ ಅಸಂಗವಾಗಿರುವದು. ಮತ್ತು ಸರ್ವವ್ಯಾಪಕವಾಗಿದ್ದರೂ ನಿರ್ಲೇಪವಾಗಿರುವದು. ಸರ್ವಶರೀರದಲ್ಲಿರುತ್ತಿದ್ದರೂ ಅಶರೀರವಾಗಿರುವದು. ಆದ್ದರಿಂದ ‹ ಅದ್ಭುತ › ಅಂದರೆ, ಆಶ್ಚರ್ಯರೂಪವಾಗಿರುವದು.

ಮತ್ತು ಅದನ್ನು ಪೇಳುವವನೂ, ತಿಳಿಯುವವನೂ ಕೂಡ, ಆಶ್ಚರ್ಯ ರೂಪವೆಂದು ಕಠೋಪನಿಷತ್ತಿನಲ್ಲಿ ಪೇಳಿರುವದು.

ಆ ಬ್ರಹ್ಮದಲ್ಲಿ ಸೂರ್ಯ ರಶ್ಮೀಯಿಂದಾರೋಪಿತವಾದ ಮರುಜಲದಂತೆ ಕಲ್ಪಿತವಾದ ಅವಿದ್ಯೆಯ ವಿಲಾಸವಿರುವದು. ಅದು ಬ್ರಹ್ಮಾನಂದದಲ್ಲಿ ನಿಮಗ್ನನಾದ ಪುರುಷನಿಗೆ ಭಾನವಾಗುವದಿಲ್ಲ; ಈ ಮಾತು " **ಯತ್ರಸರ್ವಾತ್ಮೈವಾ ಭೂತ್ತತ್ರಕೇನಕಂ ಪಶ್ಯೇತ್** " ಇತ್ಯಾದಿ ಶೃತಿಯಲ್ಲಿಯೂ, ಪೇಳಿರುವದು. ಅವನಿಗೆ ಒಂದು ಭೂಮಾನಂದವೇ ಭಾನವಾಗುತ್ತಿರುವದು. ಆ ಭೂಮದಲ್ಲಿ ದ್ವೈತಕಲ್ಪನೆಯೂ ಇಲ್ಲ; ಅದನ್ನು

" **ಯತ್ರನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯತ್ ವಿಜಾನಾತಿ ಸಭೂಮಾ** ".

ಈ ಛಾಂದೋಗ್ಯದೊಳಗಣ ಭೂಮಾ ವಿದ್ಯದಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಪುನಃ ಅಲ್ಲಿಯೇ " **ಯೋವೈಭೂಮಾತತ್ಸುಖಂ** " ಈ ಶೃತಿಯು ಆ ಭೂಮಾ ಸುಖರೂಪವೆಂದು ಪೇಳಿರುವದು. ಆ ಸುಖವು " **ಅನಿರ್ದೇಶ್ಯಂ ಪರಂಸುಖಂ** " ಈ ಕಠಶೃತಿಯಲ್ಲಿ ಅನಿರ್ದೇಶ್ಯವೆಂದೂ ಮತ್ತು ನಿರತಿಶಯಾನಂದವೆಂದೂ ಪೇಳಿರುವದು. ಆದ್ದರಿಂದ ಸಮುದ್ರದಂತೆ ಅಗಾಧವಾಗಿ, ಅಪರಿಮಾಣವಾಗಿ, ನಿರೂಪಮವಾಗಿರುವದು. ಯಾಕಂದರೆ;—ಯಾವವರ ಒಂದು ಲೇಶಮಾತ್ರವಾದ್ದು ಎಲ್ಲರಿಗಿಂತಲೂ ದೊಡ್ಡವನಾದ ಹಿರಣ್ಯಗರ್ಭನ ಆನಂದವಾಗಿರುವದೋ, ಅದನ್ನು ಪೇಳುವರು.

**ಆನಂದವಾರಿಧೇ ಸ್ವಚ್ಛಬಿಂದುಮಾತ್ರ ಮುದೀರಿತಂ ।**
**ಅತಃ ಕಥಂಹಿ ನಿರ್ದೇಶ್ಯಂ ಭವೇತ್ತತ್ಪರಮಂ ಸುಖಂ ॥**

ಆ ಬ್ರಹ್ಮಾನಂದ ಸಮುದ್ರದಲ್ಲಿ ಮುಳುಗಿದವನಿಗೆ ತುಚ್ಛವಾದ ಪ್ರಪಂಚದ ತೋರಿಕೆ ಆಗುವದಿಲ್ಲ; ಆ ಸುಖದ ಸಂಪೂರ್ಣಾಸ್ವಾದನವು ಆರನೇ ಭೂಮಿಕೆಯುಳ್ಳವನಿಗೆ ಇರುವದು. ಅದಕ್ಕಿಂತ ಕಿಂಚಿತ್ ಕಡಮೆ ಪಂಚಮೀ ಭೂಮಿಕೆಯವನಿಗೆ ಇರುವದು. ಇನ್ನು ಸಪ್ತಮೀ ಭೂಮಿಕೆಯವನಿಗಾದರೋ, ವೃತ್ತಿಯೂ ಇರುವದಿಲ್ಲ; ಆದ್ದರಿಂದ ಅದು ಅವಾಚ್ಯವಾಗಿರುವದು. ಇವು ಮೂರು ಜೀವನ್ಮುಕ್ತರ ರಮಣಪದವಾಗಿರುವವು. ಅದನ್ನು

ರಸೋವೈಸಃ ರಸಂಹ್ಯೇವಾಯಂ ಲಬ್ಧ್ವಾಽಽನಂದೀಭವತಿ |
ಸಮೋದತೇ ಮೋದನೀಯಂ ಲಬ್ಧ್ವಾ | ಆತ್ಮಕ್ರೀಡ ಆತ್ಮ
ರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ ||

"ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ" ಇತ್ಯಾದಿ ಶೃತಿಸ್ಮೃತಿಗಳಲ್ಲಿ ಸ್ಪಷ್ಟವಾಗಿ ಪೇಳಿರುವದು. ಅಮೃತಪಾನವಂ ಮಾಡಿದ ಮೂಕಮುನಿಯಂತೆ ಅನ್ನುವದರಿಂದ ಆ ಸುಖವು ಅವಾಚ್ಯವಾಗಿರುವದು. ಇಂಥಾ ಯಾವ ಆನಂದ ಸಮುದ್ರವಾದ ನಿತ್ಯಪರಂ ಬ್ರಹ್ಮವುಂಟೋ, ಅದೇ ನಾನಾಗಿರುವೆನು. ಇದು ಎಂಟನೇ ಶ್ಲೋಕದ ಅರ್ಥವು. ||೮||

## || ೭ || ಅಥ ಟೀಕಾಕಾರ ಕೃತ ಇಷ್ಟಪ್ರಾರ್ಥನಂ.

ಶ್ಲೋ|| ನಾರಾಯಣ ಸಮಸ್ತುಭ್ಯಂ ನಿಜಾನಂ ವೇನಯಾಸ್ವಮಾಂ |
ವೇನಾದ್ಯಾಸ್ತ್ವತ್ಪ್ರಸಾದೇನ ಪರಮಾನಂದ ಮಾಗತಾಃ ||

ವೇನಗಂಧರ್ವರಿಗೆ ನಾರಾಯಣನ ಪ್ರಸಾದದಿಂದ ಪರಮಾನಂದದ ಲಾಭವಾದುದೆಂದು ಉಪನಿಷತ್ತಿನಲ್ಲಿ ಪ್ರಸಿದ್ಧವಾಗಿ ಪೇಳಿರುವದು. || ಓಂ ||

ಅ—ಹಿಂದೆ ಗಂಥ ಸಂದರ್ಭದಿಂದ ಜಿಜ್ಞಾಸುವಿಗೆ ಯಾವದು ಮಾಡತಕ್ಕದ್ದೋ, ತಿಳಿಯತಕ್ಕದ್ದೋ, ಹೊಂದತಕ್ಕದ್ದೋ ಅದನ್ನು ವಿಸ್ತಾರವಾಗಿ ಪ್ರತಿಪಾದಿಸಿದರು. ಈಗ ಈ ಅಂತ್ಯ ಶ್ಲೋಕದಿಂದ ಈ ವಿಜ್ಞಾನ ನೌಕೆಯ ಪಠನಾದಿಗಳ ಫಲವನ್ನು ಆಚಾರ್ಯರು ಪೇಳುತ್ತಾರೆ.

## || ೮ || ಗ್ರಂಥಪಠನಾದಿ ಫಲನಿರೂಪಣಂ.

—: ಸ್ವರೂಪಾನುಸಂಧಾನ ರೂಪಾಮಿತಿ :—

ಮೂ—ಸ್ವರೂಪಾನುಸಂಧಾನರೂಪಾಂ ಸ್ತುತಿಂ ಯಃ |
ಪಠೇದಾದರಾದ್ಭಕ್ತಿಭಾವೋ ಮನುಷ್ಯಃ ||

ಶೃಣೋತೀಹವಾ ನಿತ್ಯಮುದ್ಯುಕ್ತಚಿತ್ತೋ।
ಭವೇದ್ವಿಷ್ಣುರತ್ರೈವ ವೇದ ಪ್ರಮಾಣಾತ್ ||೯||

ಯಾವ ಮನುಷ್ಯನು ಸ್ವರೂಪಾನುಸಂಧಾನ ರೂಪವಾದ ಮತ್ತು ಸ್ತುತ್ಯಾತ್ಮಕವಾದ ಈ "ವಿಜ್ಞಾನ ನೌಕಾ" ಎಂಬ ನಾಮವುಳ್ಳ ಗ್ರಂಥವನ್ನು ಭಕ್ತಿಭಾವಿತನಾಗಿ, ಪ್ರಯತ್ನವುಳ್ಳ ಚಿತ್ತನಾಗಿ, ನಿತ್ಯವೂ ಇದನ್ನು ಪ್ರೋದುವನೋ, ಅಥವಾ ಕೇಳುವನೋ, ಅವನು ವೇದಪ್ರಮಾಣದಿಂದ ಇಲ್ಲಿಯೇ ವಿಷ್ಣುಸ್ವರೂಪನಾಗುವನು. ಇದು ಪದದ ಅರ್ಥ.

ಟೀಕಾ:—ನರದೇಹಕ್ಕಿಂತ ಇತರ ದೇಹಗಳಲ್ಲಿ ಜ್ಞಾನಾಧಿಕಾರವಿಲ್ಲವೆಂದು ಸೂಚಿಸಲೋಸುಗ ಇಲ್ಲಿ "ಮನುಷ್ಯಃ" ಎಂದು ಪೇಳಿರುವರು. ಆ ಮನುಷ್ಯರಲ್ಲಿಯೂ ಯಾವನು ಧರ್ಮಾರ್ಥಕಾಮನಿಮಿತ್ತವಾಗಿ ಯತ್ನವಂ ಮಾಡುವನೋ, ಅವನು ಪಶುಪ್ರಾಯನಾದ ನರಾಕೃತಿಯೆನಿಸುವನು. ಮತ್ಯಾವನು ಮೋಕ್ಷಕೋಸುಗ ಯತ್ನವುಳ್ಳವನೋ, ಅವನೇ ಮುಖ್ಯ ಮನುಷ್ಯನೆನಿಸುವನು. ಹೀಗೆ ಯಾವ ಅಧಿಕಾರಿಯು ಭಕ್ತಿಭಾವಿತ ಚಿತ್ತನಾಗಿ, ಜ್ಞಾನಿಯಾದ ಗುರುವಿನಿಂದ ಓದುವನೋ, ಅಥವಾ ಆದರದಿಂದ ಕೇಳುವನೋ, ಅವನು ಪರರು ಫಲಭಾಗಿಯಾಗುವನು. (ಟಿ) ಇಲ್ಲಿ ಭಕ್ತಿಭಾವಿತನೆಂದು ಪೇಳಿದ್ದರಿಂದ ಏನು ತಿಳಿಯಪಡಿಸಿದರೆಂದರೆ;—ಈಶ್ವರ ಗುರುಭಕ್ತಿಯಿಂದೊಡಗೂಡಿದ ಚಿತ್ತವುಳ್ಳವನಿಗೇನೆ ಜನ್ಮಾಗಿ ತತ್ವಜ್ಞಾನವಾಗುವದು. ಅನ್ಯನಿಗೆ ಆಗುವದಿಲ್ಲ.

[೧] ಭಕ್ತಿ ಪ್ರಶಾಂಸೇ:—

ಈಶ್ವರ ಭಕ್ತಿಯು ನಿರ್ಗುಣ, ಸಗುಣ ಭೇದದಿಂದ ಎರಡು ಪ್ರಕಾರವಾಗಿ ಪೇಳಿರುವದು. ಅದನ್ನು

(೧) ಪರಾ,

(೨) ಅಪರಾ, ಎಂತಲೂ ಪೇಳಿರುವರು. ಎಂತೆಂದರೆ;—"ಪರಾನುರಕ್ತಿರೀಶ್ವರೇ—ಮದ್ಭಕ್ತಿಂ ಲಭತೇ ಪರಾಂ—ಅಹೇತುಕ್ಯ ವ್ಯವಹಿತಾ ಯಾ ಭಕ್ತಿಃ ಪುರುಷೋತ್ತಮೇ। ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯತ್ಯುದಾಹೃತಂ ॥ ಇತ್ಯಾದಿ ಸೂತ್ರಸ್ಮೃತಿ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿ ಪೇಳಿರುವವು.

ಬಳಿಕ ಸಗುಣಭಕ್ತಿಯೂ ಕೂಡ, ಅಂಗೀ ಅಂಗಭೇದದಿಂದ ದ್ವಿವಿಧವಾಗಿರುವದು. ಪ್ರೇಮಲಕ್ಷಣಾ ಅಂಗೀ ಎನಿಸುವದು. ಮತ್ತು ಶ್ರವಣಕೀರ್ತ

ನಾದಿ ಒಂಭತ್ತು ಬಗೆಗಳು ಅಂಗರೂಪವೆನಿಸುವವು. ಆ ಒಂಭತ್ತು ಯಾವ ವೆಂದರೆ;—

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥

ಈ ವಚನದಿಂದ ಶಾಸ್ತ್ರಗಳಲ್ಲಿ ಪ್ರಸಿದ್ಧಪಡಿಸಿರುವದು. ಆ ನವ ವಿಧದ ಒಂ ದೊಂದು ಅಂಗದ ಸಂಪಾದನೆಯಿಂದ (೧) ಪರೀಕ್ಷಿತ್. (೨) ಶುಕದೇವ, (೩) ಪ್ರಹ್ಲಾದ, (೪) ಕಮಲಾ, (೫) ಪೃಥು, (೬) ಅಕ್ರೂರ, (೭) ಹನುಮಂತ, (೮) ಅರ್ಜುನ, (೯) ಬಲಿ, ಈ ಒಂಭತ್ತು ಜನಗಳು ಜ್ಞಾನಮಾರ್ಗದಿಂದ ಕೈ ವಲ್ಯವಂ ಪಡೆದುಕೊಂಡರು. ಅದನ್ನು ಪೇಳುವರು—

ಶ್ಲೋ॥ ಶ್ರೀಕಾಂತ ಶ್ರವಣೇ ಪರೀಕ್ಷಿತರಭೂದ್ವೈಯಾಸಕಿಃ ಕೀ
ರ್ತನೇ ಪ್ರಹ್ಲಾದಸ್ಮರಣೇ, ತದಂಘ್ರಿ ಭಜನೇ ಲಕ್ಷ್ಮೀಃ,
ಪೃಥುಃಪೂಜನೇ ॥ ಅಕ್ರೂರಸ್ತ್ವಭಿವಂದನೇ, ಕಪಿಪತಿ
ರ್ದಾಸ್ಯೇಽಥ ಸಖ್ಯೇಽರ್ಜುನಃ ಸರ್ವಸ್ವಾತ್ಮನಿವೇದನೇ
ಬಲಿರಭೂತ್ಕೈವಲ್ಯಮೇಕೈಕತಃ ॥ ಇತಿ ॥

ಬಳಿಕ (೧) ಈಶ್ವರಭಕ್ತಿಗೆ ಅದ್ಭುತಮಹಿಮೆ ಇರುವಂತೆ ಗುರುಭಕ್ತಿಗೂ ಅದ್ಭುತಮಹಿಮೆ ಇರುವದು. ಆದ್ದರಿಂದ ನಿಶ್ರೇಯಸಕಾಮಿಯಾದವನು ಈಶ್ವ ರನಿಗೆ ಸಮಾನವಾಗಿ ಗುರುಭಕ್ತಿಯಂ ಮಾಡತಕ್ಕದ್ದು. ಅದನ್ನು “ ಯಸ್ಯದೇ ವೇಪರಾಭಕ್ತಿರ್ಯಥಾ ದೇವೇತಥಾ ಗುರೌ ” ಈ ಶೃತಿಯಲ್ಲಿ ಪ್ರಸಿದ್ಧವಾಗಿ ಪೇಳಿರುವದು.

(೨) ಈಶ್ವರ ಗುರುಭಕ್ತಿಯು ವಿದ್ಯಾಪ್ರಾಪ್ತಿಗೆ ಅಂತರಂಗ ಸಾಧನವೆನಿ ಸುವದು. ಆದಕಾರಣ ಅಧ್ಯಯನದಲ್ಲಿಯೂ, ಶ್ರವಣದಲ್ಲಿಯೂ ‘ ಭಕ್ತಿಭಾವ’ ಪದವಂ ಪ್ರಯೋಗಿಸಿರುವರು. ಮತ್ತು ‘ ಉದ್ಯುಕ್ತಚಿತ್ತ ’ ಮೆನ್ನುವದರಿಂದ ಪ್ರ ಯತ್ನೋತ್ಕರ್ಷತೆಯಂ ಬೋಧಿಸಿರುವರು. ಯಾಕೆಂದರೆ;—ಶಿಥಿಲ ಯತ್ನದವ ನಿಂದ ಪ್ರಯೋಜನ ಸಿದ್ಧಿಯಾಗುವದಿಲ್ಲ. ಮತ್ತೇನೆಂದರೆ—ಪ್ರಬಲಯತ್ನ ಉಳ್ಳ ಪುರುಷವ್ಯಾಘ್ರನೇ ಪರಮಸಿದ್ಧಿಯಂ ಪೊಂದುವನು. ಅದನ್ನು ಪೇಳುವರು.

“ ಇದಂ ಸುದುರ್ಲಭಂ ಜ್ಞಾನಂ ಪುರುಷವ್ಯಾಘ್ರೇಣಲಭ್ಯತೇ”

ಇಂತೆನ್ನುವದರಿಂದ ಶ್ರವಣಾದಿ ಸಾಧನದಲ್ಲಿಯೂ ತತ್ಸಾಧ್ಯವಾದ ಬ್ರಹ್ಮನಿಷ್ಠೆ ಯಲ್ಲಿಯೂ ಪ್ರಮಾದವಂ ಮಾಡಲಾಗದು. ಅದನ್ನು “ ಪ್ರಮಾದೋವೈ ಮೃತ್ಯುಮಹಂ ಬ್ರವೀಮಿ ” ಈ ಸನತ್ಸುಜಾತವಚನದಿಂದಲೂ,

" ಪ್ರಮಾದೋಬ್ರಹ್ಮನಿಷ್ಠಾಯಾಂ ನಕರ್ತವ್ಯಃಕದಾಚನ "
ಈ ಶಾಸ್ತ್ರವಚನದಿಂದಲೂ, "ಶ್ರದ್ಧಾವಾನ್ ಲಭತೇಜ್ಞಾನಂ" ಈ ಗೀತಾ ವಾಕ್ಯದಿಂದಲೂ, ಪ್ರಸಿದ್ಧವಾಗಿ ಪೇಳಿರುವರು. ಆದ್ದರಿಂದ ಅತಿ ಯತ್ನಪೂರ್ವಕವಾಗಿ ಈ ಗ್ರಂಥದ ಅಧ್ಯಯನವಂ ಮಾಡತಕ್ಕದ್ದು. ಮತ್ತು

(೩) ಬುದ್ಧಿಮಾಂದ್ಯವೆಂಬ ದೋಷವಿದ್ದರೆ, ಸಾದರದಿಂದ ನಿತ್ಯವೂ ಶ್ರವಣವಂ ಮಾಡಬೇಕು. ಅದರಿಂದಲೂ ಜ್ಞಾನವಾಗಿ ಮೋಕ್ಷವಾಗುವದು. ಈ ಮಾತು "ತೇಪಿಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ" ಈ ವಾಕ್ಯದಿಂ ಗೀತೆಯಲ್ಲಿ ಪ್ರಸಿದ್ಧಪಡಿಸಿರುವದು. ಆದ್ದರಿಂದ ಪೇಳುವವನೂ ಕೇಳುವವನೂ ಇಬ್ಬರೂ ಮೋಕ್ಷಕ್ಕೆ ಭಾಗಿಗಳಾಗುವರು. ಮತ್ತು

ಶಂಕಾ, ಸಮಾಧಾನ:—ಯಾವನಾದರೂ ಬಬ್ಬನು ದೊಡ್ಡದಾದ ಶಾರೀರಕಾದಿ ವೇದಾಂತ ಗ್ರಂಥಗಳಿಂದ ಜ್ಞಾನವಾಗುವದು. ಈ ಅಲ್ಪ ಸ್ಮೃತಿ ರೂಪವಾದ ಗ್ರಂಥಗಳಿಂದ ಸಮ್ಯಕ್ ಜ್ಞಾನವಾಗುವದಿಲ್ಲ, ಅಂದರೆ;—

॥ ೯ ॥ ಈ ಗ್ರಂಥದ ಸರ್ವೋತ್ಕೃಷ್ಟತೆ.

ಅದನ್ನು ಕೇಳು! ಯಾವ ಶಾರೀರಕಾದಿ ಸರ್ವ ವೇದಾಂತಗ್ರಂಥಗಳ ಸಾರವುಂಟೋ, ಆ ಸರ್ವವೂ ದಧಿಯಿಂದ ಘೃತೋದ್ಧಾರದಂತೆ ಈ "ವಿಜ್ಞಾನನೌಕೆ" ಯಲ್ಲಿ ಸ್ಥಾಪಿಸಲ್ಪಟ್ಟಿರುವದು. ಎಂತೆಂದರೆ—ಛಾಂದೋಗ್ಯೋಪನಿಷತ್ತಿನ ಆರನೇ ಪ್ರಪಾಠಕದಲ್ಲಿ " ತತ್ತ್ವಮಸಿ " ಮಹಾವಾಕ್ಯದ ನವಾಭ್ಯಾಸವಿರುವಂತೆ ಇವರಲ್ಲಿ ಯಜುರ್ವೇದದೊಳಗಣ " ಅಹಂ ಬ್ರಹ್ಮಾಸ್ಮಿ " ಎಂಬ ವಿದ್ವಾನುವಿನ ಅನುಭವರೂಪವಾದ ನವಾ (೯) ಭ್ಯಾಸವಿರುವದು.

ಅರ್ಥವೇನೆಂದರೆ;—ಸ್ವರೂಪಾನುಸಂಧಾನರೂಪವಾಗಿ ಈ ವಿಜ್ಞಾನನೌಕೆ ಇರುವದು. ಇದರಲ್ಲಿ ಸಂಪೂರ್ಣ ವೇದಾಂತ ಪ್ರಕ್ರಿಯದ ಸೂಚನೆಯನ್ನು ಶ್ರೀಮದಾಚಾರ್ಯರು ಮಾಡಿರುವರು. ಆದರ ವ್ಯಾಖ್ಯಾನದೊಳ್ ನಾನು ಯಥಾಮತಿ ಶುಭಕರ್ಮ ಮೊದಲುಗೊಂಡು ಸಮಾಧಿಯ ಪರ್ಯಂತರ ಸರ್ವಸಾಧನಗಳನ್ನೂ ಮತ್ತು ಬೋಧೋಪಯೋಗಿಯಾದ ಪದಾರ್ಥಗಳ

೧—ಉದ್ದೇಶ,
೨—ವಿಭಾಗ,
೩—ಲಕ್ಷಣ,
೪—ಪರೀಕ್ಷಾಪೂರ್ವಕವಾಗಿ, ವರ್ಣಿಸಲ್ಪಟ್ಟಿರುವೆನು; ಅದರಲ್ಲಿ—

೧—ನಾಮದಿಂದ ಪದಾರ್ಥದ ಕಥನೆಗೆ "ಉದ್ದೇಶ" ವೆಂದೆನ್ನುವರು.

೨—ಅದರ ಅವಾಂತರ ಭೇದವರ್ಣನೆಗೆ "ವಿಭಾಗ" ವೆಂದೆನ್ನುವರು.

೩—ವಸ್ತುವಿನ ಅಸಾಧಾರಣ ಧರ್ಮವು "ಲಕ್ಷಣ" ವೆನಿಸಿಕ್ಕೊಳ್ಳುವದು. ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವ ಈ ದೋಷದಿಂ ರಹಿತವಾದಂಥಾದ್ದು ಪದಾರ್ಥ (ಸತ್) ಲಕ್ಷಣವೆಂದು ಪೇಳಲ್ಪಡುವದು. ಅದರಿಂ ಭಿನ್ನವಾದ್ದು "ಅಸಲ್ಲಕ್ಷಣ" ವೆನಿಸಿಕ್ಕೊಳ್ಳುವದು.

೪—ಆಕ್ಷೇಪ ಸಮಾಧಾನಪೂರ್ವಕ, ಪ್ರಮಾಣಯುಕ್ತಿಯಿಂದ ಪದಾರ್ಥವಂ ನಿರ್ಣೈಸುವದಕ್ಕೆ ಪರೀಕ್ಷೆಯೆಂದೆನ್ನುವರು.

ಮತ್ತು ಈ ಗ್ರಂಥದೊಳಗೆ ಪ್ರತಿಶ್ಲೋಕದಲ್ಲೂ ಸ್ವರೂಪಚಿಂತನೆ ಇರುವದರಿಂದ ಇದರ ಪಾಠಮಾತ್ರದಿಂದಲೇ ಸರ್ವಪಾಪಗಳೂ ನಿವೃತ್ತಿಯಾಗುವವು.

ಇದನ್ನು ಯಾವನು ಜ್ಞಾನಿಯಾದ ಗುರುವಿನಿಂದ ಆದರಸಹಿತನಾಗಿ ಪಠಿಸುವನೋ, ಅಥವಾ ಕೇಳುವನೋ, ಅವನು ಈ ಲೋಕದೊಳ್ ಜೀವಿಸುತ್ತಿರುವಲ್ಲಿಯೇ ವಿಷ್ಣುಸ್ವರೂಪನಾಗುವನು.

ಶಂಕಾ, ಸಮಾಧಾನ:—ಯಾವನಾದರೂ ಒಬ್ಬನು ವಿಷ್ಣುವಿನ ಪ್ರಾಪ್ತಿಯು ಉಪಾಸನೆಯಿಂದಾಗುವದೆಂದು ಕೇಳಲ್ಪಟ್ಟಿದೆ, ಜ್ಞಾನದಿಂದಲ್ಲ; ಎಂದರೆ;—ಅದನ್ನು ಕೇಳು! ಹ್ಯಾಗೂ ವೈಕುಂಠದಲ್ಲಿರುವ ವಿಷ್ಣುವಿಗ್ರಹದ ಪ್ರಾಪ್ತಿಯಂತು ಉಪಾಸನೆಯಿಂದ ಉಪನಿಷತ್ತುಗಳಲ್ಲಿಯೂ ಪುರಾಣಗಳಲ್ಲಿಯೂ ಪೇಳಿರುವವು. ಆದರೂ ಅದು ವಿಷ್ಣುವಿನ ಪರಮಾರ್ಥ ಸ್ವರೂಪವಲ್ಲ; ಮತ್ತೇನೆಂದರೆ;—ಮಾಯಾರಚಿತಮೂರ್ತಿಯಾಗಿರುವದು. ಅದನ್ನು "**ಮಾಯಾ ಏಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ**" ಈ ವಚನದಿಂದ ಭಗವಂತನು ತಾನೆ ಸ್ವಯಮಾಗಿ ಪೇಳಿರುವನು.

ಮತ್ತು ವಿಷ್ಣುವಿನ ವಾಸ್ತವ ಸ್ವರೂಪವು ವ್ಯಾಪಕಶೀಲವಾದ ಪರಬ್ರಹ್ಮವೇ ಆಗಿದೆ. ಅದನ್ನು ಜ್ಞಾನವಂತನು ಪಡೆದುಕ್ಕೊಳ್ಳುವನು. ಆ ಪ್ರಾಪ್ತಿಯಾದರೂ ಉಪಾಸಕನಂತೆ ಸಾಲೋಕ್ಯಸಾಮಿಪ್ಯಾದಿ ಚತುರ್ವಿಧ ಮುಕ್ತಿರೂಪವಲ್ಲ; ಮತ್ತೇನೆಂದರೆ;—ವ್ಯಾಪಕರೂಪನಾದ ವಿಷ್ಣುವೇ ನಾನು; ಹೀಗೆ ಸ್ವಸ್ವರೂಪದಿಂ ಪೊಂದಿರುವದು. ಮತ್ತು

ಶಂಕಾ, ಸಮಾಧಾನ:—ಯಾವನಾದರೂ ಒಬ್ಬನು ಅದರ ವಿಷಯದಲ್ಲಿ ಪ್ರಮಾಣವಿಲ್ಲ. ಎಂದರೆ;—ಆ ಮಾತು ಸರಿಯಲ್ಲ. ವೇದ ಪ್ರಮಾಣದಿಂದ

ಬ್ರಹ್ಮವೇತ್ತನಿಗೆ ವಿಷ್ಣುರೂಪತ್ವ ಸಿದ್ಧವಾಗಿದೆ. ಆ ಪ್ರಮಾಣವ್ಯಾವದೆಂದರೆ;— "ಯ ಏವಂ ವೇದ ಸ ವಿಷ್ಣುರೇವ ಭವತಿ—ಬ್ರಹ್ಮವಿದ್ಬ್ರಹ್ಮೈವ ಭವತಿ— ಬ್ರಹ್ಮವಿದಾಪ್ನೋತಿ ಪರಂ—ತರತಿ ಶೋಕಮಾತ್ಮವಿತ್" ಇತ್ಯಾದಿ ಶೃತಿಗಳೇ ಪ್ರಮಾಣ. ಇದರಲ್ಲಿ ಪ್ರಸಿದ್ಧವಾಗಿ ಪೇಳಿಅುವವು.

ಇನ್ನು ಆ ಬ್ರಹ್ಮಭಾವದ ಪ್ರಾಪ್ತಿಯೆಂಬ ಕೈವಲ್ಯ ಮೋಕ್ಷವೂ ಕೂಡ, ದೇಹಪಾತಾನಂತರವಲ್ಲ; ಮತ್ತೇನೆಂದರೆ;—ಜೀವಿತಾವಸ್ಥೆಯಲ್ಲಿಯೆ ಆಗುವದು. ಅದನ್ನು "ಅತ್ರ ಬ್ರಹ್ಮ ಸಮಶ್ನುತೆ" ಇತ್ಯಾದಿ ಶೃತಿಯಲ್ಲಿ ಪ್ರಸಿದ್ಧವಾಗಿ ಪೇಳಿರುವದು. ಮತ್ತು "ತಸ್ಯತಾವಚ್ಚಿರಂ ಯಾವನ್ನ ವಿಮೋಕ್ಷಃ— ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ—ಪ್ರಾರಬ್ಧನಾಶಾತ್ಪ್ರತಿಭಾಸನಾಶಃ" ಇತ್ಯಾದಿ ಶೃತಿಗಳಲ್ಲಿ ಪ್ರಾರಬ್ಧಕ್ಷಯವಾಗಲು ವಿದೇಹಮೋಕ್ಷವಂ ಪೇಳಿಅುವದು. ಬಳಿಕ ಆ ಮುಕ್ತನಾದ ಜ್ಞಾನಿಯೇ ಮುಕ್ತಿಯಂ ಪೊಂದುವನೆಂದು "ವಿಮುಕ್ತಶ್ಚ ವಿಮುಚ್ಯತೆ—ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ" ಇತ್ಯಾದಿ ಶೃತಿಗಳಲ್ಲಿ ಪ್ರಸಿದ್ಧಪಡಿಸಿರುವದು. ತಾತ್ಪರ್ಯವೇನೆಂದರೆ—

## [೧] ಜೀವನ್ಮುಕ್ತನ ಸ್ವರೂಪ.

ಆವರಣ ವಿಕ್ಷೇಪರಹಿತನಾಗಿ ಪ್ರಾಣಸಹಿತನಾದ ಬ್ರಹ್ಮನಿಷ್ಠನು ಜೀವನ್ಮುಕ್ತನೆಂದು ಪೇಳಲ್ಪಡುವನು.

## [೨] ವಿದೇಹ ಮುಕ್ತನ ಸ್ವರೂಪ.

ಮತ್ತು ಪ್ರಕಾಶರೂಪವಾದ ಬ್ರಹ್ಮದಲ್ಲಿ ಅಂತಃಕರಣ ಸಹಿತವಾದ ಪ್ರಾಣದ ವಿಲಯದವನು ವಿದೇಹ ಮುಕ್ತನೆನಿಸಿಕೊಳ್ಳುವನು.

ಈ ವಿದೇಹ ಮುಕ್ತನ ಪ್ರಾಣವು ದೇಹಾಂತರದಲ್ಲಾಗಲೀ ಅಥವಾ ಲೋಕಾಂತರದಲ್ಲಾಗಲೀ ಹೋಗುವದಿಲ್ಲ. ಮತ್ತೇನೆಂದರೆ;—ಇಲ್ಲಿ ಶರೀರದ ಅಂತರದಲ್ಲಿಯೇ ಲಯವಾಗುವದು. ಆದ್ದರಿಂದ ಅವನಿಗೆ ಪುನಃ ಸಂಸಾರವಾಗುವದಿಲ್ಲ. ಅದನ್ನು "ನತಸ್ಯ ಪ್ರಾಣಾ ಉತ್ಕ್ರಾಮಂತೆ—ಸತುತತ್ಪದಮಾಪ್ನೋತಿಯಸ್ಮಾದ್ಭೂಯೋ ನಜಾಯತೇ—ನಸಪುನರಾವರ್ತತೆ— ಯದ್ಗತ್ವಾನ ನಿವರ್ತಂತೇ" ಇತ್ಯಾದಿ ಶೃತಿಸ್ಮೃತಿಗಳಲ್ಲಿ ಸ್ಪಷ್ಟವಾಗಿ ಪೇಳಿರುವವು. ||೯||

ಅ—ಈಗ ಬ್ರಹ್ಮವಿದ್ಯಾರೂಪವಾದ " ವಿಜ್ಞಾನ ನೌಕಾ " ಎಂಬ ನಾಮವುಳ್ಳ ಗ್ರಂಥವನ್ನವಲಂಬಿಸಿದ ಪುರುಷನ ಪ್ರಶಂಸೆಯನ್ನು ಮಾಡುವರು—

## ||೧೦|| ಅಧಿಕಾರಿಯ ಪ್ರಶಂಸೆ.

ಶ್ಲೋ|| ವಿಜ್ಞಾನನಾವಂ ಪರಿಗೃಹ್ಯಕಶ್ಚಿತ್ತರೇದ್ಯ ದಜ್ಞಾನಮಯಂ ಭವಾಬ್ಧಿಂ । ಜ್ಞಾನಾಸಿನಾ ಯೋ ಹಿ ವಿಚ್ಛಿದ್ಯತೃಷ್ಣಾಂ ವಿಷ್ಣೋಃ ಪದಂ ಯಾತಿ ಸಏವಧನ್ಯಃ ||೧೦||

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯ ವಿರಚಿತಾ ವಿಜ್ಞಾನ ನೌಕಾ ಸಮಾಪ್ತಾ.

ಇದರ ಅರ್ಥ—ಯಾವನಾದರೂ ಒಬ್ಬ ಪುರುಷನು ಈ ವಿಜ್ಞಾನನೌಕೆಯೆಂಬ ದೃಢವಾದ ಹಡಗನ್ನು ಸದ್ಗುರು ರೂಪಿಯಾದ ಕರಣಧಾರಕನ ಮೂಲಕ ಆಶ್ರೈಸಿ ಅಜ್ಞಾನ ಕಲ್ಪಿತವಾದ ಸಂಸಾರ ಸಾಗರವನ್ನು ದಾಟುವನೋ, ಮತ್ತು ಮೋಕ್ಷಮಾರ್ಗದಲ್ಲಿ ಪ್ರತಿಬಂಧಕರವಾದ ಭೋಗಗಳ ತೃಷ್ಣೆಯೆಂಬ ಮೊಸಳೆಯನ್ನು ಜ್ಞಾನವೆಂಬ ಖಡ್ಗದಿಂದ ಛೇದಿಸಿ, ಕೈವಲ್ಯಮೋಕ್ಷವೆಂಬ ವಿಷ್ಣುಪದವಂ ಪೊಂದುವನೋ, ಆ ಪುರುಷನೇ ಈ ಲೋಕದಲ್ಲಿ ಧನ್ಯನು. ವಿಷ್ಣುಪದವು ಸಂಸಾರಾಧ್ವಾನದ ಪರಂಪಾರವೆಂದು " ತದ್ವಿಷ್ಣೋಃ ಪರಮಂ ಪದಂ " ಈ ಶೃತಿಯಲ್ಲಿ ಪ್ರಸಿದ್ಧಪಡಿಸಿರುವದು. ಅದೇ ಭವಾಬ್ಧಿಯ ಪರಂಪಾರವು. ಇಲ್ಲಿ " ವಿಷ್ಣೋಃ " ಈ ಪದದಲ್ಲಿ ಷಷ್ಠೀ ವಿಭಕ್ತಿ ಇರುವದು. ಅದು ಸಂಬಂಧಾರ್ಥವಲ್ಲ; ಮತ್ತೇನೆಂದರೆ;-" ರಾಹೋಃಶಿರಃ " ಈ ನ್ಯಾಯದಿಂದ ಅಭೇದಾರ್ಥವಾಗಿರುವದು. ||೧೦||

ಅ—ಈಗ ಟೀಕಾಸಮಾಪ್ತಿಯಲ್ಲಿ ಮಂಗಳವನ್ನು ಮಾಡುವರು.

## ||೧೧|| ಉತ್ತರ ಮಂಗಳಾಚರಣ || ಗ್ರಂಥ ಸಮಾಪ್ತಿ ||

ಶ್ಲೋ|| ಅದ್ವೈತಾ ದೇಶ ಕರ್ತಾರಂ ದ್ವೈತ ಧ್ವಾಂತ ವಿನಾಶಕಂ ।
ನಮಾಮಿ ಭಾಷ್ಯಕಾರೇನಂ ವಾದಿ ಭಾಗಣ ಭಾಹರಂ ||೧||
ಶ್ರೀ ದೇವಾಖ್ಯಂ ಪರಂ ದೇವಂ ಸದ್ಗುರುಂ ಹರಿಮಾಶ್ವರಂ ।
ಸರ್ವಭೂತ ಹಿತಾಸಕ್ತಾನ್ ಸಜ್ಜನಾಂಶ್ಚ ನಮಾಮ್ಯಹಂ ||೨||
ವಿವೃತ್ತಿರ್ಜ್ಞಪ್ತಿನಾವಸ್ಯ ಭಾಷೇಯಂ ಸಾಮನಿರ್ಮಿತಾ ।
ಭಕ್ತ್ಯಾಚಾರ್ಯ ಪದೇ ಸಾವೈಪುಷ್ಪಾಂಜಲಿಸ್ಸಮರ್ಪಿತಾ ||೩||

ಶ್ರೀ ಶಂಕರ ಪದಾಂಭೋಜ ಸೇವಾ ಮುದ್ದಿಶ್ಯ ಕೇವಲಂ |
ಕೃತಾ ಟೀಕಾ ಮಯಾ ತಾಂ ಚ ವೀಕ್ಷ್ಯ ತುಷ್ಯಂತು ಸಾಧವಃ ||
ಭಕ್ತಾನಾಂ ವೀಕ್ಷ್ಯಮಾಣಾನಾಂ ಶಮಾತನೋತು ಶಂಕರಃ |
ರಾಮಾಬ್ಧಿ ನಂದ ಭೂಮಾನೇ ವಿಕ್ರಮ ಖ್ಯಾತವತ್ಸರೇ ||
ಮಾಘಮಾಸೇ ಸಿತೇ ಪಕ್ಷೇ ರಾಮಜನ್ಮ ತಿಥಾವಿತಿ ||

ಇತಿ ಶ್ರೀ ಭಗವಾನ್ ಸಾಧುವರ್ಯ ಸಾಮಾಹ್ವ ವಿದುಷಾ ವಿರಚಿತಾನು
ಭೂತ್ಯುಡುಪಾಖ್ಯ ಟೀಕಾಯಾಂ ತೃತೀಯೋಪದೇಶಃ ಸಮಾಪ್ತಾ ||

ಇದು ಶ್ರೀಮನ್ ಮಹೀಶೂರ ರಾಜಧಾನಿಯಲ್ಲಿರುವ ಶಿವಾನಂದ ಸುಬ್ರಹ್ಮಣ್ಯ
ನಿಂದ ಕನ್ನಡದೇಶದ ಮುಮುಕ್ಷುಗಳ ಪರಮಪ್ರಯೋಜನಕ್ಕೋಸುಗ
ಕನ್ನಡದಲ್ಲಿ ಭಾಷಾಂತರಮಾಡಿ ಪ್ರಕಟಿಸಲ್ಪಟ್ಟಿತು.

ಓಂ ತತ್ಸತ್ ಸಮಾಪ್ತೋಽಯಂ ಗ್ರಂಥಃ.

ಶ್ರೀ ಗುರುದೇವಾಯ ಸಚ್ಚಿದಾನಂದ ಸ್ವರೂಪಾಯ ಶ್ರೀ ಪರಮೇಶ್ವರಾಯ
ನಮೋನಮಃ. ಶ್ರೀ ಶ್ರೀ ಶ್ರೀ.



# ಓಂ.

## ಬ್ರ ಹ್ಮ ನಾ ಮಾ ವ ಳೀ.

ಶ್ರೀ ಗಣೇಶಾಯನಮಃ.

ಸಕೃಚ್ಛ್ರವಣಮಾತ್ರೇಣ ಬ್ರಹ್ಮಜ್ಞಾನಂ ಯತೋಭವೇತ್ |
ಬ್ರಹ್ಮನಾಮಾವಲೀಮಾಲಾ ಸರ್ವೇಷಾಂ ಮೋಕ್ಷಸಿದ್ಧಯೆ ||೧||

ಅಸಂಗೋಽಹ ಮಸಂಗೋಽಹ ಮಸಂಗೋಽಹಂ ಪುನಃಪುನಃ |
ಸಚ್ಚಿದಾನಂದರೂಪೋಽಹ ಮಹಮೇವಾ ಹಮವ್ಯಯಃ ||೨||

ನಿತ್ಯಶುದ್ಧವಿಮುಕ್ತೋಽಹಂ ನಿರಾಕಾರೋಽ ಹಮವ್ಯಯಃ |
ಭೂಮಾನಂದಸ್ವರೂಪೋಽಹ ಮಹಮೇವಾ ಹಮವ್ಯಯಃ ||೩||

ನಿತ್ಯೋಽಹಂ ನಿರವದ್ಯೋಽಹಂ ನಿರಾಕಾರೋಽಹಮಚ್ಯುತಃ |
ಪರಮಾನಂದರೂಪೋಽಹ ಮಹಮೇವಾ ಹಮವ್ಯಯಃ ||೪||

ಶುದ್ಧಚೈತನ್ಯರೂಪೋಽಹ ಮಾತ್ಮಾರಾಮೋಽಹಮೇವಚ |
ಅಖಂಡಾನಂದರೂಪೋಽಹ ಮಹಮೇವಾಹಮವ್ಯಯಃ ||೫||

ಪ್ರತ್ಯಕ್ ಚೈತನ್ಯರೂಪೋಽಹಂ ಶಾಂತೋಽಹಂಪ್ರಕೃತೇಃಪರಃ |
ಶಾಶ್ವತಾನಂದರೂಪೋಽಹ ಮಹಮೇವಾಹಮವ್ಯಯಃ ||೬||

ತತ್ವಾತೀತಃಪರಾತ್ಮಾಹಂ ಮಧ್ಯಾತೀತಃಪರಶ್ಶಿವಃ |
ಮಾಯಾತೀತಃಪರಂಜ್ಯೋತಿ ರಹಮೇವಾಹಮವ್ಯಯಃ ||೭||

ನಾಮರೂಪವ್ಯತೀತೋಽಹಂ ಚಿದಾಕಾರೋಽಹಮಚ್ಯುತಃ |
ಸುಖರೂಪಸ್ವರೂಪೋಽಹ ಮಹಮೇವಾಹಮವ್ಯಯಃ ||೮||

ಮಾಯಾತತ್ಕಾರ್ಯದೇಹಾದಿ ಮಮನಾಸ್ತ್ಯೇವಸರ್ವದಾ |
ಸ್ವಪ್ರಕಾಶೈಕರೂಪೋಽಹ ಮಹಮೇವಾಹಮವ್ಯಯಃ ||೯||

ಗುಣತ್ರಯವ್ಯತೀತೋಽಹಂ ಬ್ರಹ್ಮಾದೀನಾಂಚಸಾಕ್ಷ್ಯಹಂ |
ಅನಂತಾನಂದರೂಪೋಽಹ ಮಹಮೇವಾಹಮವ್ಯಯಃ ||೧೦||

ಅಂತರ್ಯಾಮಿಸ್ವರೂಪೋಽಹಂ ಕೂಟಸ್ಥಃಸರ್ವಗೋಽಸ್ಮ್ಯಹಂ |
ಪರಮಾತ್ಮಸ್ವರೂಪೋಽಹ ಮಹಮೇವಾಹಮವ್ಯಯಃ ||೧೧||

ನಿಷ್ಕಲೋಽಹಂನಿಷ್ಕ್ರಿಯೋಽಹಂ ಸರ್ವಾತ್ಮಾದ್ಯಃಸನಾತನಃ |
ಅಪರೋಕ್ಷಸ್ವರೂಪೋಽಹ ಮಹಮೇವಾಹಮವ್ಯಯಃ ||೧೨||

ದ್ವಂದ್ವಾದಿಸಾಕ್ಷಿರೂಪೋಽಹ ಮಚಲೋಽಹಂಸನಾತನಃ |
ಸರ್ವಸಾಕ್ಷಿಸ್ವರೂಪೋಽಹ ಮಹಮೇವಾಹಮವ್ಯಯಃ ||೧೩||

ಪ್ರಜ್ಞಾನಘನಏವಾಹಂ ವಿಜ್ಞಾನಘನಏವಚ |
ಅಕರ್ತಾಽಹಮಭೋಕ್ತಾಽಹ ಮಹಮೇವಾಹಮವ್ಯಯಃ ||೧೪||

ನಿರಾಧಾರಸ್ವರೂಪೋಽಹಂ ಸರ್ವಾಧಾರೋಽಹಮೇವಚ |
ಆಪ್ತಕಾಮಸ್ವರೂಪೋಽಹ ಮಹಮೇವಾಹಮವ್ಯಯಃ ||೧೫||

ತಾಪತ್ರಯವಿನಿರ್ಮುಕ್ತೋ ದೇಹತ್ರಯವಿಲಕ್ಷಣಃ |
ಅವಸ್ಥಾತ್ರಯಸಾಕ್ಷ್ಯಸ್ಮಿ ಚಾಹಮೇವಾಹಮವ್ಯಯಃ ||೧೬||

ದೃಗ್ದೃಶ್ಯೌದ್ವೌಪದಾರ್ಥೌಸ್ತಃ ಪರಸ್ಪರವಿಲಕ್ಷಣೌ |
ದೃಗ್ಬ್ರಹ್ಮದೃಶ್ಯಂಮಾಯೇತಿ ಸರ್ವವೇದಾಂತಡಿಂಡಿಮಃ ||೧೭||

ಅಹಂಸಾಕ್ಷೀತಿಯೋವಿದ್ಯಾ ದ್ವಿವಿಚ್ಯೈವಂಪುನಃಪುನಃ |
ಸಏವಮುಕ್ತಃಸೋವಿದ್ವಾ ನಿತಿವೇದಾಂತಡಿಂಡಿಮಃ ||೧೮||

ಘಟಕುಡ್ಯಾದಿಕಂಸರ್ವಂ ಮೃತ್ತಿಕಾಮಾತ್ರಮೇವಚ |
ತದ್ವದ್ಬ್ರಹ್ಮಜಗತ್ಸರ್ವ ಮಿತಿವೇದಾಂತಡಿಂಡಿಮಃ ||೧೯||

ಬ್ರಹ್ಮಸತ್ಯಂಜಗನ್ಮಿಥ್ಯಾ ಜೀವೋಬ್ರಹ್ಮೈವನಾಪರಃ |
ಅನೇನವೇದ್ಯಂಸಚ್ಛಾಸ್ತ್ರ ಮಿತಿವೇದಾಂತಡಿಂಡಿಮಃ ||೨೦||

ಅಂತರ್ಜ್ಯೋತಿರ್ಬಹಿರ್ಜ್ಯೋತಿಃ ಪ್ರತ್ಯಗ್ಜ್ಯೋತಿಃಪರಾತ್ಪರಃ |
ಜ್ಯೋತಿರ್ಜ್ಯೋತಿಸ್ಸ್ವಯಂಜ್ಯೋತಿ ರಾತ್ಮಜ್ಯೋತಿಃಶಿವೋಽಸ್ಮ್ಯಹಂ ||

ಇತಿ ಶ್ರೀ ಶಂಕರಾಚಾರ್ಯ ವಿರಚಿತ ಬ್ರಹ್ಮನಾಮಾವಲೀ ಸಮಾಪ್ತಾ.



|| ಕಾಶಿಮುಕ್ತಿವಿಚಾರ ||

ಶ್ಲೋ|| ನಾಶಾತ್ಕಾಶ್ಯಾಂ ಭವೇನ್ಮುಕ್ತಿಸ್ತಾಭ್ಯಾಂ ಭವತಿ ಕಿಂಗುರೋ ।
ಯದಾ ತಸ್ಯಾಂ ಭವೇನ್ಮುಕ್ತಿ ಜ್ಞಾನಸ್ಯ ಕೃಪಯಾತದಾ ||

ಟೀ|| ಪೂರ್ವದೋಳ್ ಒಬ್ಬಾನೊಬ್ಬ ಗುರುವು ಯಾವುದೋ ಒಂದು ಕಾಲದಲ್ಲಿ ಜ್ಞಾನಮಾರ್ಗದಿಂ ಸಂನ್ಯಾಸಕ್ಕೆ ಮುಕ್ತಿಯೆಂಬ ಫಲವಂ ಪೇಳಿದ್ದರಲ್ಲಿ ಅರ್ಧಶ್ಲೋಕದಿಂದ ಶಿಷ್ಯನು ಪ್ರಶ್ನೆಯಂ ಮಾಡುವನು—ಎಲೈ, ಗುರುವೇ! ಕಾಶಿಯಲ್ಲಿ ಮರಣದಿಂದಲೇ ಮುಕ್ತಿಯಾಗುವದಾದರೆ ಸಂನ್ಯಾಸದಿಂದಲೂ, ಜ್ಞಾನದಿಂದಲೂ ಏನು ಪ್ರಯೋಜನ ಸಿದ್ಧಿಸುವದು? ಮತ್ತು ಇನ್ನೊಂಡೆಡೆಯಲ್ಲಿಯೂ ಕಾಶಿಯಲ್ಲಿ ಮರಣದಿಂ ಮುಕ್ತಿಯಂ ಪೇಳಿರುವದು. ಎಂದು ಕೇಳುವಲ್ಲಿ, ಶ್ರೀ ಗುರುವು ಅರ್ಧಶ್ಲೋಕದಿಂದ ಉತ್ತರವಂ ಪೇಳುವರು.

ಎಲೈ, ಶಿಷ್ಯನೇ! ಕಾಶಿಯಲ್ಲಾಗುವ ಮುಕ್ತಿಯು ಜ್ಞಾನಮಾರ್ಗದಿಂದಲೇ ಆಗುವದು. ಅಂದರೆ, ಜ್ಞಾನೋಪದೇಶವಿಲ್ಲದೆ ಮುಕ್ತಿಯಾಗುವದಿಲ್ಲ. ಅದನ್ನು ಪೇಳುವರು.

ಶ್ಲೋ|| ವಾರಾಣಸ್ಯಾಂ ಪುರಾರಿಃ ಪರಮಕರುಣಯಾ ಮುಕ್ತಿದೋವಿಷ್ಣುಭಕ್ತ್ಯಾ । ಗಂಗಾಯಾಮರ್ಧದೇಹಂ ಹರಿಹರ ಸುಕವಿಂ ಪ್ರಾಹ ಕರ್ಣೇ ಕಿಲೇದಂ || ನೇಯಂ ಗಂಗಾ ನಕಾಶೀ ತ್ವಮಪಿ ನಚ ತಥಾನ್ಯೈವ ಮುಕ್ತಿರ್ನಚಾಹಂ । ಸತ್ಯಂ ಚೈತನ್ಯಮಾತ್ರಂ ಜಗದಿದಮಖಿಲಂ ಸ್ವಪ್ನವಚ್ಚ ದ್ವಿವರ್ತಂ ||

ಟೀ|| ಜ್ಞಾನಮಾರ್ಗದಿಂ ಕಾಶಿಯಲ್ಲಿ ಮುಕ್ತಿಯಾಗುವದರೋಳ್ ಪ್ರಮಾಣವಂ ಪೇಳುತ್ತಾರೆ—ಕಾಶಿಯಲ್ಲಿ ಮಹಾದೇವನು ಪರಮಕೃಪೆಯಿಂದ ಮುಕ್ತಿ

ಯಂ ಕೊಡುವಂಥಾವನಾಗಿರುವನು. ಗಂಗೆಯಲ್ಲಿ ಅರ್ಧದೇಹವಿದ್ದು ವಿಷ್ಣುವಿನಲ್ಲಿಯೂ, ಮಹಾದೇವನಲ್ಲಿಯೂ ಸಮದೃಷ್ಟಿಯುಳ್ಳ ಆ ವಿಷ್ಣುಭಗವಂತನ ಭಕ್ತರಿಗೆ ಮಹಾದೇವನು ಈ ಪ್ರಕಾರ ಕರ್ಣದಲ್ಲಿ ಪೇಳುವನು. ಏನಂದರೆ, ಎಲೈ, ಭಕ್ತನೇ ! ಈ ಗಂಗೆಯೂ ನಿತ್ಯವಲ್ಲ, ಕಾಶಿಯೂ ನಿತ್ಯವಲ್ಲ. ಮತ್ತು ನೀನು ಶರೀರದಿಂ ನಿತ್ಯವಾಗಿಲ್ಲ; ಇನ್ನು ಮುಕ್ತಿಯೂ ಕೂಡ ಅದೇನೂ ಒಂದು ವಸ್ತುವಲ್ಲ. ತಾತ್ಪರ್ಯವೇನೆಂದರೆ—ಆತ್ಮನಿಗೆ ವಾಸ್ತವದಿಂ ಬಂಧವಿರುವದಾದರೆ ಮುಕ್ತಿಯೂ ಉಂಟಾದೀತು. ಆದರೆ, ಆತ್ಮನು ನಿತ್ಯಮುಕ್ತನಾಗಿರುವನು. ಆದ್ದರಿಂದ ಮುಕ್ತಿಯೂ ಪೇಳಿಕೆ ಮಾತ್ರವೆನಿಸುವದು. ಮತ್ತು ಮಹಾದೇವನಾದ ನಾನೂ ಕೂಡ, ಶರೀರರೂಪದಿಂ ನಿತ್ಯವಾಗಿಲ್ಲ. ಈ ವಿಷಯದಲ್ಲಿ ಅಷ್ಟಾವಕ್ರಮುನಿ ಪೇಳಿದ್ದೇನೆಂದರೆ—“ ಸಾಕಾರಮನೃತಂವಿದ್ಧಿ ”

ಅರ್ಥ—ಎಲೈ, ಜನಕನೇ ! ಈ ಯಾವ ಸಾಕಾರವಿರುವದೋ, ಅದನ್ನು ನೀನು ಅಸತ್ಯವೆಂತಲೇ ತಿಳಿ !

ಅ|| ಆಕಾರದಿಂದ ಸರ್ವಕ್ಕೂ ಮಿಥ್ಯಾತ್ವವಂ ಪೇಳಿ, ಈಗ ಆತ್ಮರೂಪದಿಂದ ಎಲ್ಲಕ್ಕೂ ಸತ್ಯತ್ವವಂ ಪೇಳುವರು. ಈ ಸರ್ವ ಜಗತ್ತು ಬಾಧಾಸಾಮಾನಾಧಿಕರಣ್ಯದಿಂದ ಚೈತನ್ಯರೂಪವೇ ಆಗಿದೆ.

ಅ|| ಮರಳಿ ಸಾಕಾರಕ್ಕೆ ಮಿಥ್ಯಾತ್ವವಂ ಪೇಳುವರು. ಈ ಜಗತ್ತು ಸ್ವಪ್ನದಂತೆ ಮಿಥ್ಯವಾಗಿ ತೋರುವದು. ಎಂತೆಂದರೆ—ರಜ್ಜುವಿನ ವಿವರ್ತವಾದ ಸರ್ಪವು ರಜ್ಜುವಂ ಬಿಟ್ಟಿರದಂತೆ ಈ ಜಗತ್ತೂ ಕೂಡ ಚೈತನ್ಯದ ವಿವರ್ತವಾದ್ದರಿಂದ ಅದರಿಂ ಭಿನ್ನವಾಗಿಲ್ಲ. ಇತಿ ಶ್ರೀ ಶ್ರೀ ಶಿವೋಹಂ. ಶ್ರೀ ಶ್ರೀ.

